# ಡಾ॥ರಾಜ್‌ಕುಮಾರ್ ಅವರ ಕಾದಂಬರಿ ಆಧಾರಿತ ಚಲನಚಿತ್ರಗಳಲ್ಲಿ ಜಾನಪದೀಯ ಅಂಶಗಳು

(ಪಿ.ಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ
ಸಾದರ ಪಡಿಸಿದ ಮಹಾ ಪ್ರಬಂಧ)




ಸಂಶೋಧಕರು

**ವಿ. ಗಿರಿಜ**

ಮಾರ್ಗದರ್ಶಕರು

**ಡಾ॥ ಹೆಬ್ಬಾಲೆ ಕೆ. ನಾಗೇಶ್**

ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬





ಜಾನಪದ ಅಧ್ಯಯನ ವಿಭಾಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೮

# ಡಾ.ರಾಜ್‌ಕುಮಾರ್ ಅವರ ಕಾದಂಬರಿ ಆಧಾರಿತ ಚಲನಚಿತ್ರಗಳಲ್ಲಿ ಜಾನಪದೀಯ ಅಂಶಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ

ಮಹಾಪ್ರಬಂಧದ ಪ್ರತಿ)



ಸಂಶೋಧಕರು

**ಗಿರಿಜ.ವಿ.**

ಮಾರ್ಗದರ್ಶಕರು

**ಡಾ.ಹೆಬ್ಬಾಲೆ.ಕೆ.ನಾಗೇಶ್**

ಪ್ರಾಧ್ಯಾಪಕರು



**ಜಾನಪದ ಅಧ್ಯಯನ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೮



## ಮಾರ್ಗದರ್ಶಕರ ದೃಢೀಕರಣ ಪ್ರಮಾಣಪತ್ರ

**'ಡಾ.ರಾಜ್‌ಕುಮಾರ್ ಅವರ ಕಾದಂಬರಿ ಆಧಾರಿತ ಚಿತ್ರಗಳಲ್ಲಿ ಜಾನಪದೀಯ ಅಂಶಗಳು'** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ಗಿರಿಜ. ವಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.

**(ಡಾ. ಹೆಬ್ಬಾಲೆ. ಕೆ. ನಾಗೇಶ್)**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ದಿನಾಂಕ :
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣಪತ್ರ

**'ಡಾ.ರಾಜ್‌ಕುಮಾರ್ ಅವರ ಕಾದಂಬರಿ ಆಧಾರಿತ ಚಿತ್ರಗಳಲ್ಲಿ ಜಾನಪದೀಯ ಅಂಶಗಳು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಹೆಬ್ಬಾಲೆ. ಕೆ. ನಾಗೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಗಿರಿಜ ವಿ.)
ಸಂಶೋಧನ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ದಿನಾಂಕ :
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ಮಹತ್ವ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೩ ಅಧ್ಯಯನದ ವ್ಯಾಪ್ತಿ ಮತ್ತು ವಿಧಾನ

೧.೪ ದತ್ತಾಂಶ ಸಂಗ್ರಹಣೆ

೧.೫ ಅಧ್ಯಯನದ ಸಾಧನಗಳು

೧.೬ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ–ಒಂದು
# ಅಧ್ಯಯನದ ಉದ್ದೇಶ, ಮಹತ್ವ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ

## ೧.೧ ಪ್ರಸ್ತಾವನೆ :

ಕನ್ನಡ ಸಾಹಿತ್ಯವು ಪ್ರಾಚೀನ ಕಾಲದಿಂದಲೂ ತನ್ನ ವಿಸ್ತಾರತೆಯನ್ನು ಹಲವು ಭಿನ್ನ ಭಿನ್ನ ಪ್ರಕಾರಗಳಲ್ಲಿ ರಚಿಸಿಕೊಂಡು ಬರುತ್ತಿದೆ. ಯಾವುದೇ ಭಾಷೆಯ ಚಾರಿತ್ರಿಕ ಹಿನ್ನೆಲೆಯನ್ನು ನಾವು ಗಮನಿಸಿದಾಗ ನಮಗೆ ಅದರ ಮೂಲ ದೊರೆಯುವುದು ಜನಪದರಲ್ಲಿಯೇ. ಭಾಷೆಯನ್ನು ಜನರು ತಮ್ಮ ಜೀವನದ ಒಂದು ಅಂಗವಾಗಿ ಮಾತನಾಡಲು, ಅಭಿವ್ಯಕ್ತಿಸಲು ಸಮರ್ಥ ಸಾಧನವನ್ನಾಗಿ ಬಳಸಿಕೊಂಡಿದ್ದಾರೆ. ಆದ್ದರಿಂದಲೇ ಸಂಸ್ಕೃತದ ಕಾವ್ಯಮೀಮಾಂಸಕಾರನಾದ ದಂಡಿಯು "ಇದಮಂಧಂತಮಃ ಕೃತ್ಸ್ನಂ ಜಾಯತೇ ಭುವನತ್ರಯಂ। ಯದಿ ಶಬ್ದಾಹ್ವಯಂ ಜ್ಯೋತಿಃ ಅಸಂಸಾರಾನ್ನ ದೀಪತೇ॥"[೧] ಎಂಬುದಾಗಿ ಭಾಷೆಯ ಬಗೆಗೆ ತನ್ನ ವ್ಯಾಖ್ಯಾನವನ್ನು ನೀಡಿದ್ದಾನೆ. ಅಂದರೆ ಭಾಷೆಯೆಂಬ ಬೆಳಕು ಇಲ್ಲದಿದ್ದರೆ ಇಡೀ ಜಗತ್ತೇ ಕತ್ತಲೆಯಲ್ಲಿ ಮುಳುಗಿರುತ್ತಿತ್ತು. ಮನುಷ್ಯನಿಗೆ ತನ್ನ ವ್ಯವಹಾರಕ್ಕಾಗಿ, ತನ್ನ ಮನಸಿನ ಭಾವನೆಗಳನ್ನು ಅಭಿವ್ಯಕ್ತಪಡಿಸಲಿಕ್ಕೆ, ತನ್ನ ಆಲೋಚನೆಗಳನ್ನು ತಿಳಿಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ ಎಂಬುದಾಗಿದೆ. ಹೀಗೆ ಭಾಷೆ ಸಮರ್ಥವಾಗಿ ಬಳಸಿಕೊಂಡ ಕೀರ್ತಿ ನಮ್ಮ ಜನಪದರಿಗೆ ಸಲ್ಲುತ್ತದೆ.

ಜನಪದರು ತಮ್ಮ ದೈನಂದಿನ ಕೆಲಸ–ಕಾರ್ಯಗಳಲ್ಲಿ ಈ ರೀತಿಯಾದಂತಹ ಭಾಷೆಯ ಮೂಲಕ ಕಟ್ಟಬಹುದಾದ ಕಾವ್ಯ, ಗಾದೆ, ಒಗಟು, ಒಡಪು ಮುಂತಾದವುಗಳನ್ನು ರೂಪಿಸಿದರು. ಮೌಖಿಕವಾಗಿ ರೂಪುಗೊಂಡಂತಹ ಭಾಷೆಯಿಂದ ಸಾಹಿತ್ಯ ರೂಪಗಳು ಭಿನ್ನ ಭಿನ್ನ ಬಗೆಯಲ್ಲಿ ಅಭಿವ್ಯಕ್ತಗೊಳ್ಳಲು ಸಾಧ್ಯವಾಯಿತು. ಕನ್ನಡ ಭಾಷೆ ಅಥವಾ ಕರ್ನಾಟಕದ ಸಂಸ್ಕೃತಿಯು ತನ್ನದೇ ಆದ ವೈಶಿಷ್ಟ್ಯತೆಯನ್ನು ಮೈಗೂಡಿಸಿಕೊಂಡಿದೆ. ಇಲ್ಲಿ ನೈಸರ್ಗಿಕ ಸಂಪತ್ತು, ಸಾಹಿತ್ಯ, ಕಲೆ, ಭಾಷೆ, ಸಿನಿಮಾ, ಜನಪದ ಮತ್ತು

ಬುಡಕಟ್ಟು ಸಂಸ್ಕೃತಿಗಳು ಮುಂತಾದ ಹಲವಾರು ವಿಭಿನ್ನ ಜನ ಸಮುದಾಯದ ಸಂಸ್ಕೃತಿಯನ್ನು ಒಳಗೊಂಡಿದೆ. ಕಲೆಯ ದೃಷ್ಟಿಯಿಂದ ಗಮನಿಸುವುದಾದರೆ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ರಾಜ-ಮಹಾರಾಜರ ಕಾಲದಿಂದಲೂ ವೈಭವಪೂರ್ಣವಾಗಿರುವುದನ್ನು ಕಾಣಬಹುದು. ಅಲ್ಲದೇ ಕರ್ನಾಟಕದ ಐತಿಹಾಸಿಕ ಪ್ರವಾಸಿ ತಾಣಗಳಲ್ಲಿ ಒಡಮೂಡಿರುವ ಕಲೆ ಮತ್ತು ವಾಸ್ತುಶಿಲ್ಪವು ಕರ್ನಾಟಕವು ಕಲೆಗೆ ನೀಡಿರುವ ಸ್ಥಾನಮಾನವನ್ನು ತಿಳಿಸುತ್ತದೆ.

ಕನ್ನಡ ಅಥವಾ ಕರ್ನಾಟಕದ ಸಾಂಸ್ಕೃತಿಕ ಮಹತ್ವವನ್ನು ಕನ್ನಡ ಸಾಹಿತ್ಯವು ಕೂಡ ಹೆಚ್ಚಾಗಿ ತನ್ನಲ್ಲಿ ಒಡಮೂಡಿಸಿಕೊಂಡಿರುವುದನ್ನು ಗುರುತಿಸಬಹುದು. ಸರಿಸುಮಾರು ೨೦೦೦ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವು ನಾಡು-ನುಡಿಗೆ ವ್ಯಾಪಕವಾಗಿ ನೀಡಿರುವ ಕೊಡುಗೆಯನ್ನು ಸಹ ಗುರುತಿಸಲು ಸಾಧ್ಯವಾಗುತ್ತದೆ. ಅಲ್ಲದೇ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವಲ್ಲಿ ಸಾಹಿತ್ಯವು ಸಹ ನೀಡಿರುವ ಕೊಡುಗೆಯನ್ನು ನೋಡಬಹುದು. ಕ್ರಿ.ಶ.೪೫೦ರ ಹಲ್ಮಿಡಿ ಶಾಸನದಿಂದ ಹಿಡಿದು ಸಮಕಾಲೀನದಲ್ಲಿ ರಚನೆಯಾಗುತ್ತಿರುವ ಸಾಹಿತ್ಯವು ಕೂಡ ಅನೇಕ ಬಗೆಗಳಲ್ಲಿ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವಲ್ಲಿ ತುಂಬಾ ಮಹತ್ವದ ಪಾತ್ರವನ್ನು ವಹಿಸಿದೆ.

ಅಂತೆಯೇ ಈ ನಾಡು-ನುಡಿಯನ್ನು ಕರ್ನಾಟಕದ ಬಗೆಗೆ ಹಲವಾರು ಕವಿಗಳು ತಮ್ಮ ಕವಿತೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಕನ್ನಡ ಇಲ್ಲವೇ ಕನ್ನಡಿಗರನ್ನು ಕುರಿತಂತೆ ಶ್ರೀವಿಜಯನು ತನ್ನ 'ಕವಿರಾಜಮಾರ್ಗ'ದಲ್ಲಿ "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್" ಎಂಬುದಾಗಿ ತಿಳಿಸಿದ್ದಾನೆ. ಅಂದರೆ ಕನ್ನಡಿಗರು ಕಾವ್ಯ ಪ್ರಯೋಗ ಅಂದರೆ ಭಾಷೆಯನ್ನು ಬಳಸಿಕೊಂಡು ಹೇಗೆ ತಮ್ಮ ಬೆಳವಣಿಗೆಯನ್ನು ಸಾಹಿತ್ಯದಲ್ಲಿ ಕಂಡುಕೊಳ್ಳುವವರು ಎಂಬುದನ್ನು ಚಿತ್ರಿಸಿದ್ದಾರೆ. ಹೀಗೆಯೇ ಪಂಪನಾದಿಯಿಂದ ಹಿಡಿದು ಕುವೆಂಪು, ಬೇಂದ್ರೆ, ಲಂಕೇಶ್, ತೇಜಸ್ವಿ, ದೇವನೂರ ಮಹದೇವ ಮುಂತಾದವರು ಕನ್ನಡ ಭಾಷೆಯನ್ನು ತಮ್ಮ ಕೃತಿಗಳಲ್ಲಿ ಭಿನ್ನವಾಗಿ, ವೈಶಿಷ್ಟ್ಯಪೂರ್ಣವಾಗಿ ಬಳಸಿಕೊಂಡಿದ್ದಾರೆ.

ಸಾಹಿತ್ಯ ಮತ್ತು ಕಲೆಗೂ ತುಂಬಾ ನಿಕಟವಾದ ಸಂಪರ್ಕವನ್ನು ಕಾಣಲು ಸಾಧ್ಯವಾಗುತ್ತದೆ. ಇವೆರಡೂ ಒಂದೇ ಮುಖದ ಎರಡು ನಾಣ್ಯಗಳಿದ್ದಂತೆ. ಆದರೆ ಈ ಎರಡರ ಅಭಿವ್ಯಕ್ತಿಯ ನೆಲೆಗಳು ಮಾತ್ರ ಭಿನ್ನವಾಗಿವೆ. ಈ ಎರಡರ ಆಶಯಗಳು ಒಂದೇ ಅದರೂ ಅದನ್ನು ಅಭಿವ್ಯಕ್ತಿಸಲು ಬಳಸುವ ಮಾನದಂಡಗಳು ಮಾತ್ರ ಬೇರೆ-ಬೇರೆಯಾಗಿವೆ. ಕನ್ನಡ ಸಾಹಿತ್ಯದ ಇತಿಹಾಸವನ್ನು ಗಮನಿಸಿದಾಗ ಕಾದಂಬರಿ ಪ್ರಕಾರವು ಬೆಳೆದುಬಂದದ್ದು ಆಧುನಿಕ ಸಾಹಿತ್ಯದ ಅಂದರೆ ಹತ್ತೊಂಭತ್ತನೆಯ ಶತಮಾನದಿಂದೀಚೆಗೆ. ಪಾಶ್ಚಾತ್ಯರ ಆಗಮನದಿಂದ ಕನ್ನಡದ ಮತ್ತು ಕರ್ನಾಟಕದ ಸಾಂಸ್ಕೃತಿಕ ಪರಿಸರದಲ್ಲಿ ಮಹತ್ತರವಾದ ಬದಲಾವಣೆಗಳು ಉಂಟಾದವು. ಈ ಕಾದಂಬರಿ ಪ್ರಕಾರವು ತುಂಬಾ ವಿಶಿಷ್ಟವಾದುದು. ಆರಂಭದ ಕಾಲಘಟ್ಟದಲ್ಲಿ ಕನ್ನಡ ಸಾಹಿತ್ಯದಲ್ಲಿ ಕಾವ್ಯವೇ ಹಳೆಗನ್ನಡದ ಪ್ರಮುಖ ಕೇಂದ್ರವಾಗಿದ್ದರೂ ಆಧುನಿಕ ಪಾಶ್ಚಾತ್ಯರ ಪ್ರಭಾವ ಮತ್ತು ಪ್ರೇರಣೆಯಿಂದ ಅನೇಕ ಹೊಸ ಹೊಸ ಪ್ರಕಾರಗಳು ಕನ್ನಡ ಸಾಹಿತ್ಯದಲ್ಲಿ ರೂಪುಗೊಂಡವು.

ಸಾಹಿತ್ಯವು ತನ್ನ ರಚನೆಯಲ್ಲಿ ಸಾಮಾಜಿಕ ಪರಿಸರವನ್ನು ಅನುಲಕ್ಷಿಸಿಯೇ ರಚನೆಗೊಂಡಿರುತ್ತದೆ. ಸಮಾಜವನ್ನು ಹೊರತುಪಡಿಸಿದ ಸಾಹಿತ್ಯ ಸೃಷ್ಟಿಯನ್ನು ಊಹಿಸಲು ಅಸಾಧ್ಯ. ಕಾದಂಬರಿ ಪ್ರಕಾರವು ಸಹ ಸಮಾಜದಲ್ಲಿರುವ ಅನೇಕ ವಸ್ತುವಿಷಯಗಳನ್ನು ಮೈಗೂಡಿಸಿಕೊಂಡು ತನ್ನ ಅಭಿವ್ಯಕ್ತಿಯನ್ನು ರೂಪಿಸಿಕೊಳ್ಳಲು ಸಹಕಾರಿಯಾಯಿತು. ಅಂತೆಯೇ ಕಲೆ ಮನುಷ್ಯನ ಬದುಕಿನ ಜೀವಾಳ ಎಂದು ಪರಿಗಣಿಸಲ್ಪಟ್ಟಿದೆ. ಯಾವುದೇ ಒಂದು ಸಮಾಜದ ಮೂಲ ಬೇರು ಎಂದೇ ಗುರುತಿಸಲ್ಪಟ್ಟಿರುವ ಜನಪದ ಸಂಸ್ಕೃತಿಯಲ್ಲಿಯೂ ಸಹ ದುಡಿಮೆಯ ಜೊತೆ ಜೊತೆಯಲ್ಲಿ ಅನೇಕ ಕಲಾ ಪ್ರಕಾರಗಳು ಉದಯಿಸಿರುವುದನ್ನು ಕಾಣಬಹುದು. ಜನಪದರ ದೈನಂದಿನ ಜೀವನದಲ್ಲಿ ಕಲೆಯು ಒಂದು ಭಾಗವಾಗಿ ಹಾಸುಹೊಕ್ಕಾಗಿದೆ. ಕಲೆ ಮತ್ತು ಸಾಹಿತ್ಯಿಕ ರೂಪಗಳು ಒಂದರೊಳಗೊಂಡು ಬೆರೆತುಕೊಂಡು ಅದು ಒಂದು ನಾಟಕವಾಗಿಯೋ ಇಲ್ಲವೇ ಇನ್ನಾವುದೋ ಒಂದು ಕಲೆಯಾಗಿ ರೂಪು ಪಡೆಯುತ್ತದೆ. ಅಂತೆಯೇ ಕಲೆ ಮತ್ತು ಸಾಹಿತ್ಯ ಎರಡೂ ಒಂದಕ್ಕೊಂದು ಪೂರಕವಾಗಿ ಕೆಲಸ ನಿರ್ವಹಿಸುತ್ತವೆ.

ಜನಪದ ಸಾಹಿತ್ಯವು ಸಮೂಹ ಸೃಷ್ಟಿಯಾಗಿದೆ. ಇದು ಶಿಷ್ಟ ಸಾಹಿತ್ಯ ರೂಪುಗೊಂಡಂತೆ ಏಕವ್ಯಕ್ತಿಯಿಂದ ರೂಪುಗೊಂಡಿರುವುದಿಲ್ಲ. ಇದು ಒಬ್ಬರ ಬಾಯಿಯಿಂದ ಮತ್ತೊಬ್ಬರ ಬಾಯಿಗೆ ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಬಳುವಳಿಯಾಗಿ ಬಂದಿರುವ ಕೊಡುಗೆಯಾಗಿದೆ. ಈ ಹಂತದಲ್ಲಿ ಕಲೆಯು ಸಹ ಜನಪದರ ಭಾಗವಾಗಿ ತಮ್ಮ ದೈನಂದಿನ ಕೆಲಸ–ಕಾರ್ಯಗಳಲ್ಲಿ ಹಾಡು, ಕುಣಿತ ಮುಂತಾದ ರೂಪಗಳ ಮೂಲಕ ತಮ್ಮ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುತ್ತಿದ್ದರು. ಇಂತಹ ಅನೇಕ ಪ್ರಕಾರಗಳಲ್ಲಿ ಜನಪದರು ತಮ್ಮ ಕಲೆಗಳನ್ನು ಅಭಿವ್ಯಕ್ತಿಸಲ್ಪಟ್ಟಿದ್ದರು. ಆದರೆ ಇಂತಹ ಕಲೆಗಳನ್ನು ಮತ್ತು ಜನಪದರ ಸಾಹಿತ್ಯವನ್ನು ಒಂದು ನೆಲೆಗಟ್ಟಿನಲ್ಲಿ ಸಂಗ್ರಹಿಸುವ, ಅದನ್ನು ಸಂಪಾದಿಸುವ ಕಾರ್ಯ ಮಾತ್ರ ಸಾಧ್ಯವಾಗಿದ್ದು ಪಾಶ್ಚಾತ್ಯರು ಭಾರತಕ್ಕೆ ಬಂದು ಇಲ್ಲಿ ನೆಲೆಗೊಂಡ ನಂತರವೇ. ಪಾಶ್ಚಾತ್ಯರು ಆಳ್ವಿಕೆಯ ದೃಷ್ಟಿಯಿಂದ, ಮತಾಂತರದ ದೃಷ್ಟಿಯಿಂದ ಭಾರತಕ್ಕೆ ಬಂದರೂ ಕಾಲಾನಂತರದಲ್ಲಿ ಇಲ್ಲಿನ ಜನರ ಮನಸ್ಥಿತಿಯನ್ನು ಅರಿಯುವ ಅನಿವಾರ್ಯತೆ ಅವರಿಗೆ ಬಂದೊದಗಿತು.

ಸಿನಿಮಾ ಜನರ ಜೀವನಾಡಿಯಾಗಿ ಬೆಳೆದುಬಂದಿದೆ. ಇದು ಕೇವಲ ಅಕ್ಷರಜ್ಞಾನವನ್ನು ಹೊಂದಿರುವ ಜನರನ್ನು ಮಾತ್ರ ಒಳಗೊಳ್ಳದೇ ಅದು ಸಾಮಾನ್ಯ ಜನರನ್ನು ತನ್ನತ್ತ ಆಕರ್ಷಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ. ಸಿನಿಮಾವು ಸಹ ಸಮಾಜದ ಜನರ ಜೀವನದ ಸಾಮಾಜಿಕ ಕ್ಷೇತ್ರವನ್ನೇ ತನ್ನ ವ್ಯಾಪ್ತಿಯನ್ನಾಗಿ ಗುರುತಿಸಿಕೊಂಡಿದೆ. ಸಿನಿಮಾ ಕ್ಷೇತ್ರವು ಜನಮಾನಸದಲ್ಲಿ ಬೀರಿರುವ ಪರಿಣಾಮವನ್ನು ಇನ್ನಾವ ಕ್ಷೇತ್ರವು ಜನರ ಮನಸ್ಸಿನಲ್ಲಿ ನೆಲೆಯೂರಲು ಸಾಧ್ಯವಾಗದಂತೆ ಮಾಡಿರುವುದನ್ನು ಕಾಣಬಹುದು. ಸಿನಿಮಾಕ್ಕೆ ಮೂಲ ಪ್ರೇರಣೆಯನ್ನಾಗಿ ನಾವು ರಂಗಭೂಮಿಯ ಹಿನ್ನೆಲೆಯನ್ನು ಗಮನಿಸಬೇಕಾಗುತ್ತದೆ. ಜನಪದಕ್ಕೂ ಸಿನಿಮಾಕ್ಕೂ ಅತ್ಯಂತ ನಿಕಟ ಸಂಬಂಧವಿದೆ. ಸಿನಿಮಾ ಕ್ಷೇತ್ರ ಜನಪದ ಸಾಹಿತ್ಯವನ್ನು ಸಮೃದ್ಧವಾಗಿ ಬಳಸಿಕೊಂಡಿದೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಎರಡು ಸಾವಿರಕ್ಕೂ ಹೆಚ್ಚಿನ ಇತಿಹಾಸವಿರುವ ರಂಗಭೂಮಿಯ ಹಿನ್ನೆಲೆಯಲ್ಲಿ ಸಿನೆಮಾ ಎನ್ನುವ ಮಾಧ್ಯಮ ಹುಟ್ಟಿಕೊಂಡಿದೆ. ಗ್ರೀಕರ ರಂಗಭೂಮಿ

ಇದಕ್ಕೆ ಉತ್ತಮ ಉದಾಹರಣೆ. ಅಥೆನ್ಸ್ ನಗರದ ಬಯಲು ರಂಗಭೂಮಿ ಈಗಲೂ ವಿಶ್ವದ ಗಮನ ಸೆಳೆಯುತ್ತಿದೆ. ರಂಗಭೂಮಿಯ ಹಿನ್ನೆಲೆಯಲ್ಲಿ ಪಾಶ್ಚಾತ್ಯರಲ್ಲಿ ಅದರಲ್ಲಿಯೂ ಪ್ಯಾರಿಸ್ ನಗರದಲ್ಲಿ ಸಿನೆಮಾ ಎನ್ನುವ ಅದ್ಭುತದ ಸೃಷ್ಟಿಯಾಯಿತು. ಕ್ರಮೇಣ ಸಿನೆಮಾ ವಿಶ್ವದೆಲ್ಲೆಡೆ ಪಸರಿಸಿತು. ಹಾಗೆಯೇ ಭಾರತದಲ್ಲೂ ಪಾಶ್ಚಾತ್ಯರ ಆಗಮನ ಮತ್ತು ಅವರ ಪ್ರಭಾವ, ಪ್ರೇರಣೆಯಿಂದ ಸಿನಿಮಾವು ಹುಟ್ಟಿಕೊಂಡಿತು. ಅದೇ ರೀತಿ ದಕ್ಷಿಣ ಭಾರತದಲ್ಲಿಯ ಅನೇಕ ಭಾಷೆಗಳೂ ಸೇರಿದಂತೆ ಕನ್ನಡ ಭಾಷೆಯಲ್ಲಿಯೂ ಸಹ ಚಲನಚಿತ್ರಗಳು ಹುಟ್ಟಿಕೊಂಡವು.

ಕನ್ನಡದ ಮೊಟ್ಟಮೊದಲ ಚಲನಚಿತ್ರ 'ಸತಿ ಸುಲೋಚನ' ೧೯೩೪ರಲ್ಲಿ ಬಿಡುಗಡೆಯಾಯಿತು. ನಂತರದಲ್ಲಿ ಕನ್ನಡ ಚಲನಚಿತ್ರ ರಂಗವು ತನ್ನ ಅಗಮ್ಯ ಸಾಧನೆಯಿಂದ ವಿಶ್ವವನ್ನೇ ತನ್ನತ್ತ ನೋಡುವಂತೆ ಮಾಡಿದೆ. ಕನ್ನಡದ ಹಲವು ಚಿತ್ರಗಳು ಕನ್ನಡ ಪ್ರೇಕ್ಷಕರನ್ನಷ್ಟೇ ಅಲ್ಲದೇ ಜಗತ್ತಿನ ಜನರನ್ನು ಸಹ ತನ್ನ ಜ್ಞಾನ ಮತ್ತು ತತ್ವಗಳಿಂದ ಸಿನಿಮಾದಿಂದ ರಂಜಿಸಿದ್ದು ಈಗ ಇತಿಹಾಸ. ಸಿನಿಮಾ ಕೇವಲ ಮನೋರಂಜನೆ ಮಾತ್ರವಲ್ಲ. ಅದೊಂದು ಸಾಮಾಜಿಕ ಬದ್ಧತೆಯನ್ನು ತನ್ನೊಳಗೆ ಯಾವಾಗಲೂ ಇಟ್ಟುಕೊಂಡು ಮುನ್ನಡೆಯುತ್ತದೆ. ಇದು ಬೇರೆ ಶಿಸ್ತುಗಳಂತಲ್ಲದೇ ಮನೋರಂಜನೆಯ ಮೂಲಕ ಸಾಮಾಜಿಕವಾದ ಬದ್ಧತೆಯನ್ನು ಜನರಲ್ಲಿ ಮೂಡಿಸುವ ಪ್ರಯತ್ನವನ್ನು ಮಾಡುತ್ತಿದೆ. ರೈತರ ಸಮಸ್ಯೆ, ಮಹಿಳಾ ಮತ್ತು ಮಕ್ಕಳ ಸಮಸ್ಯೆ, ಬಡತನ, ಹಸಿವು, ರಾಜಕೀಯ, ನಿರುದ್ಯೋಗ, ಭ್ರಷ್ಟಾಚಾರ ಮುಂತಾದ ಅನೇಕ ಸಮಸ್ಯೆಗಳನ್ನು ಜನತೆಯ ಮುಂದಿಡುವ ಮೂಲಕ ಸಾಮಾಜಿಕ ಕ್ರಾಂತಿಯನ್ನು ಉಂಟು ಮಾಡುವಲ್ಲಿ ಸಿನಿಮಾ ಕಳೆದ ೧೦೦ ವರ್ಷಗಳಿಂದ ತನ್ನ ಕೆಲಸವನ್ನು ನಿರಂತರವಾಗಿ ಮಾಡಿಕೊಂಡು ಬಂದಿದೆ. ಇಷ್ಟೇ ಅಲ್ಲದೇ ವಿಧವಾ ವಿವಾಹ, ಅಂತರಜಾತೀಯ ವಿವಾಹ, ವರದಕ್ಷಿಣೆ ವಿರೋಧ ಸಿನಿಮಾಗಳ ಮೂಲಕ ಜನರಲ್ಲಿ ಅರಿವನ್ನು ಬೆಳೆಸಿದೆ. ಆ ಮೂಲಕ ಸಮಾಜದಲ್ಲಿ ಸಾಮಾಜಿಕ ಸಾಮರಸ್ಯ ಮತ್ತು ಸಮಾನತೆಗಳನ್ನು ಪ್ರತಿಪಾದಿಸಿವೆ.

ಸಿನೆಮಾ ತನ್ನ ಮೂಲಕ ಇಡೀ ಸಮಾಜಕ್ಕೆ ಅನೇಕ ನೆಲೆಗಳಲ್ಲಿ ಹಲವು ವಿಷಯಗಳನ್ನು ತಿಳಿಸಿಕೊಟ್ಟಿದೆ. ಗಂಭೀರವಾಗಿ ಹೇಳಿದಾಗಲೂ ಅರ್ಥವಾಗದ ಕೆಲವು ವಿಷಯಗಳನ್ನು ಮನೋರಂಜನೆಯ ಮೂಲಕ ಜನರ ಮನಸ್ಸನಲ್ಲಿ ಅಚ್ಚಳಿಯದಂತೆ ಸಮಾಜದ ವಾಸ್ತವತೆಯನ್ನು ತೆರೆದಿಟ್ಟಿದೆ. ಸಿನಿಮಾದಲ್ಲಿ ಸಂಸ್ಕೃತಿ ಇದೆ. ಸಿನಿಮಾದಲ್ಲಿ ಬಳಕೆ ಮಾಡಿಕೊಂಡಿರುವ ಯಾವುದೇ ವಸ್ತುವಿಷಯವು ಒಂದು ಕೇಂದ್ರಕ್ಕೆ ಬದ್ಧವಾಗಿರದೇ ಅದು ಸಾಮಾಜಿಕ ನಿಲುವನ್ನು ತಾಳುವಲ್ಲಿ, ವೈಯಕ್ತಿಕ ನಿಲುವುಗಳನ್ನು ಮೀರಿ ಸಾಮಾಜಿಕ ಸಂಬಂಧವನ್ನು ಗಟ್ಟಿಗೊಳಿಸುವ ಐಕ್ಯತೆಯನ್ನು ಪ್ರತಿಪಾದಿಸುವ ನಿಲುವನ್ನು ಹೊಂದಿದೆ. ಡೇವಿಡ್ ಲೀನ್, ಕುರುಸೋವಾ, ಸತ್ಯಜಿತ್ ರೇ, ಬಿಮಲ ರಾಯ್, ಗುಲ್ಜಾರ್, ಹೃಷಿಕೇಶ ಮುಖರ್ಜಿ, ಅರವಿಂದನ್, ಋತುಪರ್ಗೊ, ಘೋಷ್, ಗಿರೀಶ್ ಕಾಸರವಳ್ಳಿ, ಪುಟ್ಟಣ್ಣ ಕಣಗಾಲ್, ಮಣಿರತ್ನಂ, ಹಾಗೆಯೇ ಯುವ ನಿರ್ದೇಶಕರಾದ ರಾಜಕುಮಾರ್ ಹಿರಾನಿ, ಸೂರಿ, ಶಮಿತ್, ಅಮೀನ, ಅಭಿಷೇಕ್ ಕಪೂರ್, ಯೋಗರಾಜ್ ಭಟ್ ಮುಂತಾದ ನಿರ್ದೇಶಕರು ಸಿನಿಮಾ ನಿರ್ದೇಶಿಸುವುದರ ಮೂಲಕ ಭಿನ್ನ ಭಿನ್ನ ಶೈಲಿಯನ್ನು ಮತ್ತು

ಕ್ರಿಯಾಶೀಲತೆಯನ್ನು ತೋರಿದ್ದಾರೆ. ಚಲನಚಿತ್ರಗಳು ಕೇವಲ ಮನೋರಂಜನೆಯ ಉದ್ದೇಶವನ್ನು ಮಾತ್ರ ಹೊಂದಿರದೇ ಅದು ಒಂದು ಉದ್ಯಮವು ಆಗಿದೆ. ಸಾವಿರಾರು ಲಕ್ಷಾಂತರ ಜನರ ಜೀವನದ ನೆರಳಾಗಿಯೂ ಸಿನಿಮಾ ಮಾಧ್ಯಮ ಇಂದು ಒಂದು ಬೃಹತ್ ಉದ್ಯಮವಾಗಿ ಬೆಳೆದಿದೆ.

"ದಕ್ಷಿಣ ಭಾರತದಲ್ಲಿ ಕನ್ನಡ ಚಿತ್ರಗಳಿಗೆ ತನ್ನದೇ ಆದ ವರ್ಚಸ್ಸಿದೆ. ಕನ್ನಡ ಚಿತ್ರರಂಗ ಎಂದಾಗ ಮೊಟ್ಟ ಮೊದಲು ಕೇಳಿ ಬರುವ ಹೆಸರು ರಾಜ್‌ಕುಮಾರ್ ಅವರು (ಡಾ. ರಾಜ್‌ಕುಮಾರ್ ಕನ್ನಡದ ಹೃದಯ ಸಖ). ಕನ್ನಡ ನುಡಿಯನ್ನು ನಡೆಯನ್ನು ರೂಪಿಸಿದ ಶಕ್ತಿ ಎಂದೇ ಕರ್ನಾಟಕದಲ್ಲಿ ಬಿಂಬಿತರಾದವರು. ಅಕ್ಷರ ಲೋಕದಿಂದ ವಂಚಿತರಾದವರನ್ನು ಒಳಗೊಂಡು ಇಡೀ ಕನ್ನಡದ ಸಾಂಸ್ಕೃತಿಕ ನೈತಿಕತೆಯನ್ನು, ಸಾಕ್ಷಿ ಪ್ರಜ್ಞೆಯನ್ನು ವಿಕಸನಗೊಳಿಸಿದ ನಟ. ತಂಗಿಯ ಮದುವೆ ಆಗದ ಹೊರತು ಅಣ್ಣ ಮದುವೆ ಆಗಬಾರದು ಎಂಬಂತಹ ಅನೇಕ ಮೌಲ್ಯಗಳನ್ನು ಸಿನಿಮಾಗಳ ಮೂಲಕ ತಿಳಿಸಿದವರು. ಇಂತಹ ಅಲಿಖಿತ ಕೌಟುಂಬಿಕ ಮೌಲ್ಯಗಳನ್ನು ನಾವು ಕಲಿತಿದ್ದು ಯಾವ ಧರ್ಮ ಗ್ರಂಥಗಳಿಂದಲ್ಲ, ಸಂವಿಧಾನದಿಂದಲೂ ಅಲ್ಲ. ಬದಲಿಗೆ ರಾಜ್‌ಕುಮಾರ್ ಅವರ ಚಿತ್ರಗಳಿಂದ."[೨] ಕರ್ನಾಟಕ ಏಕೀಕರಣ ಮತ್ತು ಬೇಡರ ಕಣ್ಣಪ್ಪದ ಬಿಡುಗಡೆ ಎರಡೂ ಆಸುಪಾಸು ಒಂದೇ ಸಮಯದಲ್ಲಿ ನಡೆದದ್ದು. ಹೀಗಾಗಿ ಕರ್ನಾಟಕದ ಸುವರ್ಣ ಮಹೋತ್ಸವ ಮತ್ತು ರಾಜ್‌ಕುಮಾರ್ ಬಣ್ಣದ ಬದುಕಿನ ಸುವರ್ಣ ಮಹೋತ್ಸವ ಎರಡನ್ನೂ ಭಿನ್ನವಾಗಿ ಗ್ರಹಿಸುವ ಆಗಿಲ್ಲ ಮತ್ತು ರಾಜ್‌ಕುಮಾರ್ ಅಭಿನಯಿಸಿದ ಐತಿಹಾಸಿಕ, ಪೌರಾಣಿಕ, ಸಾಮಾಜಿಕ, ಆಧ್ಯಾತ್ಮಿಕ ಪಾತ್ರ ವೈವಿಧ್ಯಗಳೂ ಕನ್ನಡ ಮನಸ್ಸಿನ ಬಹುಮುಖ ಸಂಸ್ಕಾರದ ಬಹುರೂಪಿ ಸಂಸ್ಕೃತಿಯ ರೂಪಕದಂತೆ ಬೆಳೆದುಬಂದಿದೆ. ಬಸವಣ್ಣ, ಸರ್ವಜ್ಞ, ಕನಕದಾಸ, ಪುಲಿಕೇಶಿ, ಕೃಷ್ಣದೇವರಾಯ, ಮಯೂರ ಜೊತೆಗೆ ನಾಂದಿ, ನಂದಾದೀಪ, ಉಯ್ಯಾಲೆ, ಕಸ್ತೂರಿನಿವಾಸ, ಎರಡು ಕನಸು, ಸರ್ವಮಂಗಳದಂಥ ಅಪ್ಪಟ ಕನ್ನಡ ಸಾಮಾಜಿಕತೆಯ ಅಸಂಖ್ಯ ಪಾತ್ರಗಳು ಸೇರಿ ಅವರ ಚಿತ್ರಗಳ ಒಟ್ಟು ವಿನ್ಯಾಸ ಇಡೀ ಸಿನಿಮಾ ನೆಡೆದುಬಂದ ದಾರಿಯನ್ನು ಅದರ ಇತಿಹಾಸವನ್ನು ಅರಿಯಲು ಒಂದು ಸಾಧನವನ್ನಾಗಿ ಗ್ರಹಿಸಬಹುದು. ಆ ಮೂಲಕ ಜನಪದದ ಹಿನ್ನೆಲೆಯಲ್ಲಿ ರಾಜಕುಮಾರ್ ಅವರ ಕಾದಂಬರಿ ಆಧಾರಿತ ಚಲನಚಿತ್ರಗಳನ್ನು ಅಧ್ಯಯನ ನಡೆಸುವುದು ಸಂಶೋಧನೆಯ ದೃಷ್ಟಿಯಿಂದ ಮುಖ್ಯವಾಗುತ್ತದೆ.

## ೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ವ :

ಕನ್ನಡ ಸಾಹಿತ್ಯ ಮತ್ತು ಸಿನಿಮಾಕ್ಕೆ ನಿಕಟವಾದ ಅಂತರ್ಸಂಬಂಧವಿದೆ. ಮೊಟ್ಟಮೊದಲಿಗೆ ರಂಗಭೂಮಿಯ ಹಿನ್ನೆಲೆಯಲ್ಲಿ ಸಿನಿಮಾವು ಹುಟ್ಟಿಕೊಂಡುದಾದರೂ ತದನಂತರದಲ್ಲಿ ಅದು ಸ್ವತಂತ್ರವಾಗಿ ಬೆಳೆಯಿತು. ಕನ್ನಡದ ಸಿನಿಮಾಗಳು ಮೊದಲಿಗೆ ಕನ್ನಡ ಸಾಹಿತ್ಯಾಧಾರಿತವಾಗಿ ಬಂದಂತಹ ಕೃತಿಗಳನ್ನು ಆಯ್ಕೆ ಮಾಡಿಕೊಂಡು ಸಿನಿಮಾಗಳು ಬಂದವು. ಅಕ್ಷರ ಮಾಧ್ಯಮದ ಪ್ರಭಾವ ದೃಶ್ಯ ಮಾಧ್ಯಮದ ಮೇಲೆ ತುಂಬಾ ಪ್ರಭಾವ ಬೀರಿದೆ. ಕನ್ನಡ ಸಿನಿಮಾ ಕ್ಷೇತ್ರವು ವಜ್ರಮಹೋತ್ಸವವನ್ನು ಆಚರಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಸಿನಿಮಾ ಕ್ಷೇತ್ರಕ್ಕೆ ಅಪಾರ ಕೊಡುಗೆಯನ್ನು ನೀಡಿದ ರಾಜಕುಮಾರ್ ಅವರ ಬಗೆಗೆ ಅನೇಕ ಸಂಶೋಧನೆಗಳು ನಡೆದಿವೆ. ಆದರೂ ಹಲವು ನೆಲೆಗಳಲ್ಲಿ ರಾಜಕುಮಾರ್ ಅವರ ಚಲಚಿತ್ರಗಳ ಉದ್ದೇಶಗಳನ್ನು, ಅದರ ಆಶಯಗಳನ್ನು ಸಮಾಜದ ಮೇಲೆ ಉಂಟು ಮಾಡಿರಬಹುದಾದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಪ್ರಭಾವವನ್ನು ಅರಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಜನಪದ ಕಲೆ ಸಮೂಹ ಸೃಷ್ಟಿಯಾಗಿ ರೂಪುಗೊಂಂಡಿರುತ್ತದೆ. ಒಬ್ಬ ವ್ಯಕ್ತಿಯಿಂದ ಜನಪದ ಸಾಹಿತ್ಯವಾಗಲೀ ಇಲ್ಲವೇ ಜನಪದ ಕಲೆಗಳಾಗಲೀ ರೂಪುಗೊಂಡಿದ್ದಲ್ಲ. ಅಂತೆಯೇ ಸಿನಿಮಾ ಕೂಡಾ ಏಕ ವ್ಯಕ್ತಿಯಿಂದ ರೂಪುಗೊಳ್ಳುವಂತಹುದ್ದಲ್ಲ. ಏಕೆಂದರೆ ಅದು ಕೂಡಾ ಹಲವಾರು ಜನರು ಸೇರಿಕೊಂಡು ಉತ್ಪಾದಿಸುವ ಒಂದು ದೃಶ್ಯ ಮಾಧ್ಯಮ. ರಾಜ್ ಅವರ ಕಾದಂಬರಿ ಆಧಾರಿತ ಚಿತ್ರಗಳಲ್ಲಿ ಜನಪದೀಯ ಮೌಲ್ಯಗಳನ್ನು, ಕೌಟುಂಬಿಕ ಮೌಲ್ಯಗಳನ್ನು ಹುಡುಕುವುದು, ಅವರ ಚಿತ್ರಗಳಲ್ಲಿ ಕಂಡು ಬರುವ ಭ್ರಾತೃ ಪ್ರೇಮ, ಭಯ, ಭಕ್ತಿ, ಶ್ರದ್ಧೆ, ಹಠ, ಆತ್ಮವಿಶ್ವಾಸ, ದೂರದೃಷ್ಟಿ ಕುಟುಂಬ ನಿಷ್ಠೆ ಮತ್ತು ಇನ್ನಿತರ ಅಂಶಗಳನ್ನು ಜಾನಪದೀಯ ಹಿನ್ನೆಲೆಯಲ್ಲಿ ಗಂಭೀರವಾದ ಅಧ್ಯಯನಕ್ಕೆ ಒಳಪಡಿಸುವುದು ಈ ಸಂಶೋಧನೆಯ ಇನ್ನೊಂದು ಉದ್ದೇಶವಾಗಿದೆ.

ಸಾಹಿತ್ಯ ಕೃತಿಯೊಂದು ಸಿನಿಮಾ ಮಾಧ್ಯಮಕ್ಕೆ ರೂಪಾಂತರಗೊಳ್ಳುವಾಗ ಅಲ್ಲಿ ಎರಡು ನೆಲೆಗಳಲ್ಲಿ ರೂಪುಗೊಳ್ಳುತ್ತದೆ.

೧. ಮೂಲಕೃತಿಯ ಯಥಾವತ್ತಿನ ಅನುಕರಣೆ
೨. ಸಾಹಿತ್ಯ ಕೃತಿಯಲ್ಲಿನ ಒಂದು ಎಳೆಯನ್ನಿಟ್ಟುಕೊಂಡು ಅದನ್ನು ಭಿನ್ನವಾಗಿ ನಿರ್ವಚಿಸುವ ಇನ್ನೊಂದು ವಿಧಾನ.

ಸಾಹಿತ್ಯ ಕೃತಿಯೊಂದರಲ್ಲಿನ ವಸ್ತು ವಿಷಯ ಸಮಕಾಲೀನ ಸಂದರ್ಭದ ರಾಜಕೀಯ, ಸಾಮಾಜಿಕ ಚರ್ಚೆಯನ್ನು ತನ್ನೊಳಗಿಟ್ಟುಕೊಂಡು ರೂಪುಗೊಳ್ಳುತ್ತದೆ. ಇದೇ ಸಿನಿಮಾ ಆಗಿ ರೂಪುಗೊಳ್ಳುವಾಗ ಈ ಸಮಕಾಲೀನ ಸಮಸ್ಯೆಗಳಿಗೆ ಸಂವಾದವಾಗಿ ತನ್ನ ಪ್ರತಿಕ್ರಿಯೆಯನ್ನು ನೀಡುತ್ತಿರುತ್ತದೆ. ಅಂತೆಯೇ ಕಾದಂಬರಿಗಳು ಸಿನಿಮಾ ಆದ ನಂತರದಲ್ಲಿ ಬೀರಿರಬಹುದಾದ ಪರಿಣಾಮವನ್ನು ಅರಿಯುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದು.

ಕನ್ನಡ ಚಲನಚಿತ್ರರಂಗದಲ್ಲಿ ರಾಜ್‌ಕುಮಾರ್ ಅವರ ಹೆಸರು ಅದ್ವಿತೀಯವಾದುದು. ರಾಜ್‌ಕುಮಾರ್ ಅವರ ಅನೇಕ ಚಿತ್ರಗಳು ಕಾದಂಬರಿ ಆಧಾರಿತವಾದಂತಹುಗಳು. ಇಂತಹ ಚಲನಚಿತ್ರಗಳು ಇಂದಿಗೂ ಜನಸಾಮಾನ್ಯರ ಬದುಕಿನಲ್ಲಿ ನೆಲೆಯೂರಿವೆ. ಈ ರೀತಿಯಾಗಿ ಸಮಾಜವನ್ನು, ಜನರ ಬದುಕಿನ ಶೈಲಿಯನ್ನು ಬದಲಿಸಿದ ಅವರ ಸಿನಿಮಾದಲ್ಲಿ ಒಡಮೂಡಿರಬಹುದಾದ ಅಂಶಗಳನ್ನು ಜಾನಪದೀಯ ಸೊಗಡನ್ನು ಅರಿಯುವುದು ಈ ಸಂಶೋಧನೆಯ ಪ್ರಮುಖ ಉದ್ದೇಶವಾಗಿದೆ. ಹಾಗೆಯೇ ಜನರ ಬದುಕಿಗೆ ಮಾರ್ಗದರ್ಶಕವಾಗಿದ್ದ ಅವರ ಸಿನಿಮಾಗಳ ಆಂತರ್ಯದಲ್ಲಿ ಇರಬಹುದಾಗಿದ್ದ ದೇಸೀ ಸೊಗಡನ್ನು ಅರಿಯುವ ಮೂಲಕ ಸಿನಿಮಾಗಳು ಕೂಡಾ ಒಂದು ಸಮಾಜವನ್ನು ಸ್ವಾಸ್ಥ್ಯ ಸ್ಥಿತಿಯಲ್ಲಿ ಮುನ್ನಡೆಸಲು ಹೇಗೆ ಸಹಾಯಕಾರಿಯಾಗಿವೆ ಎಂಬುದನ್ನು ತಿಳಿಯುವುದು ಮತ್ತೊಂದು ಉದ್ದೇಶವಾಗಿದೆ. ಜನಸಾಮಾನ್ಯರು ಸಹ ಆದರ್ಶ ಬದುಕನ್ನು ಬದುಕಬೇಕೆಂಬ ಕನಸನ್ನು ಹೊತ್ತು ಸಾಮಾಜಿಕ ಬದಲಾವಣೆಯ ಬದ್ಧತೆಗೆ ಒಳಗು ಮಾಡಿದ ಅವರ ಸಿನಿಮಾಗಳು ಒಟ್ಟಾರೆಯಾಗಿ ಹೇಗೆ ಜನಪದ ಅಂಶಗಳನ್ನು ಇಟ್ಟುಕೊಂಡು ಇಡೀ ಸಮುದಾಯವನ್ನು ಏಕನೆಲೆಯಲ್ಲಿ ಸಮಾಜಮುಖಿಯಾಗಿ ಬೆಳೆಯಲು ಪ್ರೋತ್ಸಾಹಿಸಲು ಪ್ರೇರಕವಾಯಿತು ಎಂಬುದನ್ನು ಕಂಡುಕೊಳ್ಳುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ ಮತ್ತು ವಿಧಾನ :**

ಪ್ರಸ್ತುತ ಅಧ್ಯಯನವು ಡಾ.ರಾಜುಕುಮಾರ್ ರವರ ಸಾಮಾಜಿಕ ಕಾದಂಬರಿ ಆಧಾರಿತ ಚಲನ ಚಿತ್ರಗಳಲ್ಲಿ ಜಾನಪದೀಯ ಅಂಶಗಳು ಕುರಿತ ಅಧ್ಯಯನವಾಗಿದೆ. ಚಲನ ಚಿತ್ರಗಳಲ್ಲಿ ವ್ಯಕ್ತವಾಗಿರುವ ಜಾನಪದೀಯ ಅಂಶಗಳು, ಭೌಗೋಳಿಕ ಪರಿಸರಕ್ಕೆ ಸಬಂಧಿಸಿದ ಅಂಶವನ್ನು ಅವಲೋಕಿಸಲಾಗಿದೆ.

ಜಾನಪದಕ್ಕೆ ದೇಸಿ ಪರಂಪರೆ ಸೈದ್ಧಾಂತಿಕ ತಳಹದಿಯಾಗಿರುವುದರಿಂದ ದೇಸಿವಾದದ ಹರವು ಭಾಷೆಯ ಬಳಕೆಯನ್ನಲ್ಲದೆ, ಚಲನಚಿತ್ರ ಹಾಗೂ ಕಾದಂಬರಿಯಲ್ಲಿ ನಿರೂಪಿತವಾಗಿರುವ ಸಾಹಿತ್ಯ, ವಸ್ತು, ನಿರೂಪಣೆ, ಚಲನಚಿತ್ರಗಳ ಮೂಲ ಕಲ್ಪನೆ., ಸಾಂಸ್ಕೃತಿಕ ಸಂದರ್ಭ, ಸೌಂದರ್ಯಮಿಮಾಂಸೆಯ ಧೋರಣೆಗಳನ್ನು ಪ್ರಭಾವಿಸುವ ಒಂದು ಪ್ರವೃತ್ತಿಯಾಗಿರುತ್ತದೆ. ಅಲ್ಲಿನ ಹೊಸ ಸಂಗತಿಗಳನ್ನು ಶೋಧಿಸುತ್ತಾ, ಹಳೆಯದನ್ನು ಪರಿಷ್ಕರಿಸಿ ಚರ್ಚಿಸಲು ಮಾನವತಾ ಸಿದ್ಧಾಂತ, ಸಾಹಿತ್ಯಾಧ್ಯನ ಈ ಪ್ರವೃತ್ತಿ ಚಲನಚಿತ್ರಗಳ ಸಂದರ್ಭದಲ್ಲಿ ಪರಂಪರೆಯಿಂದಲೂ ಬೆಳೆದು ಬಂದಿರುವುದನ್ನು ಕಾಣಬಹುದು.

ಅಧ್ಯಯನದ ದೃಷ್ಟಿಕೋನ ಭಿನ್ನತೆಯಿಂದ ಕೂಡಿದ್ದು ಚಲನಚಿತ್ರಗಳ ಅಧ್ಯಯನವನ್ನು ಬಹುಶಿಸ್ತಿಯ ನೆಲೆಗಳನ್ನು ಗುರುತಿಸಲು ಭೌಗೋಳಿಕ ಸಿದ್ಧಾಂತವನ್ನು ಅಳವಡಿಸಿಕೊಳ್ಳಲಾಗಿದೆ. ಜನಪದರ ಪ್ರಜ್ಞೆ, ಭಾವನೆಗಳು, ಕೌಟುಂಬಿಕಜೀವನ ಹಾಗೂ ಪ್ರದರ್ಶನಾತ್ಮಕ ಕಲೆಗಳ ಕಾರ್ಯಚಟವಟಿಕೆಯ ಮಹತ್ವ ತಿಳಿಯಲು ಪ್ರದರ್ಶನಾತ್ಮಕ ಸಿದ್ಧಾಂತವನ್ನು ಅಳವಡಿಸಿಕೊಳ್ಳಲಾಗಿದೆ. ಚಲನ ಚಿತ್ರಗಳ ಜಾನಪದೀಯ ಅಂಶಗಳು ಹಾಗೂ ಅದರ ವಿವರಣೆಗೆ ಸಂಬಂಧಿಸಿದಂತೆ ವಕ್ತೃಗಳನ್ನು ನೇರವಾಗಿ ಭೇಟಿ ಮಾಡಿ ಅವರಿಂದ ಮಾಹಿತಿ ಸಂಗ್ರಹಣೆ ಮಾಡಲಾಗಿದ್ದು, ಅಧ್ಯಯನಕ್ಕೆ ಹಿನ್ನೆಲೆಯಾಗಿ ಕೌಟುಂಬಿಕ, ಹಿನ್ನಲೆ ಹೊಂದಿದಂತಹ ಕಾಂದಂಬರಿಗಳ ಅಧ್ಯಯನ ಕ್ರಮ,

ಅವುಗಳ ಸ್ವರೂಪ, ಚಲನ ಚಿತ್ರಗಳ ಬಗ್ಗೆ ಇದುವರೆಗೆ ನಡೆದಿರುವ ಅಧ್ಯಯನದ ಬಗೆಗೆ ಸ್ಥೂಲವಾದ ವಿವರಣೆಯನ್ನು ನೀಡಲಾಗಿದೆ.

ಈ ಸಂಶೋಧನೆಯು ಕ್ಷೇತ್ರಕಾರ್ಯವನ್ನೇ ಅವಲಂಬಿಸಿದೆ. ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡ ಪ್ರದೇಶಗಳಿಗೆ ಭೇಟಿ ನೀಡಿ ಸಂಬಂಧಿಸಿದ ವಕ್ತೃಗಳನ್ನು ಸಂದರ್ಶಿಸುವ ಮೂಲಕ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸದಾಭಿರುಚಿ ಚಲನಚಿತ್ರಗಳ ಸಾಮಾಜಿಕ ಸಂದರ್ಭ ಪಠ್ಯ, ಕಲೆ, ಆಶಯಗಳು, ರಾಜಕೀಯ, ಆರ್ಥಿಕ ಇತರೆ ಮಾನವಿಕವನ್ನು ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ, ಪ್ರಾದೇಶಿಕ, ರಾಷ್ಟ್ರೀಯ ಹಾಗೂ ಜಾಗತಿಕ ಹಿನ್ನಲೆಯಲ್ಲಿ ಅಧ್ಯಯನ ನಡೆಸಿ ಅಗತ್ಯ ಮಾಹಿತಿ ಸಂಗ್ರಹಿಸಲಾಗಿದೆ.

ಚಲನ ಚಿತ್ರಗಳಲ್ಲಿ ಕಂಡುಬರುವ ವೇಷಭೂಷಣ, ಆಭರಣ, ಆಹಾರಪದ್ಧತಿ, ಮುಂತಾದ ಅಂಶಗಳಲ್ಲದೆ, ಜನಪದರ ಜೀವನದ ಅವಿಭಾಜ್ಯವಾಗಿರುವ ಹೃದಯವೈಶಾಲ್ಯತೆ, ಔದಾರ್ಯ, ಸ್ನೇಹಶೀಲತೆ, ಪ್ರೀತಿ, ಅನುಕಂಪ ಇವುಗಳು ಮನಸ್ಸನ್ನು ಅಲಂಕರಿಸಿವೆ, ಈ ಅಂಶಗಳನ್ನು ಕುರಿತು ಚರ್ಚಿಸಲು ಮಾನವ, ಮನಃಶಾಸ್ತ್ರೀಯ ಸಿದ್ಧಾಂತವನ್ನು ಸಾಮಾಜಿಕ, ಜಾನಪದದ ಅನ್ವಯಿಕ ಸಿದ್ಧಾಂತ ಹಾಗೂ ಪ್ರದರ್ಶನಾತ್ಮಕ ಸಿದ್ಧಾಂತ, ವೈಜ್ಞಾನಿಕ ಸಿದ್ಧಾಂತ, ಮಾನವ ಶಾಸ್ತ್ರ, ಹಾಗೂ ಮನಃಶಾಸ್ತ್ರದ ವೈಧಾನಿಕತೆಯ ನೆಲೆಯಲ್ಲಿ ಎಲ್ಲವೂ ಶೋಧಿಸಲಾಗಿದೆ. ಈ ಸೈದ್ಧಾಂತಿಕ ನಿಲುವುಗಳಿಂದ ಪ್ರಸ್ತುತ ಅಧ್ಯಯನಕ್ಕೆ ಸ್ಪಷ್ಟ ಚಿತ್ರಣ ಕಟ್ಟಿಕೊಡಲಾಗಿದೆ.

ಚಲನ ಚಿತ್ರಗಳಲ್ಲಿ ವ್ಯಕ್ತವಾಗಿರುವ ಮಾನವನ ಬಾಹ್ಯ ನಡುವಳಿಕೆ ಹಾಗೂ ಅಂತರಂಗವನ್ನು ಕೆದಕುವ ಜಾನಪದೀಯ ಅಂಶಗಳನ್ನು ಗುರುತಿಸಿ ಅವುಗಳಿಗೆ ವಿವರಣೆ ನೀಡಲಾಗಿದ್ದು, ಮಾಹಿತಿ ವಿಶ್ಲೇಷಣೆ ಮೂಲಕ ಅವುಗಳನ್ನು ಭೌತವಿಜ್ಞಾನ ಹಾಗೂ ಸಮಾಜ ವಿಜ್ಞಾನ ಈ ಎರಡೂ ನೆಲೆಗಳಲ್ಲಿ ಚರ್ಚಿಸಲಾಗಿದೆ.

ಪ್ರಶ್ನಾವಳಿ, ಸಂದರ್ಶನ ಮತ್ತು ಅವಲೋಕನದ ಮುಖಾಂತರ ಜನಪದರನ್ನು ಭೇಟಿ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಅಲ್ಲದೆ, ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಲಾದ ವಿಷಯವನ್ನು ವಿವಿಧ ಭಾಗಗಳಾಗಿ ವರ್ಗೀಕರಿಸಲಾಗಿದೆ. ಈ ಮಾಹಿತಿ ಸಂಗ್ರಹಣೆಯ ಜೊತೆಯಲ್ಲಿ ಪ್ರಮುಖ ವಕ್ತೃಗಳನ್ನು ಸಂದರ್ಶಿಸಿದ ಮಾಹಿತಿಯನ್ನು ಆಯಾ ದಿನಗಳಲ್ಲಿಯೇ ಬರವಣಿಗೆಗೆ ತರಲಾಯಿತು.

### ೧.೪ ದತ್ತಾಂಶ ಸಂಗ್ರಹಣೆ

ಈ ಹಿಂದೆ ನಡೆದ ಅಧ್ಯಯನಗಳು ಯಾವ ದೃಷ್ಟಿಕೋನದಡಿ ಅಧ್ಯಯನ ನಡೆದಿವೆ ಎಂಬುವುದನ್ನು ಲೇಖನಗಳು, ಗ್ರಂಥಗಳು, ನಿಯತಕಾಲಿಕೆಗಳು, ಪತ್ರಿಕೆಗಳು, ಮುಂತಾದವುಗಳಿಂದ ತಿಳಿಯಲಾಗಿದೆ. ಅವುಗಳಿಂದ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ದತ್ತಾಂಶಗಳ ಸಂಗ್ರಹಣೆ ಮಾಡಿ ಸೂಕ್ಷ್ಮ ವಿಶ್ಲೇಷಣೆಯ ಮೂಲಕ ಈ ಪ್ರಬಂಧ ಸಿದ್ಧಪಡಿಸಲಾಗಿದೆ.

## ೧.೫ ಅಧ್ಯಯನದ ಸಾಧನಗಳು :

ಅವುಗಳ ಹಿಂದಿರುವ ತಾತ್ವಿಕತೆಯನ್ನು ಗುರುತಿಸಿಲ್ಲ. ಆದ್ದರಿಂದ ಸಂಪ್ರದಾಯಿಕ ಆಚರಣೆಗಳನ್ನು ಮಾನವ ಶಾಸ್ತ್ರೀಯ, ಸಮಾಜಶಾಸ್ತ್ರೀಯ, ಮನಃಶಾಸ್ತ್ರೀಯ ಮತ್ತು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಈ ಅಧ್ಯಯನಕ್ಕೆ ಪೂರಕವಾದ ಸಾಧನಗಳನ್ನು ಉಪಯೋಗಿಸಿಕೊಂಡು ಅಗತ್ಯ ಮಾಹಿತಿ ಸಂಗ್ರಹಿಸಿ ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಪ್ರಸ್ತುತ ಸಂಶೋಧನೆಯ ವಿಷಯ "ಡಾ. ರಾಜ್‌ಕುಮಾರ್ ಅವರ ಕಾದಂಬರಿ ಆಧಾರಿತ ಚಿತ್ರಗಳಲ್ಲಿ ಜಾನಪದೀಯ ಅಂಶಗಳು" ಎಂಬ ಶೀರ್ಷಿಕೆಯೇ ತಿಳಿಸುವಂತೆ ಅಧ್ಯಯನದ ವ್ಯಾಪ್ತಿಯಾಗಿ ಕಾದಂಬರಿ ಆಧಾರಿತ ಆಯ್ದ ಚಲನಚಿತ್ರಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಹಾಗೂ ಈ ಚಲನಚಿತ್ರಗಳಲ್ಲಿ ನಿರೂಪಿತಗೊಂಡಿರುವ ಜಾನಪದೀಯ ಅಂಶಗಳನ್ನು ಗುರುತಿಸುವುದು ಅಧ್ಯಯನದ ಕೇಂದ್ರ ಬಿಂದುವಾಗಿರುತ್ತದೆ. ಅಲ್ಲದೇ ಅಧ್ಯಯನ ವಿಧಾನವಾಗಿ ಚಲನಚಿತ್ರಗಳಲ್ಲಿ ಒಡಮೂಡಿರುವ ಜಾನಪದೀಯ ಅಂಶಗಳನ್ನು ವಿಶ್ಲೇಷಣಾತ್ಮಕ ಮಾದರಿಯಿಂದಲೂ ಹಾಗೂ ವಿಮರ್ಶಾತ್ಮಕ ಮಾದರಿಯಿಂದಲೂ ಅಧ್ಯಯನ ಮಾಡಲಾಗಿದೆ.

## ೧.೬ ಇದುವರೆಗಿನ ಅಧ್ಯಯನಗಳ ಸಮೀಕ್ಷೆ :

೧೯೫೪ ರಲ್ಲಿ ಬೇಡರ ಕಣ್ಣಪ್ಪ ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ರಾಜಣ್ಣನವರು ಸುಮಾರು ೨೦೫ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅವರ ಪ್ರಥಮ ಚಿತ್ರ ಭಾರಿ ಯಶಸ್ಸು ಕಂಡಿತಲ್ಲದೆ ಪ್ರಶಸ್ತಿ ಪುರಸ್ಕಾರ ಗೌರವಗಳಿಗೂ ಭಾಜನವಾಯಿತು. ೧೯೬೮ನೇ ಇಸವಿಯ ಹೊತ್ತಿಗೆ ರಾಜಣ್ಣನವರ ೧೦೦ನೇ ಚಿತ್ರ ಯಶಸ್ಸು ಕಂಡಿತು. ಅಲ್ಲದೇ ರಾಜಣ್ಣನವರು ಚಿತ್ರರಂಗದ ವರನಟ, ಜನಪ್ರಿಯ ಜನಪದ ನಾಯಕ ಎಂಬುದನ್ನು ಅವರ ಚಿತ್ರಗಳು ಪ್ರಮಾಣೀಕರಿಸಿದ್ದವು. ಅವರ ಭಾಗ್ಯದ ಬಾಗಿಲು ನೂರನೇ ಚಿತ್ರದ ಹೊತ್ತಿಗೆ ಅವರನ್ನು ಕುರಿತ ಹಲವು ಪುಸ್ತಕಗಳು ಪ್ರಕಟಗೊಂಡಿದ್ದವು. 'ಕಥಾನಾಯಕನ ಕಥೆ' ರಾಜಣ್ಣನವರನ್ನು ಕುರಿತಾದ ಅತ್ಯುತ್ತಮ ಬರಹ. ೧೯೭೦ರ ದಶಕದಲ್ಲಿಯೇ 'ಪದ್ಮಭೂಷಣ' ಎನ್ನುವ ಗ್ರಂಥವನ್ನು ರಾಜಣ್ಣನವರಿಗೆ ಸಮರ್ಪಿಸಲಾಯಿತು. ಅಲ್ಲಿಂದ ಇಲ್ಲಿಯವರೆವಿಗೂ ಅವರ ಹುಟ್ಟು, ಬಾಲ್ಯ, ರಂಗ ಪ್ರವೇಶ, ಬೆಳ್ಳಿ ತೆರೆಗೆ ಪಾದಾರ್ಪಣೆ ಮಾಡಿದ ಕುರಿತು ಮತ್ತು ಅವರ ಚಿತ್ರಗಳು ಮಾಡಿದ ದಾಖಲೆ, ಕಾದಂಬರಿ ಸಿನೆಮಾ ಪ್ರವೇಶಿಸಿದ್ದು, ಯಶಸ್ಸು, ಪ್ರಶಸ್ತಿ, ಪುರಸ್ಕಾರ ಪಡೆದದ್ದು ಮುಂತಾದವನ್ನು ಕುರಿತ ಹಲವು ಪುಸ್ತಕಗಳು ರಾಜಣ್ಣನವರ ಸಾಧನೆಯನ್ನು ಹಾಡಿಹೊಗಳಿವೆ. ಜಗನ್ನಾಥ ಬಹುಳೆಯವರ "ವರನಟ" ಹನ್ನೆರೆಡು ಪ್ರಶಸ್ತಿಗಳನ್ನು ಬಾಚಿಕೊಂಡಿವೆ. ಬಿ. ಗಣಪತಿ ಬೋಳಾರ ಅವರ 'ಕನ್ನಡದ ಮುತ್ತಿನ ಕಥೆ' ಒಂದು ಅತ್ಯುತ್ತಮ ಕೃತಿಯಾಗಿದೆ. ಅ.ನ.ಪ್ರಹ್ಲಾದರಾವ್, ಗೌರಿ ಸುಂದರ, ಪುನೀತ್ ರಾಜ್‌ಕುಮಾರ್, ಪ್ರವೀಣ ನಾಯಕ್, ರುಕ್ಕೊಜಿರಾವ್ ಮುಂತಾದ ಲೇಖಕರು ರಾಜಣ್ಣನವರನ್ನು ಕುರಿತು ಪುಸ್ತಕಗಳನ್ನು ರಚಿಸಿದ್ದಾರೆ. ಅದರಲ್ಲಿಯೂ ಬೃಹತ್ ಗ್ರಂಥ ರಚಿಸಿರುವ ರುಕ್ಕೊಜಿರಾವ್ ಅವರ "ಡಾ. ರಾಜ್ ಸಮಗ್ರ ಚರಿತ್ರೆ" ಕೃತಿಯಲ್ಲಿ ರಾಜಣ್ಣನವರ ಸಂಪೂರ್ಣ ಜೀವನ ಚರಿತ್ರೆ, ಸಿನೆಮಾ ದಾಖಲೆಗಳನ್ನು

ಸವಿವರವಾಗಿ ವರ್ಣಿಸಿದ್ದಾರೆ. ಸ್ವತಃ ರಾಜಣ್ಣನವರ ಸುಪುತ್ರರಾದ ಪುನೀತ್ ರಾಜ್‌ಕುಮಾರ್ ಅವರ ಪ್ರಕೃತಿ ಬನವಾಸಿ ಅವರೊಂದಿಗೆ "ವ್ಯಕ್ತಿತ್ವದ ಹಿಂದಿರುವ ವ್ಯಕ್ತಿ" ಕೃತಿಯಲ್ಲಿ ರಾಜಣ್ಣನವರ ಬಗ್ಗೆ ಬಹಳಷ್ಟು ಉಪಯುಕ್ತ ಮಾಹಿತಿಗಳನ್ನು ನೀಡಿದ್ದಾರೆ. ಇದುವರೆಗೂ ಸಾಕಷ್ಟು ಪುಸ್ತಕಗಳು, ಬಿಡಿಲೇಖನಗಳು, ಬರಹಗಳು ಮುದ್ರಣ ಮಾಧ್ಯಮದಲ್ಲಿ ಪ್ರಕಟಗೊಂಡಿವೆ.

ಇನ್ನು ರಾಜಣ್ಣನವರ ಚಿತ್ರಗಳನ್ನು ಅಂದರೆ ಅವರ ಅಭಿನಯದ ಚಿತ್ರಗಳ ಬಗ್ಗೆ ಸಂಶೋಧನೆ ಕೈಗೊಂಡ ಕೆಲವು ಸಂಶೋಧನಾ ಕೃತಿಗಳು ಹೊರಬಂದಿರುವುದನ್ನು ಗಮನಿಸಬಹುದು. ೨೦೦೧ ರಲ್ಲಿ ಡಾ. ಮಳಲಿ ವಸಂತ ಕುಮಾರ್ ಅವರ ಮಾರ್ಗದರ್ಶನದಲ್ಲಿ ಡಿ. ಗುರುಮೂರ್ತಿ ಹಾರೋಹಳ್ಳಿ ಅವರು ಡಾ. ರಾಜ್‌ಕುಮಾರ್ ಅವರನ್ನು ಕುರಿತಂತೆ ಸಂಶೋಧನೆ ನಡೆಸಿದ್ದಾರೆ. "ಕನ್ನಡ ರಂಗಭೂಮಿ ಮತ್ತು ಸಿನಿಮಾಕ್ಕೆ ಡಾ. ರಾಜ್ ಕೊಡುಗೆ" ಎಂಬ ವಿಷಯದ ಬಗ್ಗೆ ಸಂಶೋಧನೆ ನೆಡೆಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯ ಚರಿತ್ರೆಯ ವಿಭಾಗದಲ್ಲಿ ಡಾ. ಗೋವಿಂದರಾಜ್ ಅವರ ಮಾರ್ಗದರ್ಶನದಲ್ಲಿ ಶ್ರೀನಿವಾಸ ರಾಜು ಅವರು "ಡಾ. ರಾಜ್‌ಕುಮಾರ್ ಹಾಗೂ ಕನ್ನಡದ ಅಸ್ಮಿತೆಯ ಹುಡುಕಾಟಗಳು" ಎಂಬ ಪ್ರಬಂಧವನ್ನು ಮಂಡಿಸಿದ್ದಾರೆ.

**ಕೊನೆ ಟಿಪ್ಪಣಿ**


೧. ಕೃಷ್ಣಯ್ಯ.ಎಂ.ಎಚ್., ಸಂಕ್ಷಿಪ್ತ ಕನ್ನಡ ಭಾಷೆಯ ನಿಘಂಟು, ಅಂಕಿತ ಪುಸ್ತಕ, ಬೆಂಗಳೂರು, ಪು.ಸಂ–೧೩.

೨. ಜಯಂತ ಕಾಯ್ಕಿಣಿ, ಟೂರಿಂಗ್ ಟಾಕೀಸ್, ಮನೋಹರ ಗ್ರಂಥಮಾಲೆ, ಧಾರವಾಡ, ಪು.ಸಂ–೭

## ಅಧ್ಯಾಯ : ಎರಡು

### ಕನ್ನಡದಲ್ಲಿ ಚಲನಚಿತ್ರ ಸಾಗಿ ಬಂದ ದಾರಿ

೨.೧ ಭಾರತದಲ್ಲಿ ಚಲನಚಿತ್ರ ಬೆಳವಣಿಗೆ

೨.೨ ದಕ್ಷಿಣ ಭಾರತದಲ್ಲಿ ಚಲನಚಿತದ ಪ್ರವೇಶ

೨.೩ ಕನ್ನಡದಲ್ಲಿ ಚಲನಚಿತ್ರದ ಬೆಳವಣಿಗೆ

೨.೩.೧ ಕನ್ನಡದಲ್ಲಿ ಮೂಕಿಚಿತ್ರಗಳ ಬೆಳವಣಿಗೆ

೨.೩.೨ ಕನ್ನಡದಲ್ಲಿ ವಾಕ್ಚಿತ್ರಗಳ ಬೆಳವಣಿಗೆ

೨.೩.೩ ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡದ ಚಲನಚಿತ್ರಗಳು

೨.೩.೪ ಸ್ವಾತಂತ್ರ್ಯ ನಂತರದಲ್ಲಿ ಕನ್ನಡದ ಚಲನಚಿತ್ರಗಳು

# ಅಧ್ಯಾಯ - ಎರಡು

# ಕನ್ನಡದಲ್ಲಿ ಚಲನಚಿತ್ರ ಸಾಗಿಬಂದ ದಾರಿ

ಮಾನವನು ತನ್ನ ಸುತ್ತಮುತ್ತ ನೋವು-ನಲಿವು, ನೆಮ್ಮದಿಗಳನ್ನು ಸದಾಕಾಲ ಹುಡುಕುತ್ತಾ ಸಾಗುತ್ತಿರುತ್ತಿರುತ್ತಾನೆ. ಹೀಗೆ ಸುತ್ತುತ್ತಿರುವಂತಹ ಮಾನವನನ್ನು ನೆಮ್ಮದಿಯಾಗಿಡಲು ನೋವು-ನಲಿವುಗಳನ್ನು ಆ ಕ್ಷಣಕ್ಕೆ ಮರೆಯುವಂತೆ ಮಾಡಲು ಸಾಧ್ಯವಾಗುವಂತಹದ್ದು ಕೇವಲ ಮನೋರಂಜನೆಯಿಂದ ಮಾತ್ರ. ಆ ಮನೋರಂಜನೆಯು ಆಟ, ಪಾಠ, ಊಟ, ಪ್ರವಚನ, ಉಪನ್ಯಾಸ, ಮಾತು, ಸಂಗೀತ, ಸಾಹಿತ್ಯ, ಹಾಸ್ಯ ಇನ್ನೂ ಮುಂತಾದ ಹಲವಾರು ಕಾರ್ಯಕ್ರಮಗಳಿಂದ ಹುಟ್ಟಿಕೊಳ್ಳುವಂತಹುದ್ದು. ಹೀಗೆ ಮನೋರಂಜನೆ ಎನ್ನುವುದು ಮಾನವನ ಜೀವನದ ಒಂದು ಪ್ರಮುಖವಾಗಿದ್ದು ಅವನ ಜೀವನದುದ್ದಕ್ಕೂ ಇದು ಅವಶ್ಯಕವಾಗಿದೆ.

ಮನೋರಂಜನೆ ಎಂದ ಮೇಲೆ ನಾವು ಮುಖ್ಯವಾಗಿ ಗಮನಿಸುವಂತಹದ್ದು ಚಲನಚಿತ್ರಗಳನ್ನು. ಚಲನಚಿತ್ರದ ಇತಿಹಾಸವು ಇಂದು ನಿನ್ನೆಯದಲ್ಲ. ಅದು ಮೊದಲ ಮಹಾಯುದ್ಧಕ್ಕಿಂತಲೂ ಪೂರ್ವದಲ್ಲಿಯೇ ಅಂದರೆ ಯುರೋಪಿನಲ್ಲಿ ೧೮ನೇ ಶತಮಾನದ ಹೊತ್ತಿಗೆ ನಡೆದಂತಹ ಕೈಗಾರಿಕಾ ಕ್ರಾಂತಿಯ ಕಾಲದಿಂದಲೂ ಬೆಳೆದುಬಂದಿದೆ. ಚಲಚಿತ್ರವು ಬಹಳ ನಿಧಾನಗತಿಯಲ್ಲಿ ಮತ್ತು ಮಂದಗತಿಯಲ್ಲಿ ಬೆಳೆದುಬಂದರೂ, ಅದು ಇಂದು ಆಧುನಿಕ ಜಗತ್ತಿಗೆ ತೆರೆದುಕೊಂಡಿರುವ ರೀತಿಯನ್ನು ಗಮನಿಸಿದರೆ ಸಿನಿಮಾದ ಬೆಳವಣಿಗೆಯನ್ನು ಆಶ್ಚರ್ಯಕರದಿಂದ ಗಮನಿಸಬಹುದು. ಜಗತ್ತಿನಲ್ಲಿ ೧ ಮೊಟ್ಟಮೊದಲನೆಯದಾಗಿ ಸಿನಿಮಾ ಎನ್ನುವುದು ಹುಟ್ಟಿಕೊಂಡದ್ದು ರೋಮ್‌ನ ಪ್ಯಾರಿಸ್‌ನಲ್ಲಿ. ವಿಶ್ವದಲ್ಲಿ ಪ್ಯಾರಿಸ್‌ಗೆ ತನ್ನದೇ ಆದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಚರಿತ್ರೆಯಿದೆ. ಪ್ಯಾರಿಸ್ ದೇಶವು ಆಯಾ ಕಾಲಕ್ಕೆ, ಆಯಾ ಸಾಂಸ್ಕೃತಿಕ ಸನ್ನಿವೇಶಕ್ಕೆ, ಹೊಸ-ಹೊಸ ಆಧುನಿಕ ಲೋಕಕ್ಕೆ ತನ್ನನ್ನು ಒಳಗುಮಾಡಿಕೊಂಡು ಹೊಸಲೋಕಕ್ಕೆ ತನ್ನನ್ನು ತೆರದುಕೊಂಡಿರುವ ಅದ್ಭುತವಾದಂತಹ ಲೋಕ ಪ್ಯಾರಿಸ್ ಆಗಿದೆ. ಇಂತಹ ಪ್ಯಾರಿಸ್‌ನಲ್ಲಿ ೧೮೯೫ರಲ್ಲಿ ಮೊದಲ ಬಾರಿಗೆ ಸಿನಿಮಾ ಎನ್ನುವಂತಹದ್ದು ಹುಟ್ಟಿಕೊಂಡಿತು. ಆ ನಂತರದ ಕಾಲದಲ್ಲಿ ಫ್ರಾನ್ಸ್‌ನಿಂದ ಬೇರೆ-ಬೇರೆ

ದೇಶಗಳಲ್ಲಿ ಸಿನಿಮಾ ಎನ್ನುವುದು ಅಲ್ಲಿಯೂ ಸಹ ಹರಡಲು ಪ್ರಾರಂಭವಾಯಿತು ಎನ್ನಬಹುದು.

ಚಲನಚಿತ್ರದ ಇತಿಹಾಸವು ಫ್ರಾನ್ಸ್‌ನ ನೆಲದಿಂದಲೇ ಹುಟ್ಟಿಕೊಂಡಿದೆ ಎಂದು ಹೇಳಬಹುದಾಗಿದೆ. ಅಲ್ಲಿನ ಲೂಮಿಯಸ್ ಸಹೋದರರಿಂದ ಫ್ರಾನ್ಸ್‌ನಲ್ಲಿ ಮೊದಲು ಸಿನಿಮಾ ಎನ್ನುವುದು ಹುಟ್ಟುಕೊಂಡಿತು. ಈ ಹಿಂದೆಯೂ ಲೂಮಿಯೆರ್‌ಗಿಂತಲೂ ಇದರ ಯತ್ನವಾಗಿ ಬಹಳ ಪ್ರಯತ್ನಗಳು ನೆಡೆದಿದ್ದರೂ, ಕಾಲಾನಂತರದಲ್ಲಿ ಅದು ಸಫಲವಾಗಿದ್ದು ಈ ಲೂಮಿಯೆರ್ ಸಹೋದರರಿಂದಲೇ ಎಂದು ಹೇಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಇವರ ಅಪಾರವಾದ ಶ್ರಮವು, ತ್ಯಾಗವು ಹೆಚ್ಚು ಅಭಿನಂದನಾರ್ಹವಾದುದು ಎಂದೇ ಹೇಳಬೇಕಾಗುತ್ತದೆ. ಈ ಹಿಂದಿನ ಪ್ರಯತ್ನಗಳ ಪ್ರಭಾವವನ್ನು ಮತ್ತು ಪ್ರೇರಣೆಯನ್ನು ಪಡೆದ ಈ ಇಬ್ಬರೂ ಸಹೋದರರು ಮುಂದೆ ಸ್ವತಃ ತಾವೇ ಒಂದು ಸಿನಿಮಾ ಮಾದರಿಯಲ್ಲಿ ತಯಾರಿಯನ್ನು ಮಾಡಿರುವುದನ್ನು ನೋಡಿದರೆ ಆಶ್ಚರ್ಯವನ್ನುಂಟು ಮಾಡುತ್ತದೆ.

**ಲೂಮಯೆರ್ ಸಹೋದರರು :**

ಚಲನಚಿತ್ರಕ್ಕೆ ಒಂದು ನಿರ್ದಿಷ್ಟ ರೂಪವನ್ನು ಕೊಟ್ಟು ಅದಕ್ಕೆ ಒಂದು ಆಕಾರವನ್ನಾಗಿ ಮಾಡಿ ಇಡೀ ಜಗತ್ತಿಗೆ ಪರಿಚಯಿಸಿದ ಕೀರ್ತಿ ಲೂಯಿಸ್ ಲೂಮಿಯೇರ್ ಮತ್ತು ಆಗಸ್ಟ್ ಲೂಮಿಯೇರ್ ಎಂಬುವವರಿಗೆ ಸಲ್ಲುತ್ತದೆ. ಚಲನಚಿತ್ರಕ್ಕೆ ನಿರ್ದಿಷ್ಟ ರೂಪವನ್ನು ನೀಡಿ ಜಗತ್ತೇ ಮೂಗಿನ ಮೇಲೆ ಬೆಟ್ಟು ಇಟ್ಟುಕೊಳ್ಳುವಂತೆ ಮಾಡುವಲ್ಲಿ ಇವರ ಪ್ರಯತ್ನ ಶ್ಲಾಘನೀಯವಾದುದು. 'ಸಿನಿಮಟೋಗ್ರಾಫಿ' ಎಂಬ ಪ್ರದರ್ಶಕ ಯಂತ್ರವನ್ನು ಸಂಶೋಧಿಸಿಕೊಂಡು ಮತ್ತು ಅದನ್ನು ಸರಿಯಾಗಿ ಬಳಸಿಕೊಂಡು ಇವರು ಮೊದಲ ಬಾರಿಗೆ ತಮ್ಮ ಸಿನಿಮಾವನ್ನು ಜನತೆಯ ಮುಂದೆ ಪ್ರದರ್ಶನ ಮಾಡಿದರು. "ಲಂಚ್ ಅವರ್ ಯಟ್ ದಿ ಲುಮಿಯೇರ್ ಫ್ಯಾಕ್ಟರಿ" ಎಂಬ ಕಿರುಚಿತ್ರವನ್ನು ೧೮೯೫ರ ಮಾರ್ಚ್ ೦೮ರಂದು 'SDEIN'ನಲ್ಲಿ ಪ್ರದರ್ಶಿಸಲಾಯಿತು. ನಂತರದಲ್ಲಿ ಅದೇ ಮುಂದಿನ ಡಿಸೆಂಬರ್‌ನಲ್ಲಿ ಸಾರ್ವಜನಿಕವಾಗಿ ಚಿತ್ರ ಪ್ರದರ್ಶನವನ್ನು ಹಣಕ್ಕಾಗಿ ಏರ್ಪಡಿಸಿ ಅಲ್ಲಿಯೂ ಸಹ ಹೆಚ್ಚಿನ ಮೆಚ್ಚುಗೆಯನ್ನು ಗಳಿಸಿದರು. ಇದನ್ನೇ ಚಲನಚಿತ್ರದ ಜನ್ಮದಿನವೆಂದು ಅದರ ಇತಿಹಾಸದಿಂದ ತಿಳಿದುಬರುತ್ತದೆ.

ಲುಮಿಯೇರ್ಸ್ ಸಹೋದರರ ಕಾಲದಲ್ಲಿ ವಿಜ್ಞಾನವು ಹೆಚ್ಚಾಗಿ ಬೆಳೆದಿರಲಿಲ್ಲ. ಇವರ ಕಾಲದಲ್ಲಿ ಕ್ಯಾಮೆರಾ ಮತ್ತು ಪ್ರೋಜೆಕ್ಟರ್‌ಗಳು ಬೇರೆ ಬೇರೆ ಇರಲಿಲ್ಲ. ಅವೆರಡೂ ಸಹ ಒಂದರೊಳಗೊಂದೇ ಕೆಲಸ ಮಾಡುತ್ತಿದ್ದವು. ನಂತರದ ಕಾಲದಲ್ಲಿ ಇವೆರಡೂ ಬೇರೆ ಬೇರೆಯಾಗಿ ಕೆಲಸ ನಿರ್ವಹಿಸಲಾರಂಭಿಸಿದವು. ಇಲ್ಲಿಯವರೆಗೂ ಸಿನಿಮಾಕ್ಕೆ ಧ್ವನಿವರ್ಧಕಗಳು ಇರಲಿಲ್ಲ ಮತ್ತು ಅವು ಸಿನಿಮಾ ಮಾಧ್ಯಮದಲ್ಲೂ ಕಂಡುಬರುತ್ತಿರಲಿಲ್ಲ. ಆದರೆ ೧೯೨೬ರ ಹೊತ್ತಿಗೆ 'ಡಾನ್ ಜಾನ್', 'ದಿ ಜಾಝು ಸಿಂಗರ್' ಮುಂತಾದ ಸಿನಿಮಾಗಳಲ್ಲಿ ಈ ರೀತಿಯ ಧ್ವನಿವರ್ಧಕಗಳೂ ಸಹ ಕೂಡಿಕೊಂಡು ಸಿನಿಮಾವನ್ನು ನೋಡುವಂತಾಯಿತು. ಇಲ್ಲಿಯವರೆಗೂ ಕೇವಲ ಧ್ವನಿಯಿಲ್ಲದ ಮೂಕಿಚಿತ್ರಗಳನ್ನು ನೋಡಬೇಕಾಗಿದ್ದು, ಈ ಧ್ವನಿವರ್ಧಕಗಳ ನಂತರ ಒಂದೊಂದಾಗಿ ವರ್ಣ, ಶೈಲಿ ಮುಂತಾದ ಹಲವು ಬದಲಾವಣೆಗಳು ಕಂಡುಬರಲು ಸಾಧ್ಯವಾಯಿತು.

## ೨.೧ ಭಾರತದಲ್ಲಿ ಚಲನಚಿತ್ರ ಬೆಳವಣಿಗೆ :

"ಚಲನಚಿತ್ರಕ್ಕೆ ಮೊದಲ ಯಾಂತ್ರಿಕ ರೂಪ ಸೃಷ್ಟಿಯಾಗಿದ್ದು ನೂರಾರು ಮಾದರಿಯ 'ಮ್ಯಾಜಿಕ್ ಲಾಂಥ್ರ'ದ ಮೂಲಕ. ಅಂದರೆ ಬಿಡಿಬಿಡಿಯಾಗಿ ಕಲಾವಿದರು ರಚಿಸಿದ ಚಿತ್ರಗಳನ್ನು ಸರಣಿಯಾಗಿ ವೃತ್ತಾಕಾರದ ರಾಟೆಯಲ್ಲಿ ಅಳವಡಿಸಿ ತಿರುಗಿಸಿದಾಗ ಅದು ಸೃಷ್ಟಿಸುತ್ತಿದ್ದ ಚಲನೆಯ ಭ್ರಮೆ ಚಲನಚಿತ್ರದ ಪ್ರಥಮ ತಳಹದಿ ಎನ್ನಬಹುದು"[೧]. ಚಲನಚಿತ್ರ ಒಟ್ಟಾರೆಯಾಗಿ ರೂಪುಗೊಳ್ಳಲಿಕ್ಕೆ ಮೂಲ ಕಾರಣವಾಗಿರುವುದು ಈ ಮ್ಯಾಜಿಕ್ ಲಾಂಥ್ರಗಳೇ ಎನ್ನಬಹುದು. ಈ ಮ್ಯಾಜಿಕ್ ಲಾಂಥ್ರದ ನಂತರದಲ್ಲಿ ಅನೇಕ ಸಂಶೋಧನೆಗಳು ಈ ಚಲನಚಿತ್ರಗಳನ್ನು ತಯಾರಿಸುವ ಹಂತದಲ್ಲಿ ನಂತರ ಕಾಣಿಸಿಕೊಂಡದ್ದೇ ಕ್ರೋನೋ ಫೋಟೋಗ್ರಫಿ. ಈ ನಂತರದಲ್ಲಿ ೧೮೭೩ರಿಂದ ೧೮೯೫ರವರೆಗೆ ಅಂದರೆ ಲುಮೆಯರ್ ಸಹೋದರರು ಸಿನಿಮಾವನ್ನು ಪ್ರದರ್ಶನ ಮಾಡುವವರೆಗೂ ಈ ನಿಟ್ಟಿನಲ್ಲಿ ಅನೇಕ ಸಂಶೋಧನೆಗಳು ನೆಡೆದಿವೆ. ಲೂಮಿಯೇರ್ ಸಹೋದರರಿಗಿಂತಲೂ ಪೂರ್ವದಲ್ಲಿಯೇ ಹಲವಾರು ಸಂಶೋಧನೆಗಳು ನೆಡೆದಿದ್ದರೂ ಥಾಮಸ್ ಆಲ್ವ ಎಡಿಸನ್ ಅವರ ಸಂಶೋಧನೆ ಈ ಲೂಮಿಯೇರ್ ಸಹೋದರರಿಗೆ ಹೆಚ್ಚಿನ ಅನುಕೂಲವನ್ನು ಮಾಡಿಕೊಟ್ಟಿತು.

ಸಿನಿಮಾ ಎನ್ನುವುದು ಆವಿಷ್ಕಾರವಾದ ನಂತರದಲ್ಲಿ ಇದು ಅನೇಕ ದೇಶಗಳಲ್ಲಿ ತನ್ನ ಛಾಪನ್ನು ಮೂಡಿಸಿತು. ಫ್ರಾನ್ಸಿನಲ್ಲಿ ಲುಮೈಯರ್ ಸಹೋದರರು ಚಲನಚಿತ್ರವನ್ನು ಆವಿಷ್ಕರಿಸಿ ಅದನ್ನು ಪ್ರದರ್ಶಿಸಿದ ನಂತರದಲ್ಲಿ ಜಗತ್ತಿನಾದ್ಯಂತ ಸಿನಿಮಾ ರಂಗವು ಪ್ರವೇಶವನ್ನು ಪಡೆಯಿತು. ಮೊಟ್ಟಮೊದಲ ಸಿನಿಮಾವು ಪ್ರದರ್ಶನವಾದ ತರುವಾಯ ನಾಲ್ಕು ತಿಂಗಳ ನಂತರದಲ್ಲಿ ರಷ್ಯಾ ದೇಶದಲ್ಲಿ ಯಾಂತ್ರಿಕವಾಗಿ ಸಿನಿಮಾ ಸೃಷ್ಟಿಯು ಸಾಧ್ಯವಾಯಿತು. ರಷ್ಯಾ ದೊರೆಯಾದ ಎರಡನೇ ನಿಕೋಲಸ್ ಸಿಂಹಾಸನಾರೂಢನಾಗಿ ಅಧಿಕಾರ ಸ್ವೀಕರಿಸುವ ಸಮಾರಂಭವನ್ನು ಚಿತ್ರೀಕರಿಸಿ ರಷ್ಯಾದಲ್ಲಿ ಪ್ರದರ್ಶನವನ್ನು ಮಾಡಲಾಯಿತು. ಇದಾದ ನಂತರದಲ್ಲಿ ಅನೇಕ ದೇಶಗಳು ಮುಂದೆ ಸಿನಿಮಾವನ್ನು ತಮ್ಮ ದೇಶಗಳಲ್ಲಿ ಮನರಂಜನೆಯ ಉದ್ದೇಶಕ್ಕಾಗಿ ಹಾಗೂ ಆವಿಷ್ಕಾರದ ಹಿನ್ನೆಲೆಯಲ್ಲಿ ಸಿನಿಮಾವನ್ನು ವ್ಯಾಪಕವಾಗಿ ಬಳಕೆಗೆ ತರುವ ಪ್ರಯತ್ನವನ್ನು ಮಾಡಿದವು.

ಫ್ರಾನ್ಸ್, ರಷ್ಯಾ ನಂತರದಲ್ಲಿ ಇಟಲಿ, ಸ್ಪೇನ್, ಇರಾನ್, ಮೆಕ್ಸಿಕೋ, ರುಮೇನಿಯಾ, ಟರ್ಕಿ, ಸ್ವೀಡನ್, ಆಫ್ರಿಕಾ, ಈಜಿಪ್ಟ್, ನೈಜೀರಿಯಾ, ಸ್ವಿಟ್ಜರ್‌ಲ್ಯಾಂಡ್, ಚೀನಾ, ಆಸ್ಟ್ರೇಲಿಯಾ, ಭಾರತ ಇನ್ನೂ ಮುಂತಾದ ಅನೇಕ ದೇಶಗಳಲ್ಲಿ ಸಿನಿಮಾ ಎನ್ನುವ ಪ್ರಕ್ರಿಯೆಯನ್ನು ಆರಂಭಿಸಿದುದನ್ನು ಕಾಣಬಹುದಾಗಿದೆ.

### ಭಾರತದಲ್ಲಿ ಸಿನಿಮಾ ರಂಗದ ಪ್ರವೇಶ :

ಭಾರತವು ಹಲವು ಭಿನ್ನ ಜನರ, ಭಿನ್ನ ಭಾಷೆಗಳ, ಹಲವು ವೈವಿಧ್ಯಪೂರ್ಣವಾದ ಸಂಸ್ಕೃತಿಗಳ ಮಿಶ್ರಣದೊಂದಿಗೆ ಭಾರತ ದೇಶವು ವೈಶಿಷ್ಟ್ಯಪೂರ್ಣವಾಗಿದೆ. ಭಾರತೀಯರು ಸದಾ ಕಾಲ ವೈವಿಧ್ಯಮಯವಾದ ಸಾಂಸ್ಕೃತಿಕ ಪರಿಸರವನ್ನು ತಮ್ಮೊಟ್ಟಿಗೆ ಇಟ್ಟುಕೊಂಡು ಬಂದವರು. ಏಕರೂಪಿಯಾದ ಭಾಷೆಯು

ಭಾರತದಾದ್ಯಂತ ಇಲ್ಲದ ಕಾರಣ ಹಾಗೂ ಬಹುರೂಪಿ ಪ್ರಾದೇಶಿಕ ಭಾಷೆಗಳಿರುವ ಈ ದೇಶದಲ್ಲಿ ಜನರ ಭಾಷಾ ಆಲೋಚನೆಗಳು ಸಹ ಭಿನ್ನವಾಗಿರುತ್ತವೆ. ಭಾರತವು ಹಲವು ವೈವಿಧ್ಯಪೂರ್ಣವಾದ ವಿಭಿನ್ನ ಸಂಸ್ಕೃತಿಗಳನ್ನು, ಭಾಷೆಗಳನ್ನು, ಭಿನ್ನ ಭಿನ್ನ ತಿಳುವಳಿಕೆಗಳನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಇಂತಹ ದೇಶವು ಹಿಂದಿನ ಕಾಲದಿಂದ ರಾಜ-ಮಹಾರಾಜರ ಆಳ್ವಿಕೆಯ ಆದಿಯಿಂದ ಹಿಡಿದು ಇಂದಿನವರೆಗೂ ಈ ರೀತಿಯ ಹಲವು ಭಿನ್ನ ಧರ್ಮ, ಸಂಸ್ಕೃತಿ, ಭಾಷೆ, ಆಚಾರ-ವಿಚಾರಗಳಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿರುವುದನ್ನು ಕಾಣಲು ಸಾಧ್ಯ. ರಾಜರ-ಮಹಾರಾಜರ ಆಳ್ವಿಕೆಯ ಕಾಲದಿಂದಲೂ ಇಂದಿನವರೆಗೂ ಕಲೆಗೆ ಅಪಾರವಾದ ಪ್ರೋತ್ಸಾಹವನ್ನು ನೀಡಿರುವುದನ್ನು ಕಾಣಬಹುದಾಗಿದೆ. ಅಲ್ಲದೇ ಕಲೆಯು ಮನುಷ್ಯನ ಜೀವನದ ಒಂದು ಅವಿಭಾಜ್ಯ ಅಂಗವಾಗಿದ್ದು ಅವನ ಆಂತರ್ಯದಲ್ಲಿ ಆನಂದವನ್ನು ಮನಸ್ಸಿಗೆ ಉಲ್ಲಾಸವನ್ನು ನೀಡುವ ಶಕ್ತಿಯಾಗಿ ರೂಪುಗೊಂಡಿದೆ. ಭಾರತವು ತನ್ನ ನೆರೆಯ ದೇಶಗಳೊಂದಿಗೆ ಸೌಹಾರ್ದಯುತ ಸಂಬಂದವನ್ನು ಹೊಂದಿದ್ದು ಪರಸ್ಪರರಲ್ಲಿ ಕೊಡು-ಕೊಳ್ಳುವಿಕೆಯ ವ್ಯವಹಾರಿಕ ಸಂಬಂಧವು ಹೆಚ್ಚಾಗಿ ಕಂಡುಬರುತ್ತದೆ.

ಲುಮಯರ್ ಸಹೋದರರಿಂದ ಬಹುಶಃ ಚಲನಚಿತ್ರ ರಂಗವು ಮುಂಬರುವ ದಿನಗಳಲ್ಲಿ ಭಾರತ ಸೇರಿದಂತೆ ಇನ್ನುಳಿದ ದೇಶಗಳಿಗೂ ಸಹ ವ್ಯಾಪಕವಾಗಿ ಪ್ರಚಾರಕ್ಕೆ ಬಂದಿತು. ಪ್ರಪಂಚದ ಅನೇಕ ದೇಶಗಳಲ್ಲಿ ತಮ್ಮ ಚಲನಚಿತ್ರದ ತುಣುಕುಗಳನ್ನು ಪ್ರದರ್ಶಿಸಲು ಈ ಸಹೋದರರು ಪ್ರಯತ್ನಪಟ್ಟರು. ಅಂತೆಯೇ ೧೮೯೬ರಲ್ಲಿ ಮುಂಬಯಿಯ 'ವ್ಯಾಟಸನ್' ಹೋಟೆಲ್‌ನಲ್ಲಿ ತಾವು ತಂದಿದ್ದ ಚಲನಚಿತ್ರಗಳನ್ನು ಚಿತ್ರೀಕರಿಸಿ ಪ್ರದರ್ಶನ ಮಾಡಿದರು. ತಾವು ನಿರೀಕ್ಷಿಸಿದಂತೆ ಭಾರತೀಯರಲ್ಲಿ ಇವರ ಈ ಕ್ರಿಯಾತ್ಮಕ ಚಟುವಟಿಕೆ ಆಕರ್ಷಣೆಯನ್ನು ಉಂಟುಮಾಡಿತಾದರೂ ಇದಕ್ಕೂ ಪೂರ್ವದಲ್ಲಿ ಭಾರತದಲ್ಲಿಯೇ ಇದ್ದ ಜನಪದ ಕಲೆಗಳನ್ನು ಅಲ್ಪಮಟ್ಟಿಗೆ ಈ ಚಲನಚಿತ್ರಗಳು ಹೋಲುತ್ತಿದ್ದರಿಂದಾಗಿ ಇದೇನೂ ಹೊಸದಾದ ಪ್ರಭಾವವನ್ನು ಇಲ್ಲಿ ಬೀರಲು ಅಷ್ಟರ ಮಟ್ಟಿಗೆ ಯಶಸ್ವಿಯಾಗಲಿಲ್ಲ ಎಂದೇ ಹೇಳಬೇಕಾಗುತ್ತದೆ.

ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ಚಲನಚಿತ್ರವನ್ನು ಚಿತ್ರೀಕರಿಸಿ ಅದನ್ನು ತೆರೆಯ ಮೇಲೆ ಪ್ರದರ್ಶಿಸುವಲ್ಲಿ ಬಂಗಾಳಿ ಸಿನಿಮಾದವರು ಪ್ರಮುಖವಾಗಿದ್ದಾರೆ. ಬಂಗಾಳದ 'ಹೀರಾಲಾಲ್ ಸೇನ್' ಅವರು "ದಿ ಫ್ಲವರ್ ಆಫ್ ಪರ್ಷಿಯಾ"(೧೮೯೮) ಎಂಬ ಕಿರುಚಿತ್ರವನ್ನು ನಿರ್ದೇಶಿಸಿ ಪ್ರದರ್ಶಿಸುತ್ತಾರೆ. ರಾಮದಾಸ್ ನಾಯ್ಡು ಅವರು ಬಂಗಾಳಿ ಸಿನಿಮಾ ಕ್ಷೇತ್ರವನ್ನು ಕುರಿತಂತೆ ತಮ್ಮ ಅಭಿಪ್ರಾಯವನ್ನು ಹೀಗೆ ತಿಳಿಸುತ್ತಾರೆ. "ಭಾರತದ ಸಿನಿಮಾ ಚರಿತ್ರೆ ಪ್ರಾರಂಭವಾಗುವುದೇ ಬಂಗಾಳಿ ಸಿನಿಮಾದಿಂದ. ಖ್ಯಾತ ನಿರ್ದೇಶಕ, ರಂಗಭೂಮಿ ಕಲಾವಿದ ಅಮರೇಂದ್ರನಾಥ ದತ್ತ ಸಿನಿಮಾ ಪ್ರದರ್ಶನದಿಂದ ಸಿನಿಮಾ ಪರಿಚಯಿಸಿದವರು. ಪ್ರಥಮ ಬಯೋಸ್ಕೋಪನ್ನು ಸ್ಥಾಪಿಸಿ, ಚಿತ್ರಪ್ರದರ್ಶನ ಮಾಡಿದ ಕೀರ್ತಿಯೂ ಬಂಗಾಳಿಯವರದೇ ಆಗಿದೆ. ಈ ಚಟುವಟಿಕೆ ಪ್ರಾರಂಭವಾದ ಕೆಲವೇ ವರ್ಷಗಳಲ್ಲಿ ಈಗಿನ ಬಾಂಗ್ಲಾ ದೇಶದಲ್ಲಿ ಹುಟ್ಟಿ, ಕಲ್ಕತ್ತಾದಲ್ಲಿ ಬೆಳೆದ ಹೀರಾಲಾಲ್ ಸೇನ್ ಭಾರತ ಚಿತ್ರೋದ್ಯಮದ ನಿರ್ಮಾಪಕ, ನಿರ್ದೇಶಕ ಹಾಗೂ ಸಿನಿಮಾ ಉದ್ಯಮಿಯಾಗಿದ್ದನ್ನು ಪ್ರಪಂಚ ಇತಿಹಾಸವೇ ಗುರ್ತಿಸಿದೆ. ಕಲ್ಕತ್ತಾದಲ್ಲಿ

ರಾಯಲ್ ಬಯೋಸ್ಕೋಪ್ ಕಂಪೆನಿಯನ್ನು ಸ್ಥಾಪಿಸಿ ಅನೇಕ ಪೌರಾಣಿಕ, ಜಾನಪದ ರಂಗ ಪ್ರದರ್ಶನಗಳನ್ನು ಚಿತ್ರಿಸಿ, ಪ್ರದರ್ಶಿಸಿದ ಹೆಗ್ಗಳಿಕೆಯೂ ಹೀರಾಲಾಲ್ ಸೇನರದು"[೨] ಎಂದು ಭಾರತದಲ್ಲಿ ಸಿನಿಮಾ ಎನ್ನುವುದು ಬಂಗಾಳಿಯವರಿಂದಲೇ ಆರಂಭವಾಯಿತು ಎಂಬುದನ್ನು ತಿಳಿಸುತ್ತಾರೆ.

ಮರಾಠಿಯಲ್ಲಿ ಸಿನಿಮಾ ದಾದಾಸಾಹೇಬ ತೋರ್ನೆಯು ಭಾರತದ ಮೊದಲ ಕತೆಯನ್ನೊಳಗೊಂಡ 'ಶ್ರೀ ಪುಂಡಲೀಕ' ಎಂಬ ಮೂಕಿಚಿತ್ರವನ್ನು ೧೮ ಮೇ ೧೯೧೨ರಲ್ಲಿ ನಿರ್ದೇಶಿಸಿದರು. ಇಲ್ಲಿಂದ ಭಾರತದಲ್ಲಿ ಮೂಕಿಚಿತ್ರಗಳ ಆರಂಭವಾಯಿತು. ಈ ಚಿತ್ರ ಭಾರತದಲ್ಲಿನ ಕತೆಯನ್ನು ತಯಾರಿಸಿ ನಿರ್ಮಾಣಗೊಂಡ ಮೊದಲ ಚಲನಚಿತ್ರವಾಗಿದೆ. ಅಂದರೆ ಭಾರತೀಯರೇ ಕತೆಯ ಭಾಗವನ್ನು ರೂಪಿಸಿಕೊಂಡು ಅದನ್ನು ಚಿತ್ರೀಕರಿಸಿ ಬಿಡುಗಡೆಗೊಳಿಸಿದ ಭಾರತದ ಮೊದಲ ಚಿತ್ರವಾಗಿ ಇದು ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿಯವರೆಗೆ ಭಾರತದಲ್ಲಿಯೇ ಚಲನಚಿತ್ರಗಳು ಚಿತ್ರೀಕರಣವಾಗಿದ್ದರೂ ಅದರ ಕತೆಯ ವಸ್ತು ಪಾಶ್ಚಾತ್ಯರದ್ದಾಗಿರುತ್ತಿತ್ತು. ಈ ನಂತರ ಮರಾಠಿಯಲ್ಲಿ ದುಂಡಿರಾಜ್ ಗೋವಿಂದ ದಾದಾ ಸಾಹೇಬ ಫಾಲ್ಕೆ ಅವರು ೧೮ ಮೇ ೧೯೧೩ರಲ್ಲಿ 'ರಾಜಾ ಹರಿಶ್ಚಂದ್ರ' ಎಂಬ ಚಲನಚಿತ್ರವನ್ನು ನಿರ್ಮಿಸಿ ಬಿಡುಗಡೆಗೊಳಿಸುತ್ತಾರೆ. ದಾದಾಸಾಹೇಬ ಫಾಲ್ಕೆಯನ್ನು ಅಧಿಕೃತವಾಗಿ ಭಾರತದ ಮೊದಲ ಸಿನಿಮಾ ನಿರ್ಮಾಪಕನೆಂದು ಕರೆಯಲಾಗಿದೆ.

ಖಾನ್ ಬಹದ್ದೂರ್ ಅರ್ದೇಶಿಕ್ ಇರಾನಿ ಭಾರತದ ವಾಕ್‌ಚಿತ್ರದ ಪಿತಾಮಹನೆಂದು ಗುರ್ತಿಸಲಾಗಿದೆ. ಬಹುಮುಖ ಪ್ರತಿಭೆಯುಳ್ಳ ಇವರು ಕತೆಗಾರ, ಸಿನಿಮಾ ಹಂಚಿಕೆದಾರರಾಗಿ, ಛಾಯಾಚಿತ್ರಗ್ರಾಹರಾಗಿ, ತಂತ್ರಜ್ಞರಾಗಿ, ಕಲಾವಿದರಾಗಿ, ನಿರ್ದೇಶಕರಾಗಿ, ನಿರ್ಮಾಪಕರಾಗಿ ಸಿನಿಮಾ ರಂಗಕ್ಕೆ ಅಪೂರ್ವ ಸೇವೆ ಸಲ್ಲಿಸಿದ್ದಾರೆ. ೧೪ ಮಾರ್ಚ್ ೧೯೩೧ರಲ್ಲಿ 'ಅಲಂ ಅರಾ' ಎಂಬ ವಾಕ್‌ಚಿತ್ರವನ್ನು ಹಿಂದಿಯಲ್ಲಿ ನಿರ್ಮಿಸಿ ಬಿಡುಗಡೆ ಮಾಡಿದರು. ಹಿಂದಿ ಚಿತ್ರದ ಹೆಚ್ಚಿನ ಪ್ರಭಾವ ಮತ್ತು ಪ್ರೇರಣೆ ಗುಜರಾತಿ ಸಿನಿಮಾದ ಮೇಲೆ ಬೀರಿದೆ. ಗುಜರಾತ್‌ನ ಮೊದಲ ಚಲನಚಿತ್ರವಾಗಿ 'ವರಸಿನ್ಹ ಮೆಹ್ತಾ' ಕಂಡುಬಂದಿದ್ದು ೧೯೩೦ರಿಂದ ಈಚೆಗೆ ಸಿನಿಮಾಗಳು ಹೆಚ್ಚು ಪ್ರಚಲಿತಕ್ಕೆ ಬಂದವು. ಹಾಗೆಯೇ ಬಿಹಾರಿ. ಅಸ್ಸಾಂ, ಪಂಜಾಬ್ ಮುಂತಾದ ಭಾಷೆಗಳಲ್ಲಿಯೂ ಸಹ ಅನೇಕ ಚಿತ್ರಗಳು ನಂತರದಲ್ಲಿ ಮೂಡಿಬಂದವು.

**೨.೨ ದಕ್ಷಿಣ ಭಾರತದಲ್ಲಿ ಚಲನಚಿತ್ರ ಪ್ರವೇಶ :**

ದಕ್ಷಿಣ ಭಾರತದಲ್ಲಿ ಪ್ರದರ್ಶನವಾಗುತ್ತಿದ್ದ ಬಹುತೇಕ ಚಿತ್ರಗಳು ಇಂಗ್ಲೆಂಡಿನ ಚಿತ್ರಗಳಾಗಿದ್ದವು. ಫ್ರೆಂಚಿನ 'ಡೂ-ಪಾಂಟ್' ಎಂಬುವನಿಂದ ಫಿಲಂ ಪ್ರೊಜೆಕ್ಟರ್ ಜೊತೆಗೆ ಹಲವಾರು ಮೂಕಿಚಿತ್ರಗಳನ್ನು ಖರೀದಿಸಿ ಮದ್ರಾಸ್ ಪ್ರಾಂತ್ಯದ ಅನೇಕ ನಗರಗಳಲ್ಲಿ, ಟೆಂಟ್‌ಗಳಲ್ಲಿ ಸಿನಿಮಾವನ್ನು ಪರಿಚಯಿಸಿದವರು ಸ್ವಾಮಿಕಣ್ಣ ಹಾಗೂ ವಿನ್ಸೆಂಟ್. ನಂತರ ವಿನ್ಸೆಂಟ್ ಅನೇಕ ಸಂಚಾರಿ ಚಲನಚಿತ್ರಗಳನ್ನು ಜನಪ್ರಿಯಗೊಳಿಸುವಲ್ಲಿ ಯಶಸ್ವಿಯಾದನು. ಮದ್ರಾಸ್ ಪ್ರೆಸಿಡೆನ್ಸಿಯ ಕೊಯಮತ್ತೂರಿನಲ್ಲಿ ಚಲನಚಿತ್ರ ಮಂದಿರವನ್ನು ನಿರ್ಮಿಸಿದನು. ವಿನ್ಸೆಂಟ್ ಯಶಸ್ಸಿನಿಂದ ಪ್ರೇರಿತನಾದ ಛಾಯಾಗ್ರಾಹಕ ರಘುಪತಿ ವೆಂಕಯ್ಯನಾಯ್ಡು ವಸ್ತು ಪ್ರದರ್ಶನವೊಂದರಲ್ಲಿ ಇಟ್ಟಿದ್ದ ಕ್ರೋನ್ ಮೆಗಾ ಫೋನ್ ಎಂಬ ಉಪಕರಣವನ್ನು ಖರೀದಿಸಿದ ಜೊತೆಗೆ ಮದ್ರಾಸಿನಲ್ಲಿ 'ಗೆಯ್ಟ್'

ಥಿಯೇಟರ್' ಎಂಬ ಸಿನಿಮಾ ಮಂದಿರವನ್ನು ಸಹ ಸ್ಥಾಪಿಸಿದ. ಈ ಮೂವರು ಮಾಡಿದ ಕೆಲಸಗಳು ದಕ್ಷಿಣ ಭಾರತದಲ್ಲಿ ಸಿನಿಮಾ ಬೆಳವಣಿಗೆಗೆ ಹೆಚ್ಚು ಪ್ರಚಲಿತಕ್ಕೆ ಬರಲು ಸಹಾಯಕವಾಯಿತು.

ತಮಿಳು ಚಿತ್ರರಂಗಕ್ಕೆ ತಮಿಳಿನ ಅವರ ಸಂಸ್ಕೃತಿಯ ಕೊಡುಗೆ ಅಪಾರವಾಗಿದೆ. ತಮಿಳುನಾಡಿನ ಭಾಷೆ, ಕಲೆ, ಸಾಹಿತ್ಯ, ನೃತ್ಯ, ಜನಪದ ಸಂಸ್ಕೃತಿಯ ಪ್ರಭಾವ ಸಿನಿಮಾ ಕ್ಷೇತ್ರದ ಮೇಲೆ ಹೆಚ್ಚಾಗಿ ಬೀರಿರುವುದನ್ನು ಕಾಣಬಹುದು. ಈ ನೆಲೆಯಲ್ಲಿ ತಮಿಳು ಚಿತ್ರರಂಗದ ಮೇಲೆ ಪ್ರೇಕ್ಷಕರ ಆಕರ್ಷಣೆ ಹೆಚ್ಚಾಗಿರುವುದನ್ನು ಗಮನಿಸಬಹುದಾಗಿದೆ. ಹಿಂದಿಯನ್ನು ಬಿಟ್ಟರೆ ಭಾರತದಲ್ಲಿ ಅತಿ ಹೆಚ್ಚು ಚಲನಚಿತ್ರ ಉದ್ಯಮದಲ್ಲಿ ತಮಿಳು, ತೆಲುಗು ಭಾಷೆಗಳು ನಂತರದ ಸ್ಥಾನದಲ್ಲಿ ಹೆಚ್ಚು ಜನಪ್ರಿಯತೆಯನ್ನು ಪಡೆದಿರುವುದು ಕಂಡುಬರುತ್ತದೆ. ನಟರಾಜ್ ಮೊದಲಿಯಾರ್ ಅವರು ೧೯೧೬ರಲ್ಲಿ 'ಕೀಚಕ ವಧಮ್' ಎಂಬ ಮೂಕಿಚಿತ್ರವನ್ನು ಮೊದಲ ಬಾರಿಗೆ ತಮಿಳಿನಲ್ಲಿ ನಿರ್ಮಿಸಿ ನಿರ್ದೇಶಿಸಿರುವುದನ್ನು ಕಾಣಬಹುದು. ಅಲ್ಲದೇ ಹೆಚ್.ಎಮ್.ರೆಡ್ಡಿ ಅವರು ತಮಿಳಿನ ಮೊದಲ ವಾಕ್ಚಿತ್ರ 'ಕಾಳಿದಾಸ'ನನ್ನು ಬಿಡುಗಡೆಗೊಳಿಸಿದರು. ಇದು ದಕ್ಷಿಣ ಭಾರತದ ಮೊದಲ ವಾಕ್ಚಿತ್ರವೂ ಸಹ ಇದಾಗಿದೆ.

ತೆಲುಗು ಚಿತ್ರರಂಗದಲ್ಲಿ ೧೯೧೪ರಲ್ಲಿ ರಘುಪತಿ ವೆಂಕಯ್ಯನಾಯ್ಡು ಅವರ ಮದ್ರಾಸಿನ ಸಂಚಾರಿ ಸಿನಿಮಾದಿಂದ ಸಿನಿಮಾದ ಪ್ರದರ್ಶನ ರೂಪುಗೊಂಡಿತು. ರಘುಪತಿನಾಯ್ಡು ಅವರ ಮಗ ಪ್ರಕಾಶ್ ತಮ್ಮ ಸಂಸ್ಥೆಯಡಿ ಮೂಕಿಚಿತ್ರಗಳನ್ನು ನಿರ್ಮಿಸಿದ್ದನ್ನು ಕಾಣಬಹುದು. ಯರಗುಡಿಪಾಟಿ ವರದರಾವ್ ಅವರು ನಿರ್ದೇಶಕರಾಗಿ ಪಾಂಡವ ನಿರ್ವಾಣಂ, ಪಾಂಡವ ಅಜ್ಞಾವಾಸಂ ಮುಂತಾದ ಚಿತ್ರಗಳನ್ನು ನಿರ್ದೇಶಿಸಿದರು. ೧೯೩೧ರಲ್ಲಿ ಹೆಚ್.ಎಂ.ರೆಡ್ಡಿ ಅವರ ನಿರ್ದೇಶನದಲ್ಲಿ ಮೂಡಿಬಂದ ಆದೇಶಿಕ್ ಇರಾನಿ ನಿರ್ಮಿಸಲ್ಪಟ್ಟ 'ಭಕ್ತ ಪ್ರಹ್ಲಾದ' ಮೊದಲ ವಾಕಿ ಚಿತ್ರವಾಗಿ ತೆಲುಗಿನಲ್ಲಿ ತೆರೆಕಂಡಿತು.

ಅಂತೆಯೇ ಮಲಯಾಳಂ ಭಾಷೆಯಲ್ಲಿ ಚಿತ್ರರಂಗವು ಸಹ ಉದಯಗೊಂಡಿತು. ಮಲಯಾಳಂನ ಮೊದಲ ಮೂಕಿಚಿತ್ರ 'ವಿಗಡ ಕುಮಾರನ್' ೧೯೩೦ರಲ್ಲಿ ಬಿಡುಗಡೆಯಾಯಿತು. ಇದನ್ನು ನಿರ್ದೇಶಿಸಿದ ಹಾಗೂ ನಿರ್ಮಿಸಿದ ಜೆ.ತ್ಯಾಗಿಯಲ್ ಅವರನ್ನು ಮಲಯಾಳಂ ಚಿತ್ರರಂಗದ ಪಿತಾಮಹನೆಂದು ಗುರುತಿಸಲಾಗಿದೆ. ಎರಡನೇ ಚಿತ್ರ ಸಿ.ವಿ.ರಾಮನ್ ಪಿಳ್ಳೈ ಅವರ ಖ್ಯಾತ ಕಾದಂಬರಿ ಆಧಾರಿತ ಚಿತ್ರವನ್ನು 'ಮಾರ್ತಾಂಡ' ಎಂಬ ಹೆಸರಿನಿಂದ ತಯಾರಿಸಲಾಯಿತು. ಆರ್. ಸುಂದರರಾಜ್ ಅವರು ಈ ಸಿನಿಮಾವನ್ನು ನಿರ್ದೇಶಿಸಿದರು. ಮಲಯಾಳಂನ ಮೊಟ್ಟ ಮೊದಲ ವಾಕ್ ಚಿತ್ರ ಎಂದು ೧೯೩೮ರಲ್ಲಿ ತಯಾರಾದ 'ಬಾಲನ್' ಚಿತ್ರವನ್ನು ಗುರ್ತಿಸಲಾಗಿದೆ. ಈ ಚಿತ್ರವನ್ನು ಎಸ್.ನಿಟ್ಟಾನಿ ಅವರು ನಿರ್ದೇಶಿಸಿ ಪ್ರದರ್ಶಿಸಿದರು.

## ೨.೩ ಕನ್ನಡದಲ್ಲಿ ಚಲನಚಿತ್ರದ ಬೆಳವಣಿಗೆ :

ಭಾರತದಲ್ಲಿ ಸಿನಿಮಾರಂಗವು ಬಂಗಾಲಿ, ಗುಜರಾತ್, ಮುಂಬೈ, ತೆಲುಗು, ತಮಿಳುನಲ್ಲಿ ಬೆಳೆದುಬಂದಂತೆ ಕನ್ನಡದಲ್ಲೂ ಸಹ ತನ್ನ ಪ್ರಖರತೆಯನ್ನು ಬೀರಿ ಚಲನಚಿತ್ರಗಳು ರಚನೆಯಾದವು. ಕನ್ನಡದಲ್ಲಿ ಆರಂಭದಲ್ಲಿ ಸಿನಿಮಾ ರಂಗದ ಬೆಳವಣಿಗೆ ಬಹಳ ಹಿಂದೆ ಉಳಿದಿತ್ತು. ಇಲ್ಲಿನ ಸಾಂಸ್ಕೃತಿಕ ವಾತಾವರಣ ಹಾಗೂ

ಮುಂತಾದ ಕಾರಣಗಳಿಂದ ಸಿನಿಮಾ ಎನ್ನುವುದು ತುಂಬಾ ನಿಧಾನವಾಗಿ ಕನ್ನಡದಲ್ಲಿ ಉದಯವಾಯಿತು. ಕನ್ನಡ ಸಿನಿಮಾ ಕ್ಷೇತ್ರಕ್ಕೆ ರಂಗಭೂಮಿಯು ನೀಡಿರುವಂತಹ ಕಾಣಿಕೆಯು ಅಪಾರವಾದುದು. ಅನೇಕ ಕಲಾವಿದರು, ನಿರ್ದೇಶಕರು, ತಂತ್ರಜ್ಞರು, ನಿರ್ಮಾಪಕರುಗಳು ಸಿನಿಮಾ ಕ್ಷೇತ್ರಕ್ಕೆ ಸಾಕಷ್ಟು ಕೆಲಸವನ್ನು ಮಾಡಿದ್ದಾರೆ. ೧೮೯೫ರಲ್ಲಿಯೇ ಸಿನಿಮಾ/ಚಲನಚಿತ್ರದ ಉಗಮವಾದರೂ ದಕ್ಷಿಣ ಕರ್ನಾಟಕದಲ್ಲಿ ಅದರ ಹುಟ್ಟು ಪಡೆಯಲು ಸಾಕಷ್ಟು ಸಮಯವನ್ನು ತೆಗೆದುಕೊಂಡಿತು. ಕರ್ನಾಟಕದಲ್ಲಿ ಸಿನಿಮಾ ರಂಗ ಪ್ರವೇಶಕ್ಕೂ ಮುನ್ನ ನಾಟಕಗಳು ಹೆಚ್ಚು ಪ್ರಚಲಿತದಲ್ಲಿದ್ದರಿಂದ ಸಿನಿಮಾದಲ್ಲಿ ಕಾಣಬಹುದಾಗಿದ್ದ ಯಾವೊಂದು ಹೊಸತನ್ನು ನಿಬ್ಬೆರಗಾಗಿ ನೋಡುವ ಕೌತುಕವನ್ನು ಇಲ್ಲಿನ ಪ್ರೇಕ್ಷಕರು ಬೆಳೆಸಿಕೊಳಲಿಲ್ಲ. ಅಂದರೆ ಸಿನಿಮಾ ಕ್ಷೇತ್ರದ ತಂತ್ರಜ್ಞಾನವನ್ನು ಹೊರತುಪಡಿಸಿದರೆ ಇನ್ನುಳಿದಂತಹ ನಟ, ಅಭಿನಯ, ನಿರ್ದೇಶನ ಮುಂತಾದವುಗಳನ್ನೆಲ್ಲಾ ನಾಟಕದಲ್ಲೂ ಕಂಡಿದ್ದರಿಂದ ಸಿನಿಮಾ ಎನ್ನುವುದಕ್ಕೆ ಹೆಚ್ಚಿನ ಒಲವು ತೋರಿಸಲಿಲ್ಲ ಎಂದೇ ಹೇಳಬಹುದಾಗಿದೆ. ಮೂಕಿಚಿತ್ರಗಳು ಆರಂಭ ಕಂಡುಕೊಂಡು ಆಗಲೇ ೨೫ ವರ್ಷಗಳು ಕಳೆದ ನಂತರದಲ್ಲಿ ಕರ್ನಾಟಕದಲ್ಲಿ ಚಲನಚಿತ್ರಗಳ ತಯಾರಿಕೆಯು ಕಂಡುಬಂದಿತು.

## ೨.೩.೧ ಕನ್ನಡದಲ್ಲಿ ಮೂಕಿಚಿತ್ರಗಳ ಬೆಳವಣಿಗೆ :

ಕನ್ನಡದಲ್ಲಿ ಮೂಕಿಚಿತ್ರಗಳ ಉಗಮದ ಕುರಿತಂತೆ ಸಾಕಷ್ಟು ವಾದವಿವಾದಗಳಿವೆ. ೧೯೨೯ರಲ್ಲಿ ಬೆಂಗಳೂರಿನಲ್ಲಿ ತಯಾರಾದ 'ವಸಂತಸೇನ' ಎಂಬ ಚಲನಚಿತ್ರವೇ ಕನ್ನಡದ ಮೊದಲ ಮೂಕಿಚಿತ್ರವೆಂದು ವಿದ್ವಾಂಸರ ಅಭಿಮತವಾಗಿದೆ. ಆದರೆ ಇದಕ್ಕೂ ಪೂರ್ವದಲ್ಲಿ ಕನ್ನಡದಲ್ಲಿ ಚಲನಚಿತ್ರ ಉಗಮವನ್ನು ಕುರಿತ ಹಲವು ಪ್ರಯತ್ನಗಳು ನಡೆದಿರುವುದನ್ನು ಕಾಣಬಹುದಾಗಿದೆ. "೧೯೨೧ರಲ್ಲಿ 'ರತ್ನಾವಳಿ ಥಿಯೇಟ್ರಿಕಲ್ ಕಂಪೆನಿ'ಯ ಎ.ವಿ.ವರದಾಚಾರ್ಯರು ಅರಮನೆಯಲ್ಲಿ ನಿರುಪಮಾ ನಾಟಕವನ್ನು ಆಡುತ್ತಿದ್ದರು. ಹಲವಾರು ಬಾರಿ ವಿದೇಶ ಪ್ರವಾಸ ಮಾಡಿ ವಿಷಯ ಅರಿತಿದ್ದ ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್‌ರವರು ಕೈಯಿಂದ ಸುತ್ತಿ ತೆಗೆಯುವ ಕ್ಯಾಮೆರಾದಿಂದ ಅದನ್ನು ಚಿತ್ರೀಕರಿಸಿದ್ದರು. ಸಂಸ್ಕರಣದ ನಂತರ ಅದನ್ನು ವಿದೇಶಿ ಅತಿಥಿಗಳಿಗೆ ತೋರಿಸುತ್ತಿದ್ದರಂತೆ. ಹೀಗಾಗಿ ಕನ್ನಡ ಚಲನಚಿತ್ರರಂಗದ ಇತಿಹಾಸದಲ್ಲಿ ಎ.ವಿ.ವರದಾಚಾರ್ಯರೇ ಮೊದಲ ನಾಯಕನಟ. ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಅವರೇ ಮೊದಲ ನಿರ್ಮಾಪಕ–ನಿರ್ದೇಶಕ"[3] ಎಂಬ ಅಭಿಪ್ರಾಯವನ್ನು ಗಂಗಾಧರ ಮೊದಲಿಯಾರ್ ಅವರು ವ್ಯಕ್ತಪಡಿಸಿದ್ದಾರೆ.

ಗುಬ್ಬಿ ಕಂಪೆನಿ ಮಾಲೀಕರಾದ ಜಿ.ಎಚ್.ವೀರಣ್ಣ ಅವರು ಸಿನಿಮಾ ರಂಗಕ್ಕೆ ಇದ್ದ ಜನಪ್ರಿಯತೆಯನ್ನು ಮನಗಂಡು ತಾವು ಅಭಿನಯಿಸುತ್ತಿದ್ದ 'ಭಕ್ತ ಕಬೀರ್' ನಾಟಕವನ್ನೇ ಸಿನಿಮಾವನ್ನಾಗಿ ಚಿತ್ರಿಸುವ ಆಲೋಚನೆಯನ್ನು ಮಾಡಿದರು. ಈ ಗುಬ್ಬಿ ಕಂಪೆನಿಯು ತರೀಕೆರೆ ಸಂತೆ ಮೈದಾನದಲ್ಲಿ ಕ್ಯಾಂಪ್ ಹಾಕಿ ನಾಟಕವನ್ನು ಪ್ರದರ್ಶಿಸಿದ್ದನ್ನು ಮದರಾಸಿನ ರಂಗಯ್ಯನಾಯ್ಡು ಅವರು ತಮ್ಮ ಸಂಸ್ಥೆಯ ವತಿಯಿಂದ ನಾಟಕ ನಡೆಯುತ್ತಿರುವಾಗಲೇ ನಾಲ್ಕು ದಿನಗಳ ಕಾಲ ಚಿತ್ರೀಕರಿಸಿದರು. ನಾಟಕದಲ್ಲಿ ಸಿ.ಬಿ.ಮಲ್ಲಪ್ಪನವರು ಕಬೀರ್ ಪಾತ್ರವನ್ನು ನಿರ್ವಹಿಸಿದ್ದರು. ಆದರೆ ಈ ಚಿತ್ರೀಕರಣವಾಗುತ್ತಿದ್ದ ನಾಟಕವು ಭಾರೀ ಮಳೆಯಿಂದ ರಂಗಮಂದಿರ ಬಿದ್ದು ಕೊಚ್ಚಿ ಹೋಗಿದ್ದಲ್ಲದೇ ಚಿತ್ರೀಕರಣವಾಗಿದ್ದ ಸಿನಿಮಾ ಕೂಡ ನೀರು ಪಾಲಾಯಿತು.

ಗುಬ್ಬಿ ವೀರಣ್ಣನವರು ಬೆಂಗಳೂರಿನಲ್ಲಿ 'ಕರ್ನಾಟಕ ಫಿಲಂ ಸ್ಟುಡಿಯೋ'ವನ್ನು ಪ್ರಾರಂಭಿಸಿ ಮೂಕಿಚಿತ್ರಗಳ ತಯಾರಿಕೆಗೆ ಭೂಮಿಕೆಯನ್ನು ನಂತರದಲ್ಲಿ ಸ್ಥಾಪಿಸಿದರು. ಈ ಸಂಸ್ಥೆ ವೈ.ವಿ.ರಾವ್ ಅವರ ನಿರ್ದೇಶನದಲ್ಲಿ 'ಹರಿಮಾಯ' ಎಂಬ ಮೂಕಿ ಚಿತ್ರವನ್ನು ತಯಾರಿಸಿತು.

೧೯೨೯ರಲ್ಲಿ ಬೆಂಗಳೂರಿನಲ್ಲಿ ತಯಾರಾದ ವಸಂತಸೇನ ಭಾರತೀಯ ಮೂಕಿಚಿತ್ರಗಳ ಸಾಲಿನಲ್ಲಿ ಅಭೂತಪೂರ್ವ ಯಶಸ್ಸನ್ನು ಕಂಡಿದ್ದಲ್ಲದೇ ಮುಂದೆ ಮೂಕಿಚಿತ್ರಗಳ ನಿರ್ಮಾಣಕ್ಕೆ ತೊಡಗಿಕೊಳ್ಳಲು ಭದ್ರಬುನಾದಿಯನ್ನು ಹಾಕಿಕೊಟ್ಟಿತು. ಮೈಸೂರಿನ ದಸರಾ ಮಹೋತ್ಸವವನ್ನು ಸಾಕ್ಷಚಿತ್ರವನ್ನಾಗಿ ಮಾಡಲು ಬಂದಿದ್ದ ಮುಂಬೈನ ಮೋಹನ್ ಭಗವಾನ್ ಮತ್ತು ನಾಟಕಕಾರರಾದ ಟಿ.ಪಿ.ಕೈಲಾಸಂ ಅವರು ಶೂದ್ರಕ ಕವಿಯ 'ಮೃಚ್ಛುಕಟಿಕ' ನಾಟಕವನ್ನು ಸಿನಿಮಾವನ್ನಾಗಿ ಮಾಡಬೇಕೆಂದು ನಿರ್ಧರಿಸಿದರು. ಈ ಹಂತದಲ್ಲಿಯೇ ಮೃಚ್ಛುಕಟಿಕ ನಾಟಕವನ್ನು ವಸಂತಸೇನ ಎಂಬುದಾಗಿ ಮೂಕಿಚಿತ್ರವನ್ನು ತಯಾರಿಸಿದರು. ಈ ಚಿತ್ರದಲ್ಲಿ ಮೋಹನ್ ಭಗವಾನಿ ಅವರು ನಿರ್ದೇಶಕರಾಗಿ, ಜಿ.ವೆಂಕಟಾಚಲಂ ಅವರು ಕಲಾನಿರ್ದೇಶಕರಾಗಿ ಕೆಲಸ ನಿರ್ವಹಿಸಿದರೆ; ಶಕಾರನ ಪಾತ್ರದಲ್ಲಿ ಕೈಲಾಸಂ ಅವರು, ಚಾರುದತ್ತನ ಪಾತ್ರದಲ್ಲಿ ಜಿ.ಕೆ.ನಂದಾ, ವಸಂತಸೇನಾ ಪಾತ್ರದಲ್ಲಿ ಏಣಾಕ್ಷಿ ಅವರು ಕಾಣಿಸಿಕೊಂಡರು.

ಇದೇ ಸಮಯದಲ್ಲಿ ಬೆಂಗಳೂರಿನಲ್ಲಿ ಮೂಕಿಚಿತ್ರಗಳ ತಯಾರಿಕೆಯಲ್ಲಿ ಅನೇಕ ಕಂಪೆನಿಗಳು ನಿರತವಾಗಿದ್ದವು. ಮುಂಬೈನ ಲಕ್ಷ್ಮಿ ಫಿಲಂ ಕಂಪೆನಿಯ ಪಾಲುದಾರರಾಗಿದ್ದ ಹರಿಭಾಯಿ ದೇಸಾಯಿ ಮತ್ತು ಗೆಳೆಯರು ಬೆಂಗಳೂರಿನ ನಿಸರ್ಗ ಸೌಂದರ್ಯಕ್ಕೆ ಮನಸೋತು ಇಲ್ಲಿಯೇ ದಿವಾನ್ ಮಿರ್ಜಾರವರಿಗೆ ಸೇರಿದ ಬಂಗಲೆಯಲ್ಲಿ ಸ್ಟುಡಿಯೋಂದನ್ನು ಆರಂಭಿಸಿ ೧೯೨೯ ರಿಂದ ೧೯೩೦ರವರೆಗೆ ಸುಮಾರು ೩೯ ಮೂಕಿಚಿತ್ರಗಳನ್ನು ನಿರ್ಮಿಸಿದರು. ಈ ಸೂರ್ಯ ಫಿಲಂ ಕಂಪೆನಿಯು ಬೆಂಗಳೂರಿನಲ್ಲಿ ಸ್ಟುಡಿಯೋವನ್ನು ಪ್ರಾರಂಭಿಸಿ ಮೊದಲ ಮೂಕಿಚಿತ್ರವಾಗಿ ರಾಜಹೃದಯ(೧೯೨೯) ವನ್ನು ಹೊರತಂದಿತು. ಈ ಚಲನಚಿತ್ರಕ್ಕೆ ಲಕ್ಷ್ಮೀಬಾಯಿ ಅವರು ಮೊದಲ ಬಾರಿಗೆ ನಾಯಕಿನಟಿಯಾಗಿ, ಸ್ಟಂಟ್ ಪಾತ್ರಗಳಿಗೆ ಹೆಸರಾಗಿದ್ದ ಗಜಾನನ ಗಣಪತ್ ಬಾಕ್ರೆ ನಾಯಕನಟನಾಗಿಯೂ ಅಭಿನಯಿಸಿದರೆ ಬಾಬುರಾವ್ ಚವಾಣ್ ಸಹಾಯಕರಾಗಿ, ಪವಲಂಕರ್ ಕಲಾನಿರ್ದೇಶಕರಾಗಿ, ಕೇಶವಲಾಲ್ ಜೋಶಿ ಅವರು ನಿರ್ದೇಶಕರಾಗಿ ಕೆಲಸ ನಿರ್ವಹಿಸಿದ್ದರು.

ಸೂರ್ಯ ಫಿಲಂ ಕಂಪೆನಿ ಮತ್ತು ಸ್ಟುಡಿಯೋದ ನಂತರದಲ್ಲಿ ಕರ್ನಾಟಕದಲ್ಲಿ ಅನೇಕರು ಸಿನಿಮಾರಂಗದ ಕಡೆಗೆ ಮುಖಮಾಡುವಂತೆ ಪ್ರೇರೇಪಣೆಯನ್ನು ನೀಡಿತು. ಕನ್ನಡದಲ್ಲಿ ಸಾಹಿತಿಗಳು, ನಾಟಕಕಾರರು, ಹಾಗೂ ಸಾಂಸ್ಕೃತಿಕ ರಂಗದಲ್ಲಿ ಹೆಚ್ಚಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದ ಅನೇಕರು ಸ್ಟುಡಿಯೋಗಳನ್ನು ಸ್ಥಾಪಿಸುವ ಪ್ರಯತ್ನವನ್ನು ಮಾಡಿದರು. ದೇವುಡು ನರಸಿಂಹಶಾಸ್ತ್ರಿ ಅವರು ಗೆಳೆಯರಾದ ಶ್ರೀನಿವಾಸಮೂರ್ತಿ ಅವರೊಂದಿಗೆ ಗುಬ್ಬಿ ವೀರಣ್ಣನವರನ್ನು ಸಂಪರ್ಕಿಸಿ ತಾವು ಸಿನಿಮಾದಲ್ಲಿ ಇಟ್ಟುಕೊಂಡಿದ್ದ ಒಲವನ್ನು ವ್ಯಕ್ತಪಡಿಸುವ ಮೂಲಕ ಕರ್ನಾಟಕ ಪಿಕ್ಚರ್ಸ್ ಕಾರ್ಪೋರೇಷನ್ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಗುಬ್ಬಿ ವೀರಣ್ಣನವರ ಆತ್ಮಕಥೆಯಲ್ಲಿ ತಿಳಿಸುವಂತೆ "ಬೆಂಗಳೂರಿನಲ್ಲಿ ೧೯೨೯ರಲ್ಲಿ ಸಿ.ವಿ.ನರಸಿಂಹ ಅಯ್ಯಂಗಾರ್‌ರವರ ಸ್ಥಳವನ್ನು ಒಂದು ಸಾವಿರ ರೂಪಾಯಿಗಳಂತೆ ೧೨ ವರ್ಷಕ್ಕೆ

ಗೊತ್ತು ಮಾಡಿ ಕರಾರನ್ನು ಮಾಡಿಕೊಂಡು ಥಿಯೇಟರ್ ಕಟ್ಟಿ, ಶಿವಾನಂದ ಥಿಯೇಟರ್ ಎಂಬ ಹೆಸರಿನಿಂದ ದಿವಾನ್ ಮಿರ್ಜಾರವರ ಅಮೃತಹಸ್ತದಿಂದ ೧೯೩೦ನೇ ಮೇ ತಿಂಗಳಲ್ಲಿ ಪ್ರಾರಂಭ ಮಾಡಿಸಿದೆ"[''] ಎನ್ನುತ್ತಾರೆ. ಸಾಂಗ್ ಆಫ್ ಲೈಫ್(ಕಳ್ಳರ ಕೂಟ) ಚಿತ್ರವು ದೇವುಡು ನರಸಿಂಹ ಶಾಸ್ತ್ರಿಗಳ ನೀಳ್ಗತೆ ಆಧರಿಸಿ ತೆಗೆದ ಮೊದಲ ಮೂಕಿಚಿತ್ರವಾಗಿದೆ. ಹರಿಮಾಯ ಚಿತ್ರವನ್ನು ವೈ.ವಿ.ರಾವ್ ನಿರ್ದೇಶಿಸಿದರಲ್ಲದೇ ಕೃಷ್ಣನ ಪಾತ್ರವನ್ನು ಸಹ ನಿರ್ವಹಿಸಿದರು. ಈ ಸಂಸ್ಥೆಯ ಅಡಿಯಲ್ಲಿಯೇ ನಿರ್ಮಾಣವಾದ ಇನ್ನೊಂದು ಚಿತ್ರವೆಂದರೆ ಹಿಸ್ ಲವ್ ಅಫೇರ್. ಈ ಚಿತ್ರವನ್ನು ಎಚ್.ಎಲ್.ಎನ್.ಸಿಂಹ, ಎಂ.ವಿ.ಸುಬ್ಬಯ್ಯ ನಾಯ್ಡು ಅವರು ಸಹನಿರ್ದೇಶಕರಾಗಿ, ಬೆಲ್ಜಿಯಂ ದೇಶೀಯ ಆಲ್‌ಗುಡ್ ಎಂಬ ನಿರ್ದೇಶಕರು ಚಿತ್ರವನ್ನು ನಿರ್ದೇಶಿಸಿದರು.

ಶಿವರಾಮ ಕಾರಂತರು ಸಹ ಸಿನಿಮಾ ಕ್ಷೇತ್ರದಲ್ಲಿ ಆಸಕ್ತಿ ಉಳ್ಳವರಾಗಿದ್ದರಿಂದ ಇವರು ಭೂತರಾಜ್ಯ ಮತ್ತು ಡೊಮಿಂಗೊ ಎಂಬ ಮೂಕಿಚಿತ್ರಗಳನ್ನು ತಯಾರಿಸಿದರು. ಡೊಮಿಂಗೊ ಮೂಕಿಚಿತ್ರವು ಹರಿಜನರನ್ನು ಕುರಿತಾದ ಚಿತ್ರಕತೆಯಾಗಿದೆ. ಇದನ್ನು ಶಿವರಾಮ ಕಾರಂತರೇ ಚಿತ್ರಕತೆಯನ್ನು ಸಿದ್ಧಪಡಿಸಿ ಚಿತ್ರವನ್ನು ತಯಾರಿಸಿದರು. ಕಾರಂತರು ಸ್ವತಃ ತಾವೇ ಮುಂಬೈಗೆ ತೆರಳಿ ಸಿನಿಮಾ ಮೇಲೆ ಸಾಕಷ್ಟು ಅಭ್ಯಾಸವನ್ನು ನೆಡೆಸಿ ಅಲ್ಲಿಂದ ಕೆಲಸವನ್ನು ಕಲಿತು ಬಂದು ಈ ಸಿನಿಮಾವನ್ನು ಮಾಡಿದರು. ಇವರ ಇನ್ನೊಂದು ಚಿತ್ರವಾದ ಭೂತರಾಜ್ಯದಲ್ಲೂ ಸಹ ಸ್ವತಃ ಕಾರಂತರೇ ಕತೆ, ಚಿತ್ರಕತೆ, ಛಾಯಾಚಿತ್ರಣ, ನಿರ್ಮಾಣ, ನಿರ್ದೇಶನವನ್ನು ಮಾಡಿದರು.

### ೨.೩.೨ ಕನ್ನಡದಲ್ಲಿ ವಾಕ್ಚಿತ್ರಗಳ ಬೆಳವಣಿಗೆ :

ವಾಕ್ಚಿತ್ರಗಳು ಭಾರತದಲ್ಲಿ ಪ್ರಥಮವಾಗಿ ಹಿಂದಿಯಲ್ಲಿ ಆಲಂಆರಾ ೧೯೩೧ರಲ್ಲಿ ಬಿಡುಗಡೆಯಾಗಿತ್ತು. ಆದರೆ ಕನ್ನಡದಲ್ಲಿ ಮಾತ್ರ ವಾಕ್ಚಿತ್ರವು ನಿರ್ಮಾಣಗೊಳ್ಳುವುದಕ್ಕೆ ಇನ್ನೂ ಮೂರು ವರ್ಷಗಳು ಕಾಯಬೇಕಾಯಿತು. ಎ.ವಿ.ವರದಾಚಾರ್ಯರ ರತ್ನಾವಳೀ ಥಿಯೇಟ್ರಿಕಲ್ ಕಂಪೆನಿಯ ಮಿತ್ರರು ವರದಾಚಾರ್ಯ ಮೆಮೋರಿಯಲ್ ಟ್ರಸ್ಟ್ ನಿರ್ಮಿಸಿಕೊಂಡು ೧೯೩೩ರಲ್ಲಿ ವಾಕ್ಚಿತ್ರ ನಿರ್ಮಾಣಕ್ಕೆ ತಯಾರಾದರು. ಈ ಹಂತದಲ್ಲಿ ಬೆಂಗಳೂರಿನ ವ್ಯಾಪಾರಿಯೊಬ್ಬರು ಸತಿಸುಲೋಚನ ಎಂಬ ವಾಕ್ಚಿತ್ರವನ್ನು ತಯಾರಿಸಲು ಸಿದ್ಧತೆ ನೆಡೆಸಿದ್ದರು. ಸತಿ ಸುಲೋಚನ ಚಿತ್ರವು ೧೯೩೪ರ ಮಾರ್ಚ್ ೩ರಂದು ತೆರೆಕಂಡಿತು. ಆದರೆ ಇದೇ ಸಂದರ್ಭದಲ್ಲಿ ಭಕ್ತಧ್ರುವ ಚಿತ್ರವು ಸಹ ೧೯೩೩ರಲ್ಲಿ ತಯಾರಿಕೆ ಆರಂಭಿಸಿ ಮೊದಲು ಸೆನ್ಸಾರ್ ಆಗಿದ್ದರೂ ನಂತರದಲ್ಲಿ ಅಂದರೆ ೧೯೩೪ರಲ್ಲಿ ಬಿಡುಗಡೆಯಾಯಿತು. ಈ ಎರಡೂ ಚಿತ್ರಗಳು ಕನ್ನಡದಲ್ಲಿ ವಾಕ್ಚಿತ್ರಗಳ ದೃಷ್ಟಿಯಿಂದ ತುಂಬಾ ಮಹತ್ವಪೂರ್ಣವಾದವುಗಳಾಗಿವೆ.

ಸತಿಸುಲೋಚನ ಚಿತ್ರವನ್ನು ತಯಾರಿಸಲು ಉತ್ತರ ಭಾರತದ ವ್ಯಾಪಾರಸ್ಥನಾಗಿದ್ದ ಚಮನ್‌ಲಾಲ್ ಡೊಂಗಾಜಿ ಅವರು ಸೌತ್ ಇಂಡಿಯಾ ಮೂವಿಟೋನ್ ಲಾಂಛನದಡಿಯಲ್ಲಿ ತಯಾರಿ ನೆಡೆಸಿದ್ದರು. ಚಿತ್ರದ ನಿರ್ದೇಶನವನ್ನು ವೈ.ವಿ.ರಾವ್ ಅವರ ಹೆಗಲಿಗೆ ವಹಿಸಿದ್ದರು. ಇವರು ಈ ಹಿಂದೆ ಅನೇಕ

ಮೂಕಿಚಿತ್ರಗಳನ್ನು ನಿರ್ದೇಶಿಸಿದ್ದರಲ್ಲದೇ ಹೆಚ್ಚಿನ ಪರಿಣಿತಿಯನ್ನು ಪಡೆದವರಾಗಿದ್ದರು. ಈ ಚಿತ್ರವು ಪೌರಾಣಿಕ ವಸ್ತುವಾಗಿದ್ದರಿಂದ ಕತೆ, ಸಂಭಾಷಣೆ, ಹಾಡುಗಳ ರಚಿಸುವ ಜವಾಬ್ದಾರಿಯನ್ನು ಬೆಳ್ಳಾವೆ ನರಹರಿಶಾಸ್ತ್ರಿಗಳಿಗೆ ನೀಡಿದ್ದರು. ಈ ಚಿತ್ರವನ್ನು ಬೆಂಗಳೂರಿನ ಕೆ.ಆರ್.ಮಾರುಕಟ್ಟೆಯ ಮುಂದೆ ಇರುವ ಪ್ಯಾರಾಮೌಂಟ್ ಚಿತ್ರಮಂದಿರದಲ್ಲಿ ಬಿಡುಗಡೆ ಮಾಡಲಾಯಿತು. ಸತಿಸುಲೋಚನ ವಾಕ್ಚಿತ್ರದಲ್ಲಿ ಇಂದ್ರಜಿತ್ ಪಾತ್ರವನ್ನು ನಿರ್ವಹಿಸುವ ಮೂಲಕ ಸುಬ್ಬಯ್ಯನಾಯ್ಡು ಅವರು ಕನ್ನಡದ ಮೊದಲ ನಾಯಕ ನಟರೆನಿಸಿದ್ದಾರೆ. ನಂತರದಲ್ಲಿ ಕನ್ನಡ ಚಿತ್ರರಂಗದಲ್ಲಿ ಸುಮಾರು ೨೮ ಚಲನಚಿತ್ರಗಳು ೧೯೩೪ರಿಂದ ೧೯೫೦ರ ಅವಧಿಯಲ್ಲಿ ತೆರೆಕಂಡವು.

### ೨.೩.೩ ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡದ ಚಲನಚಿತ್ರಗಳು :

ಪ್ರಾರಂಭದಲ್ಲಿ ಕನ್ನಡ ಚಲನಚಿತ್ರಗಳು ಪಾಶ್ಚಾತ್ಯ ಸಿನಿಮಾರಂಗದ ಮೇಲೆ ಅವಲಂಬನೆಯನ್ನು ಹೊಂದಿದ್ದಿತು. ಕಥಾವಸ್ತುವಿನಿಂದ ಹಿಡಿದು ತಾಂತ್ರಿಕ ಸಹಾಯವನ್ನು ಸಹ ಈ ಪಾಶ್ಚಾತ್ಯರಿಂದಲೇ ಪಡೆಯುತ್ತಿದ್ದರು. ವಾಕ್ಚಿತ್ರದ ಬಂದ ತರುವಾಯದಲ್ಲಿ ನಮ್ಮದೇ ಆದ ಸಾಮಾಜಿಕ ಜೀವನದ ಅಂಶಗಳನ್ನು ಇಟ್ಟುಕೊಂಡು ಕಥಾವಸ್ತುಗಳನ್ನು ಸಿದ್ಧಪಡಿಸಲಾಯಿತು. ಗುಬ್ಬಿ ವೀರಣ್ಣನವರು ತಾವು ರಂಗಭೂಮಿಯಲ್ಲಿ ನಾಟಕವಾಡುತ್ತಿದ್ದ ಸದಾರಮೆ ಎಂಬ ನಾಟಕವನ್ನೇ ಚಿತ್ರವನ್ನಾಗಿ ೧೯೩೫ರಲ್ಲಿ ತಯಾರಿಸಿದರು. ಹಾಸ್ಯಪ್ರಧಾನವಾದ ಈ ಚಿತ್ರವು ಮುರಾರ್‍ಚಾರ್, ಕೆ.ಅಶ್ವತ್ಥಾಮ, ಆದಿಮೂರ್ತಿ ಮತ್ತು ಬಿ.ಜಯಮ್ಮ ಅವರು ಅಭಿನಯಿಸಿ ರಾಜ್ ಚಂದ್ರಶೇಖರ್ ಅವರು ನಿರ್ದೇಶಿಸಿದ್ದರು. ಆ ಕಾಲದಲ್ಲಿ ಕರ್ನಾಟಕದ ಸಾಂಸ್ಕೃತಿಕ ವಾತಾವರಣದಲ್ಲಿ ರಂಗಭೂಮಿಗೆ ಇದ್ದಂತಹ ಪ್ರಾಮುಖ್ಯತೆಯನ್ನು ಸಿನಿಮಾವು ಪಡೆದುಕೊಳ್ಳಲು ಸಾಕಷ್ಟು ಪ್ರಯತ್ನ ಮಾಡಬೇಕಾಗಿತ್ತು. ಎಷ್ಟೇ ಬಂಡವಾಳ ಹೂಡಿ ಸಿನಿಮಾವನ್ನು ಮಾಡಿದ್ದರೂ ನಾಟಕಗಳಿಗೆ ಸಿಗುತ್ತಿದ್ದ ಜನಪ್ರಿಯತೆಯನ್ನು ಸಿನಿಮಾ ಕ್ಷೇತ್ರವು ಗಳಿಸಿಕೊಳ್ಳುವುದು ಕಷ್ಟಸಾಧ್ಯವಾಗಿತ್ತು.

ಹೆಚ್.ಎಲ್.ಎನ್.ಸಿಂಹ ಅವರ ನಿರ್ದೇಶನದಲ್ಲಿ ಸೇಲಂ ರಾಜಗೋಪಾಲ ಚೆಟ್ಟಿಯಾರ್ ಸಹೋದರರ ಸಹಭಾಗಿತ್ವದಲ್ಲಿ ೧೯೩೬ರಲ್ಲಿ ಸಂಸಾರನೌಕೆ ಎಂಬ ಸಾಮಾಜಿಕ ಚಿತ್ರವನ್ನು ತಯಾರಿಸಿದರು. ಇದು ದಕ್ಷಿಣ ಭಾರತದ ಮೊದಲ ಸಾಮಾಜಿಕ ಚಿತ್ರ ಎಂಬ ಹೆಗ್ಗಳಿಕೆ ಪಾತ್ರವಾಗಿದೆ. ಸಮಾಜದಲ್ಲಿದ್ದ ಅನ್ಯಾಯ, ಅಕ್ರಮ, ದುರಾಚಾರಗಳನ್ನು ಈ ಚಿತ್ರವು ಪರಿಣಾಮಕಾರಿಯಾಗಿ ತೆರೆಯ ಮೇಲೆ ತಂದಿತು. ಚಿತ್ರದ ತಾರಾಗಣದಲ್ಲಿ ಮುಖ್ಯವಾಗಿ ಬಿ.ಆರ್.ಪಂತುಲು, ಎಂ.ಎಸ್.ಮಾಧವರಾವ್, ಎಂ.ವಿ.ರಾಜಮ್ಮ, ಎಸ್.ಕೆ.ಪದ್ಮಾವತಿ, ವಿ.ಸರೋಜಮ್ಮ ಮೊದಲಾದವರು ಪಾತ್ರನಿರ್ವಹಿಸಿದ್ದರು. ವ್ಯಾಪಾರಿಯಾಗಿದ್ದ ವಿ.ತಿಮ್ಮಯ್ಯ ಅವರು ೧೯೩೬ರ ಜೂನ್‌ನಲ್ಲಿ ಬೆಂಗಳೂರಿನಲ್ಲಿ 'ಮೈಸೂರು ಸೌಂಡ್ ಸ್ಟುಡಿಯೋ'ವನ್ನು ಆರಂಭಿಸಿದರು. ಟಿ.ದ್ವಾರಕನಾಥ್, ಎಂ.ವಿ.ರಾಮನ್‌ಬೊಮನಿರಾನಿ ಮೊದಲಾದ ತಂತ್ರಜ್ಞರ ನೆರವನ್ನು ಪಡೆದು ರಾಜಸೂಯಯಾಗ ಎಂಬ ಚಿತ್ರವನ್ನು ನಿರ್ಮಾಣ ಮಾಡಿದರು. ಇಲ್ಲಿಯವರೆಗೆ ವರ್ಷಕ್ಕೆ ಒಂದೇ ಕನ್ನಡ ಚಿತ್ರ ತೆರೆಕಾಣುತ್ತಿತ್ತು. ಆದರೆ ಸಂಸಾರನೌಕೆ ಚಿತ್ರದ ಯಶಸ್ಸಿನ ಬಳಿಕ ೧೯೩೭ರಲ್ಲಿ ಮೂರುಚಿತ್ರಗಳು ತೆರೆ ಕಂಡವು. ದೇವಿ ಫಿಲಿಂಸ್‌ನವರು ಕನ್ನಡದ ಮೇಲಿನ ಅಭಿಮಾನದಿಂದಾಗಿ 'ಪುರಂದರ ದಾಸ'

ಎಂಬ ಚಿತ್ರವನ್ನು ನಿರ್ಮಿಸಿದರು. ಆದರೆ ಈ ಚಿತ್ರವು ಯಶಸ್ವಿಯಾಗಲಿಲ್ಲ. ಚಿರಂಜಿವಿ ಎಂಬ ಚಿತ್ರವು ಉತ್ತರ ಕರ್ನಾಟಕದವರ ಮೊದಲ ಪ್ರಯತ್ನವಾಗಿ ರೂಪುಗೊಂಡಿದ್ದಿತು. ಈ ಚಿತ್ರಕ್ಕೆ ದೇವುಡು ನರಸಿಂಹ ಶಾಸ್ತ್ರಿಗಳೇ ಸಾಹಿತ್ಯ, ಚಿತ್ರಕಥೆಯನ್ನು ಬರೆದುಕೊಡುವುದರ ಜೊತೆಗೆ ಮೃಕಂಡುಮುನಿಗಳ ಪಾತ್ರವನ್ನು ನಿರ್ವಹಿಸಿದ್ದರು.

ಹೀಗೆ ಸಾಗುತ್ತಿದ್ದ ಚಿತ್ರಗಳು ಜಾಗತಿಕ ಯುದ್ಧದ ಪರಿಣಾಮದಿಂದ ಕನ್ನಡ ಚಿತ್ರಗಳ ಮೇಲೂ ಪರಿಣಾಮ ಬೀರುವುದರ ಮೂಲಕ ಚಿತ್ರಗಳ ನಿರ್ಮಾಣ ಕಾರ್ಯ ಸ್ಥಗಿತಗೊಂಡಿತು. ೧೯೩೮ ರಿಂದ ೧೯೪೦ರವರೆಗೆ ಯಾವೊಂದು ಚಿತ್ರವು ಸಹ ತೆರೆ ಕಾಣಲಿಲ್ಲ. ನಂತರ ೧೯೪೧ರಲ್ಲಿ ಗುಬ್ಬಿ ವೀರಣ್ಣನವರಿಗೆ ಕಚ್ಚಾಫಿಲಂ ದೊರತು ಅವರು ಸುಭದ್ರ ಎಂಬ ಚಿತ್ರವನ್ನು ನಿರ್ಮಿಸಿದರು. ಈ ಚಿತ್ರದಲ್ಲಿ ಹೊನ್ನಪ್ಪ ಭಾಗವತರ್, ಬಿ.ಜಯಮ್ಮ ಮುಂತಾದವರು ಪಾತ್ರ ನಿರ್ವಹಣೆಯನ್ನು ಮಾಡಿದ್ದರು. ೧೯೪೨ರಲ್ಲಿ ಗುಬ್ಬಿ ವೀರಣ್ಣನವರು ಕನ್ನಡದ ಹೆಸರಾಂತ ಪ್ರಗತಿಶೀಲ ಸಾಹಿತಿಗಳಾಗಿದ್ದ ಅ.ನ.ಕೃ ಅವರ 'ಜೀವನ ನಾಟಕ' ಎಂಬ ಸಾಹಿತ್ಯವನ್ನಾಧರಿಸಿ ಚಿತ್ರ ನಿರ್ಮಾಣ ಕಾರ್ಯಕ್ಕೆ ತೊಡಗಿದರು. ಈ ಚಿತ್ರವನ್ನು ಉತ್ತರ ಭಾರತದ ವಹಾಬ್ ಕಾಶ್ಮೀರಿ ಎನ್ನುವವರು ನಿರ್ದೇಶಿಸಿದರು. ಕೆಂಪರಾಜ್ ಅರಸ್, ಶಾಂತಾ ಹೆಬ್ಬೀಕರ್, ಬಿ.ಜಯಮ್ಮ ಮೊದಲಾದವರು ಪಾತ್ರ ನಿರ್ವಹಿಸಿದ್ದರು. ಈ ಸಂದರ್ಭದಲ್ಲಿಯೇ ಗುಬ್ಬಿ ವೀರಣ್ಣನವರು ಬೆಂಗಳೂರಿನಲ್ಲಿ ಚಲನಚಿತ್ರ ವಿತರಣಾ ಸಂಸ್ಥೆಯೊಂದನ್ನು ಆರಂಭಿಸಿದರು.

೧೯೪೨ರಲ್ಲಿ ಕೆ.ಸುಬ್ರಹ್ಮಣ್ಯರವರ ನಿರ್ದೇಶನದಲ್ಲಿ ದಿ ಮೈಸೂರು ಫಿಲಂ ಕಾರ್ಪೋರೇಷನ್ ಎಂಬ ಸಂಸ್ಥೆ ಭಕ್ತ ಪ್ರಹ್ಲಾದ ಎಂಬ ಚಿತ್ರವನ್ನು ತಯಾರಿಸಿತು. ಈ ಚಿತ್ರದಲ್ಲಿ ಕೆ.ವಿ.ಅಚ್ಯುತರಾವ್, ಎ.ಎನ್.ಶೇಷಾಚಾರ್, ಎಂ.ವಿ.ರಾಜಮ್ಮ, ಚಂದ್ರಮ್ಮ ಮೊದಲಾದವರು ಅಭಿನಯಿಸಿದರು. ಗುಬ್ಬಿ ಫಿಲಂ ಸದಾರಮೆ, ಹೇಮರೆಡ್ಡಿ ಮಲ್ಲಮ್ಮ ಮುಂತಾದ ಚಿತ್ರಗಳನ್ನು ನಿರ್ಮಾಣ ಮಾಡಿದ ನಂತರದಲ್ಲಿ ಅನೇಕ ಚಿತ್ರಗಳು ಸಾಲು ಸಾಲಾಗಿ ಮೂಡಿಬಂದವು. ಸ್ವಾತಂತ್ರ್ಯ ನಂತರದ ಕಾಲದಲ್ಲಿ ಚಿತ್ರಗಳು ಜಾಗತಿಕ ಮಹಾಯುದ್ಧದ ಸಂದರ್ಭವನ್ನು ಹೊರತುಪಡಿಸಿ ಅಧಿಕವಾಗಿ ಬೆಳವಣಿಗೆಯನ್ನು ಕನ್ನಡ ಚಲನಚಿತ್ರ ರಂಗವು ಸಾಧಿಸಿತು. ಮಹಾತ್ಮ ಪಿಕ್ಚರ್ಸ್ ಉದಯವಾಗಿ ೧೯೪೭ ಫೆಬ್ರವರಿ ೧೪ರಂದು ಕೃಷ್ಣಲೀಲಾ ಎಂಬ ಚಿತ್ರವನ್ನು ಬಿಡುಗಡೆ ಮಾಡುತ್ತಾರೆ. ಪಿ.ಕಾಳಿಂಗರಾವ್ ಈ ಚಿತ್ರಕ್ಕೆ ಸಂಗೀತ ನಿರ್ದೇಶಕರಾಗಿ, ಕಥೆ ಮತ್ತು ಸಂಭಾಷಣೆಯನ್ನು ಹುಣಸೂರು ಕೃಷ್ಣಮೂರ್ತಿ ಅವರು ನಿರ್ವಹಿಸಿದರೆ ಡಿ.ಶಂಕರ್ ಸಿಂಗ್ ನಿರ್ಮಾಣ ಮಾಡಿದ್ದಾರೆ. ಒಟ್ಟಾರೆಯಾಗಿ ಮಹಾತ್ಮ ಪಿಕ್ಚರ್ಸ್ ಕಂಪೆನಿಯು ೪೯ ಚಿತ್ರಗಳನ್ನು ತಯಾರಿಸಿದೆ. ೧೯೪೮ರಲ್ಲಿ ಭಕ್ತ ರಾಮದಾಸ್ ಹಾಗೂ ೧೯೪೯ರಲ್ಲಿ ನಾಗಕನ್ನಿಕಾ ಚಿತ್ರವನ್ನು ಕೆಂಪರಾಜ್ ಅವರು ನಿರ್ದೇಶಿಸುತ್ತಾರೆ. ೧೯೪೯ರ ಕೊನೆಯಲ್ಲಿ ಮತ್ತು ೧೯೫೦ರ ಆರಂಭದ ಹಂತದಲ್ಲಿ ಮಹಾತ್ಮ ಪಿಕ್ಚರ್ಸ್‌ನ ಶಂಕರ್ ಸಿಂಗ್ ಮತ್ತು ವಿಠಲಾಚಾರ್ಯ ಸಿನೆಮಾ ಕ್ಷೇತ್ರದಲ್ಲಿ ಹೊಸ ಕ್ರಾಂತಿಯನ್ನು ತಂದರು. ಶೀಲತೆ, ಅಶ್ಲೀಲತೆ ಬಗ್ಗೆ ತಲೆ ಕೆಡಿಸಿಕೊಳ್ಳದೇ, ಸಂಪ್ರದಾಯಗಳನ್ನು ಮೀರುವ ಕೆಲಸವನ್ನು ಚಲನಚಿತ್ರಗಳಲ್ಲಿ ಮಾಡಿದರು. ನಂತರದ ೧೯೫೧ರಲ್ಲಿ ಜಗನ್ಮೋಹಿನಿ ಚಿತ್ರದ ಪ್ರಚಾರದ ಸಂದರ್ಭದಲ್ಲೂ ಹರಿಣಿಯವರ ಮೈಮಾಟದ ಪ್ರದರ್ಶನಗಳನ್ನು ಹೆಚ್ಚಾಗಿ ಬಳಸಿಕೊಳ್ಳಲಾಯಿತು.

## ೨.೩.೪ ಸ್ವಾತಂತ್ರ್ಯ ನಂತರದಲ್ಲಿ ಕನ್ನಡದ ಚಲನಚಿತ್ರಗಳು :

೧೯೪೭ರಲ್ಲಿ ಪಂಪಾ ಪಿಕ್ಚರ್ಸ್ ರವರು "ಚಂದ್ರಹಾಸ"ನ ಕತೆಯನ್ನು ತೆರೆಗೆ ತಂದರು. ೧೯೫೩ರಲ್ಲಿ ಆರ್.ನಾಗೇಂದ್ರರಾವ್ ಆರ್.ಎನ್.ಆರ್. ಪಿಕ್ಚರ್ಸ್ ಸ್ಥಾಪಿಸಿದರು. ಪ್ರೇಮದ ಪುತ್ರಿ, ವಿಜಯನಗರದ ವೀರಪುತ್ರ, ಪತಿಯೇ ದೈವ, ಮುಂತಾದ ಚಿತ್ರಗಳನ್ನು ನಿರ್ಮಾಣ ಮಾಡಿದರು. ಸಿನಿಮಾ ಕ್ಷೇತ್ರ ಮುಂದುವರೆಯಲು ಪ್ರಗತಿ ಸಾಧಿಸಲು ಸಿನಿಮಾ ಮಂದಿರಗಳು ಅತ್ಯುತ್ತಮ ಪಾತ್ರ ನಿರ್ವಹಿಸಿವೆ. ೧೯೨೮ರಲ್ಲಿ ಸೂರ್ಯ ಫಿಲಂ, ೧೯೩೬ರಲ್ಲಿ ಮೈಸೂರು ಸೌಂಡ್ ಸ್ಟುಡಿಯೋ, ೧೯೩೬ರಲ್ಲಿ ಮೈಸೂರು ಮೂವೀಟೋನ್ ಸ್ಟುಡಿಯೋ, ಆರಂಭವಾದವು. ೧೯೪೬ರಲ್ಲಿ ನವಜ್ಯೋತಿ ಸ್ಟುಡಿಯೋ, ೧೯೫೪ರಲ್ಲಿ ಮೈಸೂರಿನಲ್ಲಿ ಪ್ರೀಮಿಯಂ ಸ್ಟುಡಿಯೋ, ಬೆಂಗಳೂರಿನಲ್ಲಿ ೧೯೬೬ರ ಮಾರ್ಚ್ ೧೮ರಂದು ಪ್ರಾರಂಭವಾಗುತ್ತದೆ. ೧೯೭೧ರಲ್ಲಿ ಬೆಂಗಳೂರಿನ ಕನ್ನಿಂಗ್ ಹ್ಯಾಂ ರಸ್ತೆಯಲ್ಲಿ ಶ್ರೀ ಚಾಮುಂಡೇಶ್ವರಿ ಸ್ಟುಡಿಯೋಸ್ ಅಂಡ್ ಲ್ಯಾಬ್ ಸ್ಥಾಪನೆಯಾಯಿತು. ೧೯೬೮ರಲ್ಲಿ ಬೆಂಗಳೂರಿನಲ್ಲಿ ಬಾಲಕೃಷ್ಣ ಅವರು ಅಭಿಮಾನ್ ಸ್ಟುಡಿಯೋ ತೆರೆದರು. ಇದಲ್ಲದೆ ವಸಂತ ಕಲರ್ ಲ್ಯಾಬೋರೇಟರೀಸ್, ಸಂಕೇತ್ ಧ್ವನಿಗ್ರಹಣ ಕೇಂದ್ರ, ಪ್ರಸಾದ್ ಕಲರ್ ಲ್ಯಾಬ್, ಮಧು ಸ್ಟುಡಿಯೋ ಮುಂತಾದವು ಚಿತ್ರ ನಿರ್ಮಾಣದಲ್ಲಿ ತಮ್ಮ ಪಾತ್ರ ವಹಿಸಿವೆ.

ಕನ್ನಡ ಚಲನಚಿತ್ರಗಳು ಆರಂಭವಾದ ಮೊದಲ ೨೦ ವರ್ಷಗಳಲ್ಲಿ ಕೇವಲ ೩೯ ಚಲನಚಿತ್ರಗಳು ನಿರ್ಮಾಣವಾದವು. ಆದರೆ ೧೯೫೪ರ ನಂತರದ ದಿನಗಳಲ್ಲಿ ಅಂದರೆ ೧೯೫೪ ರಿಂದ ೧೯೬೪ರ ಹತ್ತು ವರ್ಷಗಳಲ್ಲಿ ೧೨೫ ಚಿತ್ರಗಳು ತಯಾರಾಗಿವೆ. ಅದೊಂದು ಅದ್ಭುತ ಸುಂದರ ಬದಲಾವಣೆ ಅಲ್ಲವೆ. ಇದನ್ನೆ ಪರಿವರ್ತನಾ ಯುಗ ಎನ್ನಲಾಗಿದೆ. ಸುಬ್ಬಯ್ಯ ನಾಯ್ಡು, ಕೆಂಪರಾಜ್, ನಾಗೇಂದ್ರ ರಾವ್, ಬಿ.ಆರ್.ಪಂತುಲು, ಹೊನ್ನಪ್ಪ ಭಾಗವತರ್, ಮುಂತಾದ ಕಲಾವಿದರು ಹಿಂದೆ ಸರಿದು ರಾಜ್‌ಕುಮಾರ್, ಉದಯ ಕುಮಾರ್, ಕಲ್ಯಾಣ ಕುಮಾರ್ ಮುಂತಾದ ಕಲಾವಿದರು ತೆರೆಯ ಮೇಲೆ ವಿಜೃಂಭಿಸತೊಡಗಿದರು. ಮೇಲೆ ಹೇಳಿದ ೧೨೫ ಚಿತ್ರಗಳಲ್ಲಿ ೫೩ ಚಿತ್ರಗಳಲ್ಲಿ ರಾಜಣ್ಣನವರು ನಾಯಕರಾಗಿದ್ದರು ಎಂದರೆ ಸುವರ್ಣಯುಗವೇ ಸರಿ.

೧೯೫೪ರಲ್ಲಿ ಗುಬ್ಬಿ ಫಿಲಂಸ್ ತಯಾರಿಕೆಯಲ್ಲಿ ರಾಜಣ್ಣನವರ ಪ್ರಥಮ ಚಿತ್ರ ಬೇಡರ ಕಣ್ಣಪ್ಪ ಬಿಡುಗಡೆಗೊಳ್ಳುತ್ತದೆ. ೧೯೫೪ರಲ್ಲಿಯೇ ನಟಶೇಖರ್ ಮೂಲಕ ಕಲ್ಯಾಣ ಕುಮಾರ್, ೧೯೫೬ರಲ್ಲಿ ಭಾಗ್ಯೋದಯ ಮೂಲಕ ಉದಯಕುಮಾರ್ ಕನ್ನಡ ಚಿತ್ರರಂಗ ಪ್ರವೇಶಿಸುತ್ತಾರೆ. ಹಂತ ಹಂತವಾಗಿ ಉತ್ತಮ ಚಿತ್ರಗಳು ಕನ್ನಡ ಭಾಷೆಯಲ್ಲಿ ತಯಾರಾಗತೊಡಗುತ್ತವೆ. ಹಲವು ಪ್ರಶಸ್ತಿಗಳು ಚಿತ್ರ ನಿರ್ಮಾಪಕರನ್ನು ಆಕರ್ಷಿಸುತ್ತವೆ. ೧೯೬೪ರಲ್ಲಿ ಮೊದಲ ವರ್ಣಚಿತ್ರ ಅಮರಶಿಲ್ಪಿ ಜಕಣಾಚಾರಿ ಬಿಡುಗಡೆಯಾಗುತ್ತದೆ. ಪ್ರೇಮದ ಪುತ್ರಿ, ಚಿತ್ರಕ್ಕೆ ಕೇಂದ್ರ ಸರ್ಕಾರದ ರಾಷ್ಟ್ರಪತಿ ಬೆಳ್ಳಿ ಪದಕ, ಭಕ್ತ ವಿಜಯ ಚಿತ್ರಕ್ಕೆ ಕೇಂದ್ರ ಸರ್ಕಾರದ ಅರ್ಹತಾ ಪತ್ರ, ಸ್ಕೂಲ್‌ಮಾಸ್ಟರ್ ಚಿತ್ರಕ್ಕೆ ಅಖಿಲ ಭಾರತದ ಮೂರನೆಯ ಅತ್ಯುತ್ತಮ ಚಿತ್ರ, ಸಂತತುಕಾರಾಂಗೆ ರಜತ ಪದಕ, ನಾಂದಿ ಸಿನಿಮಾಗೆ ಅಂತರರಾಷ್ಟ್ರೀಯ ಗೌರವ ದೊರಕುತ್ತದೆ.

ಈ ಎಲ್ಲಾ ಒಳ್ಳೆಯ ಬೆಳವಣಿಗೆಗಳು ಸಿನಿಮಾ ತೀವ್ರಗತಿಯಲ್ಲಿ ಬೆಳೆಯಲು ಅತ್ಯಂತ ಸಹಕಾರಿಯಾದವು. ೧೯೬೧ರಲ್ಲಿ ಭೀಕರ ಪ್ರವಾಹ ಬಂದಾಗ ಕಲಾವಿದರು ಹಳ್ಳಿಹಳ್ಳಿಗಳಲ್ಲಿ ಸಂಚರಿಸಿ ಪ್ರವಾಹ ಪರಿಹಾರ ನಿಧಿ ಸಂಗ್ರಹಿಸಿ ಪ್ರೇಕ್ಷಕರ ಕಷ್ಟಕ್ಕೆ ನೆರವಾದರು. ಸಾಮಾನ್ಯ ಜನರಿಗೆ ಕಲಾವಿದರ ಬಗ್ಗೆ ಗೌರವ, ಸಿನಿಮಾಗಳ ಮೇಲೆ ಪ್ರೀತಿ ಹೆಚ್ಚಾಗುತ್ತದೆ. ಅನಕೃ, ವಾಟಾಳ್ ನಾಗರಾಜ್, ಮ.ರಾಮಮೂರ್ತಿ, ಮುಂತಾದವರು ಡಬ್ಬಿಂಗ್ ಚಿತ್ರಗಳು ಕನ್ನಡಕ್ಕೆ ಬರದಂತೆ ಹೋರಾಟ ಮಾಡಿ ಕನ್ನಡ ಚಿತ್ರಗಳು ಬೆಳೆಯಲು ಸಹಕರಿಸಿದರು. ರಾಜಣ್ಣನವರ ಗೋಕಾಕ್ ವರದಿ ಬರಲಿ ಎಂದು ಕರೆ ಕೊಡುವ ಮೂಲಕ ಕನ್ನಡದ ಹೋರಾಟಕ್ಕೆ ಇಡೀ ಕನ್ನಡಿಗರನ್ನು ಓಲೈಸಿದರು.

೧೯೬೦ರಲ್ಲಿ ಕಚ್ಚಾ ಫಿಲಂ ಕೊರತೆಯಿಂದಾಗಿ ಚಿತ್ರ ನಿರ್ಮಾಣ ತೊಂದರೆ ಅನುಭವಿಸಬೇಕಾಯಿತು. ಆಗ ಕಲಾವಿದರು ಕನ್ನಡ ಕಲಾವಿದರು ಎಂಬ ವೇದಿಕೆಯನ್ನು ನಿರ್ಮಾಣ ಮಾಡಿದರು. ಇದರ ಅಡಿಯಲ್ಲಿ ಕನ್ನಡದ ೧೦೦ನೇ ಚಿತ್ರ ರಣಧೀರ ಕಂಠೀರವ ನಿರ್ಮಾಣವಾಗುತ್ತದೆ. ಚಿತ್ರಗಳ ನಿರ್ಮಾಣ ಕುಸಿಯಲಾರಂಭಿಸಿದಾಗ ಎಚ್ಚೆತ್ತ ಕಲಾವಿದರು ಒಂದೆಡೆ ಸೇರಿ ಕನ್ನಡದ ಉಳಿವಿಗಾಗಿ ಸಾಹಿತಿಗಳ ನೇತೃತ್ವದಲ್ಲಿ ಹೋರಾಟ ನಡೆಸಲು ತೀರ್ಮಾನಿಸಿದರು. ಚಲನಚಿತ್ರ ಹಾಗೂ ಸಾಹಿತ್ಯಕ್ಕೆ ಬೆಸುಗೆ ಏರ್ಪಡಿಸಲು ೧೯೬೩ರಲ್ಲಿ ಹೊಸ ಕ್ರಾಂತಿಯೊಂದು ಏರ್ಪಟ್ಟಿತ್ತು. ಕೃಷ್ಣಮೂರ್ತಿ ಪುರಾಣಿಕರ ಧರ್ಮದೇವತೆ ಕಾದಂಬರಿ ಆಧಾರಿತ ಕರುಣೆಯೇ ಕುಟುಂಬದ ಕಣ್ಣು, ಚಿತ್ರ ನಿರ್ಮಾಣವಾಯಿತು. ಅಭೂತಪೂರ್ವ ಯಶಸ್ಸು ಸಹ ಪಡೆಯಿತು. ಲೀಲಾವತಿ, ಜಯಂತಿ, ಭಾರತಿ, ಮಂಜುಳಾ, ಆರತಿ, ಕಲ್ಪನಾ, ಬಿ.ಸರೋಜಾದೇವಿ, ಮುಂತಾದ ಕಲಾವಿದರು ಚಿತ್ರರಂಗ ಪ್ರವೇಶಿಸುತ್ತಾರೆ. ನರಸಿಂಹರಾಜು, ಬಾಲಕೃಷ್ಣ ಮುಂತಾದ ಶ್ರೇಷ್ಠ ಕಲಾವಿದರು ಕನ್ನಡದ ಸಿನಿಮಾ ಸಂಪತ್ತನ್ನು ಹೆಚ್ಚಿಸುತ್ತಾರೆ. ಹಲವು ಪೋಷಕ ನಟರು ನಟಿಯರು ಸಿನಿಮಾದಲ್ಲಿ ಅಸ್ತಿತ್ವ ಕಂಡುಕೊಳ್ಳುವ ಮೂಲಕ ಕನ್ನಡ ಚಿತ್ರರಂಗ ಇನ್ನಷ್ಟು ಸಮೃದ್ಧಿಗೊಳ್ಳುತ್ತದೆ. ೧೯೬೦ರಲ್ಲಿ ಬಿ.ಆರ್.ಪಂತುಲು ಅವರ ಮಕ್ಕಳ ರಾಜ್ಯ ಸಿನಿಮಾ ನಿರ್ಮಿಸುತ್ತಾರೆ. ೧೯೫೮ರಲ್ಲಿ ತಯಾರಾದ ಸ್ಕೂಲ್ ಮಾಸ್ಟರ್ ರಜತೋತ್ಸವ ಆಚರಿಸಿಕೊಂಡ ಮೊದಲ ಸಾಮಾಜಿಕ ಚಿತ್ರ.

ಹೊಸ ಚಿಂತನೆಗಳ ನಿರ್ದೇಶಕರಾದ ಲಕ್ಷ್ಮಿ ನಾರಾಯಣ ಅವರು ನಾಂದಿ, ಉಯ್ಯಾಲೆ, ಮುಕ್ತ, ಅಬಚೂರಿನ ಪೋಸ್ಟಾಫೀಸು, ಬೆಟ್ಟದ ಹೂ, ಚಿತ್ರ ನಿರ್ದೇಶಿಸಿ ಸಿನಿಮಾದ ಕಲ್ಪನೆಯನ್ನು ಬದಲಾಯಿಸುತ್ತಾರೆ. ಸಮಾಜಮುಖಿ ಸಂದೇಶಾತ್ಮಕ ಚಿತ್ರಗಳು ಬರಲಾರಂಭಿಸುತ್ತವೆ. ೧೯೬೫ರ ವೇಳೆಗೆ ಕನ್ನಡ ಚಿತ್ರರಂಗ ಒಂದು ಪ್ರಬುದ್ಧ ಸ್ಥಿತಿಗೆ ತಲುಪುತ್ತದೆ. ಅಲ್ಲಿ ಉತ್ತಮ ಮಾರುಕಟ್ಟೆ ನಿರ್ಮಾಣವಾಗಿತ್ತು. ರಾಜ್ಯ ಸರ್ಕಾರ ಸಬ್ಸಿಡಿ ನೀಡುವ ನೀತಿಯನ್ನು ತರುವ ಮೂಲಕ ೧೯೬೭ರಲ್ಲಿ ಕನ್ನಡ ಚಿತ್ರರಂಗಕ್ಕೆ ಕೈ ಆಸರೆಯಾಗಿ ಬಂದಿತ್ತು. ಕ್ರಮೇಣ ೫೦% ತೆರಿಗೆ ವಿನಾಯಿತಿ ನೀಡುವ ಅನುಕೂಲಗಳು ಇಂದಿಗೆ ಜಾರಿಯಲ್ಲಿವೆ.

ಅ.ನ.ಕೃ. ಅವರ ಕಾದಂಬರಿ ಆಧಾರಿತ ಚಿತ್ರ ಸಂಧ್ಯಾರಾಗ ಒಂದು ಅತ್ಯುತ್ತಮ ಸದಭಿರುಚಿಯ ಚಿತ್ರ, ಸುಬ್ಬಾಶಾಸ್ತ್ರಿ (೧೯೬೫) ಪಾಪ ಪುಣ್ಯ (೧೯೭೭) ಚಿತ್ರಗಳು ಸಹ ಅತ್ಯುತ್ತಮ ಚಿತ್ರಗಳೆನಿಸುತ್ತವೆ. ಇದಲ್ಲದೆ ರಾಜ್‌ಕುಮಾರ್ ಅವರ ಸಿಐಡಿ ೯೯೯ ಚಿತ್ರಗಳು ಪತ್ತೇದಾರಿ ಸರಣಿ ಚಿತ್ರಗಳೆನಿಸಿವೆ. ಪುಟ್ಟಣ್ಣ

ಕಣಗಾಲ್ ಅವರ ನಾಗರಹಾವು ಚಿತ್ರದ ಮೂಲಕ ವಿಷ್ಣುವರ್ಧನ, ಅಂಬರೀಷ್ ಅಂತಹ ಪ್ರತಿಭಾವಂತ ಕಲಾವಿದರ ಪಾದಾರ್ಪಣೆಯಾಯಿತು. ೧೯೮೦ರಲ್ಲಿ ಅಂತ ೧೯೮೨ರಲ್ಲಿ ಸಾಹಸಸಿಂಹ ಚಿತ್ರಗಳು ಹೊಸ ದಿಕ್ಕೆನೆಡೆಗೆ ಚಿತ್ರರಂಗವನ್ನು ಕರೆದೊಯ್ದವು. ಸಿದ್ದಲಿಂಗಯ್ಯ ಅವರ ಬಂಗಾರದ ಮನುಷ್ಯ ೨ ವರ್ಷಗಳ ನಿರಂತರ ಪ್ರದರ್ಶನ ಕಂಡು ದಾಖಲೆ ನಿರ್ಮಿಸಿದವು.

೧೯೭೦ರ ದಶಕದಲ್ಲಿ ಯು.ಆರ್.ಅನಂತಮೂರ್ತಿ ಅವರ ಕಾದಂಬರಿ ಆಧಾರಿತ ಚಿತ್ರ ಸಂಸ್ಕಾರ ಹೊಸ ಅಲೆಯ ಪ್ರವಾಹವನ್ನು ಹುಟ್ಟುಹಾಕಿತು. ಕಾದಂಬರಿ ಆಧಾರಿತ ಚಿತ್ರಗಳಿಂದ ಸಾಹಿತಿ ಮತ್ತು ಸಾಹಿತ್ಯ ರಂಗ ಚಿತ್ರರಂಗದ ಅನಿವಾರ್ಯಗಳೆನಿಸಿದವು. ಈ ಕಾಲಕ್ಕೆ ನಾಗರಹಾವು (೧೯೭೨) (ವಿಷ್ಣುವರ್ಧನ್), ನಮ್ಮ ಊರು (ರಾಜೇಶ್ ೧೯೬೮), ಎಡಕಲ್ಲು ಗುಡ್ಡದ ಮೇಲೆ (ಚಂದ್ರಶೇಖರ್ ೧೯೭೩), ಭೂತಯ್ಯನ ಮಗ ಅಯ್ಯು (ಲೋಕೇಶ್ ೧೯೭೪), ಸಂಕಲ್ಪ (೧೯೭೩) ಅನಂತನಾಗ್, ವಿಜಯವಾಣಿ (ಅಶೋಕ್) ೧೯೭೬, ಫಲಿತಾಂಶ (ಜೈಜಗದೀಶ್) ೧೯೭೬, ಬಬ್ರುವಾಹನ (ರಾಮಕೃಷ್ಣ) ೧೯೭೭, ಒಂದಾನೊಂದು ಕಾಲದಲ್ಲಿ (ಶಂಕರನಾಗ್) ೧೯೭೮ರಲ್ಲಿ ನಾಯಕರಾಗಿ ಚಿತ್ರರಂಗ ಪ್ರವೇಶಿಸಿ ನವ ನಾಯಕ ಹೊಸತನ ತಲೆ ಸ್ವಲ್ಪ ಜೋರಾಗಿಯೇ ಬೀಸಿತು ಎನ್ನಬಹುದು.

೧೯೬೫ ರಿಂದ ೧೯೮೫ರವರೆಗಿನ ಕಾಲಾವಧಿಯಲ್ಲಿ ಚಿತ್ರರಂಗದ ಮೇಲೆ ರಾಜ್‌ಕುಮಾರ್ ಬೀರಿದ ಪ್ರಭಾವ ಆಕರ್ಷಣೆಯಿಂದ ಈ ಕಾಲಾವಧಿಯನ್ನು ರಾಜ್‌ಕುಮಾರ್ ಯುಗವನ್ನಾಗಿಸಿತು. ಪುಟ್ಟಣ್ಣ ಕಣಗಾಲ್‌ನಂತರ ಕ್ರಿಯಾಶೀಲ ನಿರ್ದೇಶಕರು, ಸಾಕ್ಷಾತ್ಕಾರ, ಮಲ್ಲಮ್ಮನ ಪವಾಡ, ಬೆಳ್ಳಿಮೋಡ, ಗೆಜ್ಜೆ ಪೂಜೆ, ಉಪಾಸನೆ, ಫಲಿತಾಂಶ, ಅಮೃತಘಳಿಗೆ, ಎಡಕಲ್ಲು ಗುಡ್ಡದ ಮೇಲೆ, ಮಸಣದ ಹೂ, ಮುಂತಾದ ಸ್ತ್ರೀ ಪ್ರಧಾನ, ಸ್ತ್ರೀ ಕೇಂದ್ರಿತ ಚಿತ್ರಗಳನ್ನು ಕನ್ನಡಕ್ಕೆ ಕಾಣಿಕೆಯಾಗಿ ನೀಡಿದರು. ಪಡುವಾರಳ್ಳಿ ಪಾಂಡವರು, ಧರ್ಮಸೆರೆ, ರಂಗನಾಯಕಿ, ಶುಭಮಂಗಳ, ಕಾಲೇಜು ರಂಗ, ಮುಂತಾದ ಸದಭಿರುಚಿಯ ಚಿತ್ರಗಳು ಪ್ರಶಸ್ತಿಯನ್ನು ಬಾಚಿಕೊಳ್ಳುವ ಜೊತೆಗೆ ಜನಪ್ರಿಯತೆ, ಹಣ ಹೆಸರು ಸಹಾ ತಂದುಕೊಟ್ಟವು. ದೊಡ್ಡ ಹೀರೋ ಇಲ್ಲದೆ ಹೋದರೂ ನಾಯಕಿ ಹಾಗೂ ಕಥಾವಸ್ತು ನಿರ್ದೇಶಕರಿಂದ ಗೆದ್ದ ಚಿತ್ರಗಳು ಇವು. ಇಂದಿಗೂ ಕನ್ನಡಿಗರ ಮನಸ್ಸಿನಲ್ಲಿ ಪುಟ್ಟಣ್ಣನವರ ಎಲ್ಲಾ ಚಿತ್ರಗಳು ಅಚ್ಚಳಿಯದೆ ನಿಂತಿವೆ.

೧೯೭೪ರಲ್ಲಿ ಸಿದ್ದಲಿಂಗಯ್ಯ ಅವರು ಗೋರೂರು ರಾಮಸ್ವಾಮಿ ಅಯ್ಯಂಗಾರ್ ಕಥೆಯನ್ನಾಧರಿಸಿ ಭೂತಯ್ಯನ ಮಗ ಅಯ್ಯು ನಿರ್ದೇಶಿಸಿದರು. ವಿಭಿನ್ನ ಕತೆ ಪರಿಣಾಮಕಾರಿ ನಿರೂಪಣೆಯಿಂದ ಚಿತ್ರ ಯಶಸ್ವಿಯಾಯಿತು. ೧೯೭೬ರಲ್ಲಿ ಬಿಡುಗಡೆಯಾದ ಶ್ರೀ ಕೃಷ್ಣದೇವರಾಯ ಒಂದು ಮಹತ್ವದ ಚಿತ್ರ, ೧೯೪೩ರಲ್ಲಿ ರಾಧಾರಮಣ ಚಿತ್ರದ ಮೂಲಕ ನಟನಾವೃತ್ತಿ ಆರಂಭಿಸಿದ ಜಿ.ವಿ.ಅಯ್ಯರ್ (ಗಣಪತಿ ವೆಂಕಟರಮಣ) ಅವರು ಮೂಲತಃ ನಂಜನಗೂಡಿನವರು. ಗುಬ್ಬಿ ಕಂಪನಿ ಸೇರಿ ಗಂಭೀರವಾಗಿ ನಾಟಕ ರಂಗ ಅಧ್ಯಯನ ಮಾಡುತ್ತಾರೆ. ಕಥೆ, ಚಿತ್ರಕಥೆ, ನಿರ್ದೇಶನ, ಅಭಿನಯ, ಗೀತರಚನೆ, ಎಲ್ಲದರಲ್ಲೂ ಪಳಗಿದ ಕೈ ಹಂಸಗೀತೆ, ಆದಿ ಶಂಕರಾಚಾರ್ಯ, ಮಧ್ವಾಚಾರ್ಯ, ಭಗವದ್ಗೀತೆ, ಸ್ವಾಮಿ ವಿವೇಕಾನಂದ ಚಿತ್ರಗಳನ್ನು ನಿರ್ದೇಶಿಸಿದ್ದಾರೆ.

ಗೀತಪ್ರಿಯ, ಕೆ.ಎಲ್.ಎಸ್.ಸ್ವಾಮಿ, ಹುಣಸೂರು ಕೃಷ್ಣಮೂರ್ತಿ, ಶಂಕರ್‌ನಾಗ್, ರಾಜೇಂದ್ರ ಸಿಂಗ್ ಬಾಬು, ಫಣಿ ರಾಮಚಂದ್ರ ಮುಂತಾದ ಹಲವಾರು ನಿರ್ದೇಶಕರು ಕನ್ನಡ ಚಿತ್ರರಂಗಕ್ಕೆ ಉತ್ತಮ ಸಿನಿಮಾಗಳನ್ನು ನೀಡಿದ್ದಾರೆ. ಹಲವು ರಿಮೇಕ್ ಚಿತ್ರಗಳು ಸಹ ಬಂದಿವೆ. ದೊರೆ ಭಗವಾನ್ ಒಂದು ಅತ್ಯುತ್ತಮ ಜೋಡಿ. ೧೯೮೭ರಲ್ಲಿ ಮಾತೇ ಇಲ್ಲದ ಪುಷ್ಪಕ ವಿಮಾನ ಸಿನಿಮಾ ಜನಪ್ರಿಯತೆ ಗಳಿಸಿದೆ. ಗೀತಾ, ಮಿಂಚಿನ ಓಟ, ಜನ್ಮ ಜನ್ಮದ ಅನುಬಂಧ, ನೋಡಿ ಸ್ವಾಮಿ ನಾವಿರೋದೇ ಹೀಗೆ, ಒಂದು ಮುತ್ತಿನ ಕಥೆ, ಮುಂತಾದವು ಶಂಕರನಾಗ್ ಅವರ ಉತ್ತಮ ಚಿತ್ರಗಳು. ಹೊಸ ಅಲೆಯ ಸಿನಿಮಾಗಳೆಂದರೆ ಸಂಸ್ಕಾರ (೧೯೭೦), ಚೋಮನದುಡಿ, ಕಾಡು, ಒಂದಾನೊಂದು ಕಾಲದಲ್ಲಿ, ಶೃಂಗಾರ ಮಾಸ, ವಂಶವೃಕ್ಷ, ಎಲ್ಲಿಂದಲೋ ಬಂದವರು, ಘಟಶ್ರಾದ್ಧ, ಕಾಕನಕೋಟೆ, ಬೆಂಕಿ, ಸೂರ್ಯ, ಫಣಿಯಮ್ಮ, ನಾಗಮಂಡಲ, ಕುಬಿ ಮತ್ತು ಇಯಾಲ, ಮುಂತಾದವು.

ಡಾ.ರಾಜ್‌ಕುಮಾರ್ ಅವರ ಚಿತ್ರಗಳ ಯಶಸ್ಸು ಕನ್ನಡ ಚಿತ್ರರಂಗದ ಯಶಸ್ಸಿನಲ್ಲಿ ತನ್ನದೇ ಆದ ಮುಖ್ಯ ಪಾತ್ರ ವಹಿಸಿದೆ ಎಂದರೆ ತಪ್ಪಾಗಲಾರದು. ಹೊಸ ಪೀಳಿಗೆ ೧೯೮೫ರ ನಂತರ ಕನ್ನಡ ಚಿತ್ರರಂಗಕ್ಕೆ ಹೊಸ ರಕ್ತದ ಮಹಾಪೂರವೇ ಹರಿದುಬಂದಿದೆ ಎಂದರೆ ತಪ್ಪಲ್ಲ. ರಾಜ್‌ಕುಮಾರ್, ವಿಷ್ಣುವರ್ಧನ್, ಅನಂತನಾಗ್, ಶಂಕರ್‌ನಾಗ್, ಅಂಬರೀಷ್ ಅವರ ಸಂತತಿ ಶಿವರಾಜಕುಮಾರ್, ರವಿಚಂದ್ರನ್, ಶಶಿಕುಮಾರ್, ರಮೇಶ್ ಅರವಿಂದ್, ಜಗ್ಗೇಶ್ ಮುಂತಾದ ನಾಯಕರು, ಶೃತಿ, ಸುಧಾರಾಣಿ, ಮಾಲಾಶ್ರೀ, ರಮ್ಯ, ರಕ್ಷಿತಾ, ತಾರಾ ಅನುರಾಧಾ, ಮುಂತಾದ ನಾಯಕಿಯರು, ಹಲವಾರು ಪೋಷಕ ಕಲಾವಿದ ಪೋಷಕ ಕಲಾವಿದೆಯರು, ಕನ್ನಡ ಚಿತ್ರರಂಗದ ಸೇವೆಯಲ್ಲಿ ತೊಡಗಿದ್ದಾರೆ. ಫಣಿರಾಮಚಂದ್ರ, ನಾಗತಿಹಳ್ಳಿ ಚಂದ್ರಶೇಖರ್, ಎಸ್.ನಾರಾಯಣ್, ಉಪೇಂದ್ರ, ಸುನಿಲ್ ಕುಮಾರ್ ಸಿಂಗ್ ಮುಂತಾದ ನಿರ್ದೇಶಕರು ಹಲವು ಚಿತ್ರಗಳನ್ನು ನೀಡಿದ್ದಾರೆ. ಶಿವರಾಜ್‌ಕುಮಾರ್, ಸುದೀಪ್, ಯಶ್, ಪುನೀತ್ ರಾಜ್‌ಕುಮಾರ್ ರಂತಹ ಅಪ್ರತಿಮ ಕಲಾವಿದರು ಇಂದು ಕೋಟ್ಯಾಂತರ ಅಭಿಮಾನಿಗಳನ್ನು ಹೊಂದಿದ್ದಾರೆ.

ಚಿತ್ರರಂಗದಲ್ಲಿ ರಿಮೇಕ್ ಹಾವಳಿ ಹೆಚ್ಚಾಗಿದೆ. ಡಬ್ಬಿಂಗ್ ಚಿತ್ರಗಳು ಬರುವುದರಲ್ಲಿ ಇವೆ. ಏನೆಲ್ಲಾ ಬದಲಾವಣೆಗಳು ಆದರೂ ಕನ್ನಡಿಗ ತನ್ನ ನೆಲಕ್ಕೆ ಹೊಂದುವ ಸಂಸ್ಕೃತಿ ಬೀರುವ ಕನ್ನಡದ ಸೊಗಡಿನ ಚಿತ್ರಗಳನ್ನು ಮಾತ್ರವೇ ಇಷ್ಟಪಡುತ್ತಾರೆ. ಹೊಸದೆಲ್ಲವು ಸುಂದರ ಎಂದು ಹೇಳಲು ಬರುವುದಿಲ್ಲ. ಆದರೂ ನಾವು ಕನ್ನಡ ಪ್ರೇಮಿಗಳು ಹೊಸತನಕ್ಕೆ ಹೊಂದಿಕೊಳ್ಳಬೇಕು. ಅನ್ಯಭಾಷೆಗೆ ಹೋಲಿಸಿಕೊಂಡರೆ ಕನ್ನಡ ಚಿತ್ರೋದ್ಯಮ ಇನ್ನು ಬೆಳೆಯಬೇಕು. ಇಲ್ಲಿ ಸಂಪತ್ತಿದೆ ಅದನ್ನು ಸರಿಯಾಗಿ ಬಳಸುವ ವಾರಸುದಾರರು ಬೇಕು. ನಮಗೆ ಮತ್ತೊಬ್ಬ ರಾಜಣ್ಣ ಹುಟ್ಟಿ ಬರಬೇಕು ಎನಿಸುತ್ತದೆ. ಶಿವರಾಜಕುಮಾರ್, ಪುನೀತ್ ರಾಜಕುಮಾರ್ ಅಭಿನಯದಲ್ಲಿ ರಾಘವೇಂದ್ರ ರಾಜಕುಮಾರ್ ಅವರು ತಮ್ಮದೇ ನಿರ್ಮಾಣದಲ್ಲಿ ಛಾಪು ಮೂಡಿಸುತ್ತ ಅಪ್ಪನ ಹೆಸರನ್ನು ಉಳಿಸುವ ತಂದೆಗೆ ತಕ್ಕ ಮಕ್ಕಳು ಎನಿಸಿದ್ದಾರೆ. ಪಾರ್ವತಮ್ಮ ರಾಜಕುಮಾರ್ ಅವರಂಥಹ ದಿಟ್ಟ ಧೈರ್ಯಸ್ಥ ಮಹಿಳೆ, ನಿರ್ಮಾಣ, ಹಂಚಿಕೆ ಮುಂತಾದ ಕಷ್ಟದ ಕೆಲಸದಲ್ಲಿ ಪಳಗಿ ಸೈ ಎನಿಸಿಕೊಂಡಿದ್ದಾರೆ.

ಒಟ್ಟಾರೆ ಈ ೭೫ ವರ್ಷಗಳ ಕನ್ನಡ ಚಲನಚಿತ್ರ ಇತಿಹಾಸವನ್ನು ತೆರೆದು ನೋಡಿದಾಗ ಇಲ್ಲಿ ಮುತ್ತುರತ್ನ ಮಾಣಿಕ್ಯ ಪಚ್ಚೆ ಹವಳ ವಜ್ರ ವೈಢೂರ್ಯಗಳು ಇರುವುದನ್ನು ನಾವು ಕಣ್ಣಾರೆ ನೋಡಬಹುದು. ಇವುಗಳ ಸದಾ ಕಾಲ ಅಮರ ಅಜರಾಮರ. ಕನ್ನಡ ಚಿತ್ರ ಭಂಡಾರಕ್ಕೆ ರಾಜಣ್ಣನವರು ಹಾಗೂ ಅವರ ಗಾಯನ ಅಭಿನಯ, ತಮ್ಮ ಸರಳತೆ, ಕನ್ನಡಕ್ಕಾಗಿ ಹೋರಾಟ, ಕೇವಲ ಕನ್ನಡ ಭಾಷೆಯಲ್ಲಿ ನಟಿಸುತ್ತ ಅನ್ಯಭಾಷೆಯ ಸಿನಿಮಾಗಳನ್ನು ನಿರಾಕರಿಸಿ ಕೊನೆ ಘಳಿಗೆಯವರೆವಿಗೂ ಕನ್ನಡ ನಾಡಿನ ಸೇವೆ ಮಾಡಿದ ರಾಜಣ್ಣನವರನ್ನು ಕನ್ನಡ ಚಿತ್ರರಂಗ ಸದಾಕಾಲ ಸ್ಮರಿಸುತ್ತದೆ.

**ಕೊನೆ ಟಿಪ್ಪಣಿ :**

೧. ರಾಮದಾಸ ನಾಯ್ಡು.ಪಿ.ಆರ್., ವಿಶ್ವ ಸಿನಿಮಾ, ಪು.ಸಂ–೮೮.
೨. ಅದೇ ಪುಸ್ತಕ, ಪು.ಸಂ–೩೦೭.
೩. ಗಂಗಾಧರ್ ಮೊದಲಿಯಾರ್, ಕನ್ನಡ ಸಿನಿಮಾ, ಪು.ಸಂ–೦೨.
೪. ಅದೇ ಪುಸ್ತಕ, ಪು.ಸಂ–೧೭.

**ಅಧ್ಯಾಯ : ಮೂರು**

**ಡಾ.ರಾಜ್‌ಕುಮಾರ್ ಅವರ ವಿರಾಟ್ ಸ್ವರೂಪ**

೩.೧ ಜನನ

೩.೨ ರಂಗಭೂಮಿ

೩.೩ ವಿವಾಹ

೩.೪ ಚಿತ್ರರಂಗ ಪ್ರವೇಶ

# ಅಧ್ಯಾಯ ಮೂರು

# ಡಾ. ರಾಜ್‌ಕುಮಾರ್ ಅವರ ವಿರಾಟ್ ರೂಪ

## ೩.೧ ಜನನ :

ಶ್ರಾವಣ ಮಾಸದ ಕೊನೆಯ ಶನಿವಾರ ದಂಪತಿಗಳಾದ ಪುಟ್ಟಸ್ವಾಮಯ್ಯ ಮತ್ತು ಲಕ್ಷ್ಮಮ್ಮ ಪುಣ್ಯ ಕ್ಷೇತ್ರವಾದ ಮುತ್ತತ್ತಿಯಲ್ಲಿ ಭಕ್ತಿ ಭಾವದಿಂದ ಕೋರಿಕೆಯೊಂದನ್ನು ಮುತ್ತತ್ತಿರಾಯನ ಮುಂದೆ ಇಡುತ್ತಾರೆ. ಮದುವೆಯಾಗಿ ಹಲವರು ವರ್ಷಗಳು ಕಳೆದರೂ ಸಂತಾನ ಭಾಗ್ಯವಿಲ್ಲದ ದಂಪತಿಗಳಲ್ಲಿ ಮಕ್ಕಳ ಬಯಕೆ ತೀರ್ಥಕ್ಷೇತ್ರಗಳ ದರ್ಶನಕ್ಕೆ ಕಾರಣವಾಗಿತ್ತು. ಪುಣ್ಯ ನದಿ ಕಾವೇರಿ ಹರಿಯುವ ಪುಣ್ಯ ಭೂಮಿ ಸಾವಿರಾರು ರೈತರ ಹೊಟ್ಟೆ ತುಂಬಿಸಿರುವ ಬಾಯಾರಿದವರ ದಾಹ ತಣಿಸುವ ಕಾವೇರಿ ನದಿ ಪಾತ್ರದಲ್ಲಿ ವಾಯುಪುತ್ರ ಪ್ರಾಣದೇವ ಆಂಜನೇಯನ ಗುಡಿಯಲ್ಲಿ ಆರ್ತರಾಗಿ ಸಂತಾನಕ್ಕಾಗಿ ಪ್ರಾರ್ಥಿಸುತ್ತಿರುವ ದಂಪತಿಗಳ ಕೂಗು ಹನುಮನಿಗೆ ಕೇಳಿಸಿತು. ಹನುಮನ ಕರುಣೆ ಅಪಾರವಾದದ್ದು. ಆಂಜನೇಯ ದಂಪತಿಗಳಿಗೆ ಆಶೀರ್ವದಿಸುತ್ತಾನೆ. ಹನುಮನ ಆಶೀರ್ವಾದವೇ, ಆತನ ವರಪ್ರಸಾದವೇ ಕನ್ನಡದ ವರನಟ ರಾಜಣ್ಣನವರು ಈ ಕನ್ನಡ ಭೂಮಿಯಲ್ಲಿ ಮಹಾನ್ ಕಲಾವಿದನಾಗಿ ಹುಟ್ಟಿ ಬರಲು ಕಾರಣ. ತಾಯಿ ಲಕ್ಷ್ಮಮ್ಮನವರು ಗಂಡು ಮಗುವಿಗೆ ಜನ್ಮ ನೀಡುತ್ತಾರೆ.

ಪುಟ್ಟಸ್ವಾಮಯ್ಯನವರ ತಂದೆ ದೊಡ್ಡ ನಾಗೇಗೌಡರು. ವೃತ್ತಿಯಲ್ಲಿ ಈಚಲು ಮರದಿಂದ ಹೆಂಡ ಇಳಿಸುವವರು, ಹೆಂಡದ ವ್ಯಾಪಾರದಲ್ಲಿ ಏಕೋ ಏನೋ ಅವರಿಗೆ ಮನಸ್ಸಿಲ್ಲ. ವಿಪರೀತ ಕೋಪದ ಸ್ವಭಾವದ ಇವರು ಸಣ್ಣ ಪುಟ್ಟ ತಪ್ಪುಗಳಿಗೂ ಮಕ್ಕಳನ್ನು ಉಗ್ರವಾಗಿ ಶಿಕ್ಷಿಸುತ್ತಿದ್ದರು. ತಂದೆಗೆ ತುಂಬಾ ಹೆದರುತ್ತಿದ್ದ ಪುಟ್ಟಸ್ವಾಮಯ್ಯನವರು ತಮ್ಮ ಊರಾದ ಸಿಂಗಾನವೂರು ತೊರೆದು ಹೆಂಡತಿ ಲಕ್ಷ್ಮಿಯ ಊರಾದ ಗಾಜನೂರಿಗೆ ಬಂದು ಬಿಡುತ್ತಾರೆ. ತಮ್ಮ ವೃತ್ತಿ ಕುಲ ಕಸುಬಾದ ಹೆಂಡದ ವ್ಯಾಪಾರವನ್ನು ತೊರೆದು ಸಂಪೂರ್ಣವಾಗಿ ರಂಗಭೂಮಿ ಕೈಂಕರ್ಯಕ್ಕೆ ತೊಡಗಿಬಿಡುತ್ತಾರೆ.



ಆ ಕಾಲಕ್ಕೆ ಹೊಟ್ಟೆ ಹೊರೆಯುವುದೇ ಕಷ್ಟಕರವಾಗಿತ್ತು. ಮಕ್ಕಳ ಲಾಲನೆ ಪೋಷಣೆ ಸಂಸಾರದ ನೊಗ ಹೊತ್ತ ಪುಟ್ಟಸ್ವಾಮಯ್ಯನವರು ಬಡತದನ ಬೇಗೆಯಲ್ಲಿ ಬೆಂದವರು. ಹಸಿವಿನ ಸಂಕಟ ಕಂಡವರು, ಆ ಕಾಲಕ್ಕೆ ಹೆಂಡದ ವ್ಯಾಪಾರ ಬಿಟ್ಟು ಅವರಿಗೇನೂ ಗೊತ್ತಿರಲಿಲ್ಲ. ಇನ್ನು ಹೊಲ ಗದ್ದೆ ತೋಟವೂ ಇರಲಿಲ್ಲ. ಕೃಷಿ ಮಾಡಿ ಜೀವನ ನಡೆಸುವ ಸಾಮರ್ಥ್ಯವೂ ಇರಲಿಲ್ಲ. ತುಂಬಿದ ಮನೆ, ಮನೆ ತುಂಬಾ ಮಕ್ಕಳು, ಇಬ್ಬರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ರಾಜಣ್ಣನವರೇ ಮೊದಲ ಮಗ. ಹುಟ್ಟು ಹೆಸರು ಮುತ್ತಣ್ಣ. ಮುತ್ತತ್ತಿಯಲ್ಲಿ ಹನುಮನ ಆಶೀರ್ವಾದ ಪಡೆದು ಹುಟ್ಟಿದ ಮಗುವಿಗೆ ಮುತ್ತಣ್ಣ ಎಂಬ ಹೆಸರಿಟ್ಟಿದ್ದರು. ಮುತ್ತಣ್ಣನಿಗೆ ಒಬ್ಬ ತಮ್ಮ ವರದಪ್ಪ, ಇಬ್ಬರು ತಂಗಿಯರು ಶಾರದಮ್ಮ, ನಾಗಮ್ಮ.

ಪುಟ್ಟಸ್ವಾಮಯ್ಯನವರು ಖಡಾಖಂಡಿತವಾಗಿ ಹೆಂಡದ ವ್ಯಾಪಾರವನ್ನು ತೊರೆದು ಜೀವನದ ಮಾರ್ಗಕ್ಕಾಗಿ ಕಲಾದೇವತೆಯ ಆಶ್ರಯಕ್ಕೆ ಬರುತ್ತಾರೆ. ಭೀಮ, ದುರ್ಯೋಧನ, ಮುಂತಾದ ಪಾತ್ರಗಳಿಗೆ ಹೇಳಿ ಮಾಡಿಸಿದ ಅವರ ಶರೀರ ನಾಟಕ ಕಂಪೆನಿಗಳನ್ನು ಆಕರ್ಷಿಸುತ್ತದೆ. ಎಲ್ಲದಕ್ಕಿಂತ ಅತ್ಯುತ್ತಮ ಶಾರೀರ ಭಗವಂತನಿಂದ ಅವರಿಗೆ ಬಂದ ವರಪ್ರಸಾದವಾಗಿರುತ್ತದೆ. ಕಂಚಿನ ಕಂಠ ಹೊಂದಿದ್ದ ಇವರು ನಾಟಕಗಳಲ್ಲಿ ತಮ್ಮ ಪಾತ್ರಕ್ಕೆ ತಾವೇ ಹಾಡುತ್ತಾರೆ. ಇವರ ಹಾಡುಗಾರಿಕೆಗೆ ಅಭಿನಯಕ್ಕೆ ಮಾರುಹೋದ ಅಭಿಮಾನಿಗಳು ಇವರು ವೇದಿಕೆಯ ಮೇಲೆ ಬರುತ್ತಿದ್ದಂತೆ ಜೋರಾಗಿ ಚಪ್ಪಾಳೆ ತಟ್ಟಿ, ಸಿಳ್ಳೆ ಹೊಡೆದು ಪ್ರೋತ್ಸಾಹಿಸುತ್ತಿದ್ದರು. ಇದೇ ಅಭಿಮಾನ ಪ್ರೀತಿ ಮುಂದೆ ರಾಜಣ್ಣನವರಿಗೂ ಸಿಕ್ಕಿದ್ದು ಅದೃಷ್ಟವೂ ಹೌದು, ವರವೂ ಹೌದು.

"ರಾಜಣ್ಣನವರು ಬಾಲ್ಯದಲ್ಲಿ ಅತ್ಯಂತ ತುಂಟ, ಬಾಲ್ಯ ಸಹಜ ವಯೋಮಾನದಲ್ಲಿ ಮರಕೋತಿ, ಬುಗುರಿ, ಚಿನ್ನಿ ದಾಂಡು ಹೀಗೆ ಒಂದಲ್ಲ ಎರಡಲ್ಲ ಸದಾ ಕಾಲ ಆಟದಲ್ಲೇ ಮೈಮರೆಯುತ್ತಿದ್ದರು. ರಾಜಣ್ಣನವರು ಶಾಲೆಯಲ್ಲಿ ಹೋಗಿ ಕಲಿತಿದ್ದು, ಬಹಳ ಕಡಿಮೆ. ಅತ್ಯಂತ ಸ್ಫುರದ್ರೂಪ ಮುದ್ದಾದ ರಾಜಣ್ಣನವರ ಜ್ಯೋತಿಷ್ಯವನ್ನು ಕೇಳಿದ ಪುಟ್ಟಸ್ವಾಮಯ್ಯನವರಿಗೆ ಎಲ್ಲಿಲ್ಲದ ಸಂತೋಷವಾಗುತ್ತದೆ." ಶ್ರೀ. ಮನ್ನೃಪ ಶಾಲಿವಾಹನ ಶಕೆ ೧೮೫೧ನೇ ಶುಕ್ಲನಾಮ ಸಂವತ್ಸರ ಚೈತ್ರ ಮಾಸ ವಿಶಾಖ ನಕ್ಷತ್ರ ತುಲಾ ರಾಶಿಯಲ್ಲಿ ಜನ್ಮ ತಾಳಿದ ರಾಜಣ್ಣನವರ ಜನ್ಮ ಕುಂಡಲಿಯಲ್ಲಿ ಲಗ್ನದಲ್ಲಿ ಗುರು ಸಪ್ತಮದಲ್ಲಿ ಚಂದ್ರ ಬಲಾಢ್ಯ ಸಮಕಪ್ರತ ಗಜಕೇಸರಿ ಯೋಗ ಉತ್ತಮ ರೂಪ ಗುಣಸಂಪನ್ನ ರಾಜನಿಗೆ ಸಮಾನ ಯೋಗ ಇರುವುದು ತಿಳಿದು ಪುಟ್ಟಸ್ವಾಮಯ್ಯನವರಿಗೆ ಹಾಲು ಕುಡಿದಷ್ಟು ಸಂತಸವಾಗುತ್ತದೆ.

"ವಿದ್ಯೆ ಸ್ಥಾನಾಧಿಪತಿಯಾದ ರವಿಯು ಲಗ್ನದಲ್ಲಿ ಪರಮೋಚ್ಚಾಂಶವನ್ನು ಹೊಂದಿರುವುದರಿಂದ

ಜಾತಕನಿಗೆ ಉತ್ತಮ ಜ್ಞಾನಪ್ರಾಪ್ತಿ , ಲಗ್ನದಲ್ಲಿ ಗುರು ಇರುವುದರಿಂದ ಜನರನ್ನು ಆಕರ್ಷಿಸುವುದು ಹಾಗೂ ಅಧಿಕ ವಾಕ್‌ಚಾತುರ್ಯ, ಲಗ್ನಾಧಿಪತಿ ತೃತೀಯದಲ್ಲಿ ಇರುವುದರಿಂದ ಮಹಾ ಧೈರ್ಯಶಾಲಿ, ಸಾಹಸಿ, ಪ್ರಯತ್ನಶೀಲ, ಇಂದ್ರ ಸಮಾನ ಯೋಗ, ಧನ ಹಾಗೂ ಸಪ್ತಮ ಸ್ಥಾನಾಧಿಪತಿ ಶುಕ್ರ ಲಗ್ನಾತ ೧೧ನೇ ಸ್ಥಾನದಲ್ಲಿದ್ದು, ಬುಧ, ಗುರುವಿಗೆ ಅರ್ಧ ತ್ರಿಕೋಣ ಹೊಂದಿರುವುದರಿಂದ ಜಾತಕನಿಗೆ ಅತುಲ ಗೌರವ , ಕೀರ್ತಿ, ಮಾನ ಸಮ್ಮಾನಗಳು ದೊರಕುತ್ತದೆ"[೨] ಜಾತಕನ ಜನ್ಮ ಕುಂಡಲಿಗೆ ಪ್ರಜಾಪಕ್ಷಕಾರಕ ಬುಧನು ಬಲಾಢ್ಯಾನಾಗಿದ್ದು, ಜನರನ್ನು ಆಕರ್ಷಿಸಿಕೊಳ್ಳುವನು. ರವಿಯು ಪ್ರಬಲನಾಗಿದ್ದು, ರಾಹುವಿನ ಮಿಲನದಿಂದ ರಾಜಕೀಯ ಯೋಗಭಂಗವಾಗುತ್ತದೆ. ೧೦ನೆ ಸ್ಥಾನಾಧಿಪತಿ ಶನಿಯು ಭಾಗ್ಯದಲ್ಲಿ ಬಲಾಢ್ಯನಾಗಿದ್ದು, ಶುಕ್ರನನ್ನು ನೋಡುವುದರಿಂದ ಕಲೆಯಲ್ಲಿ ಪ್ರಸಿದ್ಧಿ ಇದೆ. ಕರ್ಮ ಸ್ಥಾನಾಧಿಪತಿ ಶನಿ ಹಾಗೂ ಲಗ್ನಾಧಿಪತಿ ಮಂಗಳ ಪರಸ್ಪರ ದುಷ್ಟಯೋಗದಲ್ಲಿದೆ. ಆಯುಷ್ಯಕಾರಕ ಮನಃಕಾರಕ ಚಂದ್ರ ಲಗ್ನ ಸಪ್ತಮಕ್ಕೆ ಇದ್ದು, ಆಧ್ಯಾತ್ಮ ಯೋಗ ಧ್ಯಾನ, ನಿಧಿ ಮನನ ಇವುಗಳ ಸಾಧನೆ ಶ್ರೇಷ್ಠ ಹಾಗೂ ಮೋಕ್ಷ ಪ್ರಧಾನ ಫಲವಿದೆ. ಇವಿಷ್ಟು ಗಜಕೇಸರಿ ಯೋಗವಿದ್ದ ಮಗುವಿನ ಜಾತಕದಲ್ಲಿ ಇತ್ತು ಎಂಬುದು ಸತ್ಯ.

ಮುತ್ತುರಾಜ ಬಾಲ್ಯದಲ್ಲಿ ಮಾರಮ್ಮನ ಗುಡಿಯಲ್ಲಿ ಬೆಣ್ಣೆ ಕದಿಯುತ್ತಿದ್ದದ್ದು ಇತರ ಮಕ್ಕಳೊಡನೆ ಆಟ ಆಡಿ ಜಗಳ ಆಡುತ್ತಿದ್ದು, ಎಲ್ಲವೂ ಕೃಷ್ಣನ ಬಾಲ್ಯವನ್ನು ನೆನಪಿಸುತ್ತದೆ. ಡಾ. ರಾಜ್‌ಕುಮಾರ್‌ರವರ ಬಾಲ್ಯದ ದಿನಗಳನ್ನು ಒಮ್ಮೆ ಅವರೂ ತಿಳಿಸಿದಾಗ ಅತ್ಯಂತ ಮುಖ್ಯವಾದ ಸಂಗತಿಯೊಂದು ನಮ್ಮ ಕಣ್ಣಿಗೆ ಬೀಳುತ್ತದೆ. "ಪುಟ್ಟಸ್ವಾಮಯ್ಯನವರು ದೊಡ್ಡ ಕಲಾವಿದರು, ಹಲವಾರು ಪಾತ್ರಗಳನ್ನು ಲೀಲಾಜಾಲವಾಗಿ ಅಭಿನಯಿಸಿದರು. ಸ್ವತಃ ಹಾಡುಗಾರರು, ತಾವೇ ಹಾರ್ಮೋನಿಯಂ ನುಡಿಸುತ್ತ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಊರೂರು ತಿರುಗುತ್ತಾ ನಾಟಕ ಮಾಡಿಸುತ್ತಿದ್ದರು. ನಾಟಕದ ಮಾಸ್ತರಾಗಿದ್ದರು. ಇವರ ಪ್ರಭಾವ ಸಹಜವಾಗಿಯೇ ರಾಜಣ್ಣನವರ ಮೇಲೆ ಬೀಳುತ್ತದೆ. ಹಳ್ಳಿಗಳಲ್ಲಿ ತಂದೆಯವರಿಗೆ ಸಿಗುತ್ತಿದ್ದ ಗೌರವವನ್ನು ಕಂಡಾಗ ಮುತ್ತುರಾಜನಿಗೂ ಸಂತೋಷವಾಗುತ್ತಿತ್ತು. ನಾಟಕದ ಗುಟ್ಟುಗಳನ್ನು, ವಿದ್ಯೆಗಳನ್ನು ಅಪ್ಪಾಜಿಯಿಂದ ಆಲಿಸಿದಾಗ ಸಹಜವಾಗಿಯೇ ಕಲೆಯ ಕುತೂಹಲ ರಾಜಣ್ಣನವರಲ್ಲಿ ಟಿಸಿಲೊಡೆದಿತ್ತು. ತಂದೆಯ ಮುಂದೆ ಕುಳಿತು ಮಟ್ಟುಗಳನ್ನು ಹಾಕುವುದನ್ನು ಅಭ್ಯಾಸ ಮಾಡಿದ ಮುತ್ತುರಾಜನ ಪುಟ್ಟ ಬಾಯಿಂದ ಪದ್ಯಗಳನ್ನು ಹಾಡಿಸುತ್ತ ಅದಕ್ಕೆ ತಕ್ಕಂತೆ ಹಾರ್ಮೋನಿಯಂ ನುಡಿಸುವುದೆಂದರೆ ಪುಟ್ಟಸ್ವಾಮಯ್ಯನವರಿಗೆ ಪರಮಾನಂದ"[೩]



ನಾವೆಲ್ಲಾ ರಾಜಣ್ಣನವರನ್ನು ಗುರುತಿಸುವುದು ಅಪಾರ ಅಪ್ರತಿಮ ಕಲೆಗಾರಿಕೆಯಿಂದ ಹಾಗೂ ಅವರ ಹಾಡುಗಾರಿಕೆಯಿಂದ ಅಲ್ಲವೆ? ರಾಷ್ಟ್ರಮಟ್ಟದಲ್ಲಿ ಅತ್ಯುತ್ತಮ ಗಾಯಕ ಪ್ರಶಸ್ತಿ ಪಡೆದ ರಾಜಣ್ಣನವರ ಗಾಯನದ ಸ್ಫೂರ್ತಿ ಪ್ರೇರಣೆ ಎಲ್ಲವೂ ಪುಟ್ಟಸ್ವಾಮಯ್ಯನವರು ಎಂದರೆ

ತಪ್ಪಾಗಲಾರದು. ಶಾಲೆ ಕಲಿಯುವ ಮೊದಲು ಮನೆಯಲ್ಲಿ ಅವರು ಹಾಡುಗಾರಿಕೆ ಅಭ್ಯಸಿಸಿದ್ದರು ಎನ್ನುವುದೂ ಸತ್ಯ. ಮಗನನ್ನು ಚೆನ್ನಾಗಿ ಓದಿಸಬೇಕೆಂಬುದು ತಂದೆಯ ಬಯಕೆ. ಗಾಜನೂರಿನ ಹಿರೆಪುರದ ಸರ್ಕಾರಿ ಶಾಲೆಗೆ ಮುತ್ತುರಾಜನನ್ನು ಸೇರಿಸಲಾಯಿತು. ಸದಾಕಾಲ ಸ್ವಾತಂತ್ರ್ಯ ಸಿಕ್ಕ ಪಕ್ಷಿಯಂತೆ ಹಾರುತ್ತಿದ್ದ ಈ ಬಾಲಕನಿಗೆ ಶಾಲೆ ಒಂದು ಸೆರೆಮನೆಯಂತೆ ಆಗುತ್ತಿದೆ. ಪ್ರಕೃತಿಯಲ್ಲಿ ತೇಲಾಡುತ್ತಿದ್ದ ದಿವ್ಯಾನುಭವ ಶಾಲೆಯ ನಾಲ್ಕು ಗೋಡೆಯ ಮಧ್ಯೆ ಸಿಗುತ್ತಿರಲಿಲ್ಲ. ಮೂರನೇ ತರಗತಿ ಓದುವ ಹೊತ್ತಿಗೆ ದಡ್ಡ ಹುಡುಗನೆಂಬ ಬಿರುದು ಪಡೆಯುತ್ತಾರೆ. ಅವರ ಮಾಸ್ತರ ಬಾಲೇಗೌಡರು ಎಷ್ಟೇ ತಿದ್ದಿ ತೀಡಿ ಪಾಠ ಹೇಳಿಕೊಟ್ಟರೂ ಈ ಹುಡುಗನಿಗೆ ತಾಯಿ ಸರಸ್ವತಿ ಒಲಿಯುವುದಿಲ್ಲ.



ಹೊಳೆಯ ನೀರಿನಲ್ಲಿ ಈಜುವುದು ಮರವೇರಿ ಹಣ್ಣು ಕೀಳುವುದು, ಹೊಲ ತೋಟಗಳ ತಂಗಾಳಿಯಲ್ಲಿ ತಿರುಗಾಡುವುದು, ದೂರದ ಬೆಟ್ಟಗಳ ಸಾಲುಗಳ ವೀಕ್ಷಣೆ, ಕೆರೆಯ ಸಿಹಿ ನೀರು ಕುಡಿಯುವುದರಲ್ಲಿ ಇರುವ ಸುಖ ಶಾಲೆಯ ಪಾಠದಲ್ಲಿ ಇಲ್ಲ ಎನ್ನುವುದು ಇವನ ಅನುಭವಕ್ಕೆ ಬಂದಿತು. ಗಾಜನೂರಿನಲ್ಲಿ ಪುಟ್ಟ ಕೆರೆ ಬಳಿ ಒಂದು ಕೆರೆ, ಅಲ್ಲಿ ಜೋಡಿ ಅರಳಿಮರ. ಊರಿನ ಏಸು ಪ್ರಾರ್ಥನಾ ಮಂದಿರದಲ್ಲಿ ಫಾದರ್ ಎಲೆಸ್ಟನ್‌ರವರು ಕೈಯಲ್ಲಿ ಕೋವಿ ಹಿಡಿದು ಇಲ್ಲಿಗೆ ಬರುತ್ತಿದ್ದರು. ಅರಳೀ ಮರದ ಹಣ್ಣನ್ನು ತಿನ್ನಲು ಬರುತ್ತಿದ್ದ ಕೊಗ್ಗಲ ಹಕ್ಕಿಗಳನ್ನು ಬೇಟೆಯಾಡುತ್ತಿದ್ದರು. ಇದನ್ನು ನೋಡಲು ಹಳ್ಳಿಯ ಬಾಲಕರು ಅಲ್ಲಿ ಅಚ್ಚರಿಯಿಂದ ಸೇರುತ್ತಿದ್ದರು. ಅದರಲ್ಲಿ ಮುತ್ತುರಾಜನೂ ಒಬ್ಬ. ಅದೊಂದು ತುಂಬಾ ಮಜಾ ಕೊಡುತ್ತಿದ್ದ ಪ್ರಸಂಗ. ಮುತ್ತುರಾಜ ಗಾಜನೂರಿನ ದೇವಾಲಯಗಳಿಗೆ ತಪ್ಪದೆ ಹೋಗುತ್ತಿದ್ದ ಏಕೆಂದರೆ ಬೀರೇದೇವರ ಗುಡಿ ಪೂಜಾರಪ್ಪನವರು ಎರಡೂ ಕೈ ತುಂಬಾ ಪ್ರಸಾದ ನೀಡುತ್ತಿದ್ದರು. ಗುಡಿ, ಪ್ರಸಾದ, ಭಜನೆ, ಮುತ್ತುರಾಜನ ಆಕರ್ಷಣೆಗಳಾಗಿದ್ದವು.

ಗಣಿತದ ಮಾಸ್ತರ್ ನೀಡಿದ ಲೆಕ್ಕವನ್ನು ಮುತ್ತುರಾಜ ತಪ್ಪು ತಪ್ಪಾಗಿ ಉತ್ತರಿಸುತ್ತಿದ್ದ. ಮಾಸ್ತರ್ ಕೋಪಗೊಂಡು ಬೆತ್ತದಿಂದ ಬಾರಿಸಿದ್ದರು. ಮನೆಗೆ ಬಂದ ಮೇಲೆ ಅಪ್ಪ ಮಗನನ್ನು ಪುನಃ ಬಾರಿಸಿದ್ದರು. ಆದರೆ ರಾತ್ರಿಯಾಗುತ್ತಿದ್ದಂತೆ ತಂದೆಯ ಪ್ರೀತಿ ಉಕ್ಕಿ ಬಂದು ಮಗನಿಗೆ ತಾವೇ ಕೈಯಾರೆ ಕೈಯೆಣ್ಣೆ ಹಚ್ಚಿ ಉಪಚರಿಸುತ್ತಾರೆ. ತಂದೆ ಹೊರಗೆ ಒರಟರಂತೆ ಕಂಡರೂ ಒಳಗೆ ಪ್ರೀತಿಯ ಸಾಗರ ಎಂಬುದು ಮುತ್ತಣ್ಣನಿಗೆ ಇದೇ ಮೊದಲಲ್ಲ. ಹಲವಾರು ಬಾರಿ ಅನುಭವಕ್ಕೆ ಬಂದಿರುತ್ತದೆ. ಅಂತೂ ಇಂತೂ ಶಾಲೆಯ ಪಾಠಕ್ಕೆ ಬ್ರೇಕ್ ಬಿತ್ತು. ಶಾಲೆಗೆ ಹೋಗಿ ಮಗ ಕಲಿತು ದೊಡ್ಡ ವ್ಯಕ್ತಿಯಾಗಬೇಕೆಂಬ ತಂದೆಯ ಆಸೆಗೆ ತಣ್ಣೀರೆರಚಿದಂತೆ ಆದಂತೆ ಆಗಿ ಪುಟ್ಟಸ್ವಾಮಯ್ಯನವರಿಗೆ ತುಂಬಾ ನಿರಾಸೆಯಾಗುತ್ತದೆ. ಆದರೆ ಈ ಬಾಲಕ ಮುಂದೆ ಜಗದ್ವಿಖ್ಯಾತನಾಗುತ್ತಾನೆ ಎಂಬ ಸತ್ಯ ತಂದೆಗೆ ತಿಳಿಯದಾಯ್ತು.

ಶಾಲೆಯ ಓದು ಮುಂದುವರೆಯಲಿಲ್ಲ. ಆದರೆ ಗಾಜನೂರು, ಹಿರಿಯೂರು, ತಿಗಣಾರೆ, ಅರಿಸಾಪೆ

ಮುಂತಾದ ಹಳ್ಳಿಗಳಲ್ಲಿ ತಂದೆಯು ನಡೆಸಿಕೊಡುತ್ತಿದ್ದ ನಾಟಕಗಳನ್ನು ನೋಡುತ್ತಾ ಅವರೊಂದಿಗೆ ಊರು ಸುತ್ತುವ ಒಳ್ಳೆಯ ಅವಕಾಶ ಮುತ್ತಣ್ಣನಿಗೆ ಸಿಗುತ್ತದೆ. ಅವನಿಗೂ ಇದೇ ಬೇಕಾಗಿತ್ತು. ಕೆರೆಯಿಂದ ನೀರು ತರುವುದು, ಕಾಡಿನಿಂದ ಸೌದೆ ತರುವುದು, ಹಸು ಕರು ಮೇಯಿಸುವುದು, ಹುಲ್ಲು ತರುವುದು, ಸಂಜೆ ಅಪ್ಪನೊಂದಿಗೆ ನಾಟಕದ ತಾಲೀಮಿನಲ್ಲಿ ಭಾಗವಹಿಸುವುದು ಇವು ಮುತ್ತಣ್ಣನ ದಿನಚರಿಗಳಾದವು. ಗಾಜನೂರಿನ ಸಮೀಪ ಹೊನ್ನುಳೆ (ಹೊನ ಹೊಳೆ) ಎಂಬ ಸ್ಥಳ, ಅದರಾಚೆ ಕಾಡು, ಮೊದಲು ಹುಲ್ಲುಗಾವಲು, ಕ್ರಮೇಣ ಬೆಟ್ಟ ಗುಡ್ಡಗಳ ಶ್ರೇಣಿ, ಅಲ್ಲೆ ತುಂಬಪ್ಪನ ಗುಡಿ. ಇವೆಲ್ಲ ಬಾಲಕನ ಆಪ್ತ ತಾಣ, ಹೊನ್ನೆಳೆಯಲ್ಲಿ ಈಜುವುದು ಇವನ ಪ್ರೀತಿಯ ಹವ್ಯಾಸ. ಗಾಜನೂರಿನ ಪೂರ್ವಕ್ಕೆ ಹಿರೀಪುರ, ಪಶ್ಚಿಮಕ್ಕೆ ತಿಗಣಾಲೆ, ಇಲ್ಲೆಲ್ಲಾ ನಾಟಕದ ಅಭ್ಯಾಸಕ್ಕೆಂದು ತಿರುಗುತ್ತಿದ್ದ. ತಿಗಣಾಲೆ ಮಾರಮ್ಮನ ಗುಡಿಯಲ್ಲಿ ಹರಕೆ ಹೊತ್ತ ಭಕ್ತರು ದೇವರ ಮುಂದೆ ಇಟ್ಟು ಹೋಗುತ್ತಿದ್ದ ಬೆಣ್ಣೆಯನ್ನು ಯಾರೂ ಇಲ್ಲದ ವೇಳೆ ಬೆಳಗಿನ ಜಾವ ಎದ್ದು ಹೋಗಿ ಕದ್ದು ತಿನ್ನುತ್ತಿದ್ದ, ತಿಂಡಿಪೋತ, ಕಡ್ಲೆಪುರಿ, ಚಕ್ಕುಲಿ, ನಿಪ್ಪಟ್ಟು, ಸಕ್ಕರೆ ತಟ್ಟಿ, ಹಾಲು ಬರ್ಫಿ ತಿನ್ನುವುದೆಂದರೆ ಇವನಿಗೆ ಎಲ್ಲಿಲ್ಲದ ಪ್ರೀತಿ.

ರಾಜಣ್ಣನವರು ಅದ್ಭುತ ಕಲಾವಿದನಾಗಲು ಗಾಯಕನಾಗಲು ಹಲವಾರು ಪ್ರೇರಣೆಗಳು ಒದಗಿ ಬಂದದ್ದು ಅದೃಷ್ಟವೇ ಸರಿ. ಗಾಜನೂರಿನ ಏಸು ಪ್ರಾರ್ಥನಾಲಯದಲ್ಲಿ ಭಕ್ತರು ದಿನಾಲು ಪ್ರಾರ್ಥನೆ ಮಾಡುತ್ತಿದ್ದದ್ದನ್ನು ಬಾಲಕ ಗಮನಿಸುತ್ತಿದ್ದ. ಅವರ ಬಗ್ಗೆ ಸಹಜ ಕುತೂಹಲ ಅವನಲ್ಲಿ ಮೂಡಿತ್ತು. ಸಂಗೀತ ಅವನನ್ನು ಆಕರ್ಷಿಸಿತ್ತು. ಸಂಗೀತದ ಪ್ರಾಥಮಿಕ ಪಾಠಗಳು ತಂದೆಯಿಂದ ಆಗಲೇ ಬಾಲಕನಿಗೆ ಆರಂಭವಾಗಿತ್ತು. ನಿಧಾನವಾಗಿ ಶ್ರುತಿ ಹಿಡಿದು ಹಾಡು ಹಾಡುಗಾರಿಕೆಯನ್ನು ಮುತ್ತಣ್ಣ ಕಲಿತುಕೊಂಡ. ತಮ್ಮ ಮಗ ಸಂಗೀತ ಕಲಿತರೆ ಒಳ್ಳೆಯದು ಎಂದು ಪುಟ್ಟಸ್ವಾಮಯ್ಯನವರು ಮುತ್ತುರಾಜನನ್ನು ನಂಜನಗೂಡಿನ ಅಪ್ಪಾಜಿ ಗೌಡರಲ್ಲಿ ಮತ್ತು ಸಣ್ಣೇಗೌಡರಲ್ಲಿ ಕಳುಹಿಸುತ್ತಾರೆ. ಚಿಕ್ಕ ಹಳ್ಳಿಯಿಂದ ದೊಡ್ಡ ಊರಿಗೆ ಪಯಣ. ಅಲ್ಲಿ ಸಂಗೀತಾಭ್ಯಾಸ ಆರಂಭ. ಅಲ್ಲಿ ಅಪ್ಪಾಜಿಗೌಡರು ಮುತ್ತಣ್ಣನಿಗೆ ಸಂಗೀತದ ಸರಸ್ವತಿಯನ್ನು ಪರಿಚಯಿಸುತ್ತಾರೆ. ಆದರೆ ಅದು ಹೆಚ್ಚು ಕಾಲ ಮುಂದುವರೆಯಲಿಲ್ಲ. ಹಾಲು ಬರ್ಫಿ ಆಸೆಗೆ ಈಡುಗಾಯಿ ಬಾಚಿ ಅಂಗಡಿಗೆ ಮಾರಿ ಬಂದ ಹಣದಲ್ಲಿ ಹಾಲು ಬರ್ಫಿ ತಿಂದ ಸುದ್ದಿ ಮನೆಗೆ ತಿಳಿಯುತ್ತದೆ.

ಒಮ್ಮೆ ಟೆಂಟ್ ಸಿನೆಮಾ ನೋಡಿ ಬಂದ ಮುತ್ತುರಾಜ್ ಸಿನೆಮಾ ಬಗ್ಗೆ ಅಪಾರ ಪ್ರೀತಿ ಮೋಹಕ್ಕೆ ಬೀಳುತ್ತಾನೆ. ಸಿನೆಮಾ ಯಾವ ರೀತಿ ತಯಾರಾಗುತ್ತದೆ ಎಂದು ತಿಳಿಯುವ ಹಂಬಲದಿಂದ ಸಿನೆಮಾ ಮುಗಿದ ಮೇಲೆ ಹಿಂದೆ ಹಿಂದೆ ಹೋಗಿ ನೋಡುತ್ತಾನೆ. ಅವನಿಗೇನೂ ತಿಳಿಯುವುದಿಲ್ಲ. ಸಿನೆಮಾ ಒಂದು ಅದ್ಭುತ ಲೋಕ ಎಂಬ ಕಲ್ಪನೆ ಅವನಲ್ಲಿ ಮೂಡಿ ಬಂದಿದ್ದು ಸತ್ಯ. ಮುಂದೆ ಕೆಲವೇ ದಿನಗಳಲ್ಲಿ ತಂದೆಯವರು ಬಂದು ಪುನಃ ಮಗನನ್ನು ಗಾಜನೂರಿಗೆ ಕರೆದುಕೊಂಡು ಹೋಗುತ್ತಾರೆ. ಹೀಗೆ ತಮ್ಮ ಬಾಲ್ಯದ ದಿನಗಳನ್ನು ಬಡತನದಲ್ಲಿ ಕಳೆದರೂ ವಯೋ ಸಹಜ ಮುಗ್ಧ ಬಾಲಕ ಮುತ್ತುರಾಜ್ ತನ್ನ ಬಾಲ್ಯದ ದಿನಗಳನ್ನು ಸಂತೋಷದಿಂದಲೇ ಕಳೆದ ಎಂದು ಹೇಳಬಹುದು, ರಂಗಭೂಮಿ ಎನ್ನುವುದು ಅವನನ್ನು ಇನ್ನು ಕೈಬೀಸಿ ಕರೆದಿರಲಿಲ್ಲ.

## ೩.೨ ರಂಗಭೂಮಿ :

ಡಾ. ರಾಜ್‌ಕುಮಾರ್ ರವರ ಸಿನೆಮಾ ಯಾನದ ಬಗ್ಗೆ ಸಂಶೋಧನೆ ಕೈಗೊಂಡ ನನಗೆ ಆರಂಭದಲ್ಲಿಯೇ ಒಂದೆರೆಡು ಸಮಸ್ಯೆಗಳು ಎದುರಾದವು. ಅವರ ಜನನ, ಬಾಲ್ಯ, ರಂಗಭೂಮಿ, ಸಿನೆಮಾ ಪ್ರವೇಶ ಈ ಕುರಿತು ಹಲವು ಸಂಶೋಧನೆಗಳು ನಡೆದು ಹೋಗಿವೆ. ಈ ಅಧ್ಯಾಯ ಕುರಿತು ಹಲವಾರು ಲೇಖಕರು ಸವಿಸ್ತಾರವಾಗಿ ರೋಚಕವಾಗಿ ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಸುಂದರವಾದ ಬರವಣಿಗೆಯ ಮೂಲಕ ಅವರ ಜೀವನ ಚರಿತ್ರೆಯನ್ನು ಓದುಗರ ಮುಂದೆ ಇಟ್ಟಿದ್ದಾರೆ. ಸಂಶೋಧಕಿಯಾಗಿ ನಾನು ಹೊಸದಾಗಿ ಹೇಳಬೇಕಾದ ಹೆಚ್ಚು ಸಂಗತಿಗಳು ನನಗೆ ಈ ಅಧ್ಯಾಯದಲ್ಲಿ ಕಂಡು ಬರಲಿಲ್ಲ. ಆದರೂ ರಾಜಣ್ಣನವರನ್ನು ಕುರಿತು ಅಧ್ಯಯನ ಮಾಡುವವರಿಗೆ ನನ್ನ ಕೃತಿ ಒಂದಿಷ್ಟು ಅಧಿಕೃತ ಮಾಹಿತಿಯನ್ನು ನೀಡುವ ಉದ್ದೇಶ ನನ್ನದು. ಜೊತೆಗೆ ರಾಜಣ್ಣನವರಂಥ ದಿಗ್ಗಜರ ಜೀವನ ಹೂವಿನ



ಹಾಸಿಗೆಯಾಗಿರದೆ ಅತ್ಯಂತ ಕಷ್ಟದ ದಿನಗಳನ್ನು ನೋಡಿದ, ಅದರಿಂದ ಹೊರಬಂದು ದೊಡ್ಡ ಸಾಧನೆಯನ್ನು ಮಾಡಿದ ಒಬ್ಬ ಸಾಧಕರ ಒಬ್ಬ ಸಾಧಕರ ಆರಂಭದ ದಿನಗಳ ಬಗ್ಗೆ ತಿಳಿಸುವುದು ನನ್ನ ಕರ್ತವ್ಯವಾಗಿತ್ತು. ಈ ಕರ್ತವ್ಯವನ್ನು ಬಹಳ ಪ್ರೀತಿಯಿಂದ ಮಾಡಿದ್ದೇನೆ. ಹತ್ತಿದ ಮೆಟ್ಟಿಲುಗಳನ್ನು ಏರಿದ ಏಣಿಯನ್ನು ಎಂದು ಮರೆಯಬಾರದು ಎಂಬುದು ಸತ್ಯ. ಜೀವನದ ಆರಂಭದಲ್ಲಿ ಪಟ್ಟ ಕಷ್ಟಗಳನ್ನು ಎಂದಿಗೂ ಮರೆಯದೇ ಅಹಂಕಾರವನ್ನು ಸದಾ ಕಾಲ ದೂರವಿದ್ದು ಅತ್ಯಂತ ಸರಳ ಜೀವನ ನಡೆಸಿದ ರಾಜಣ್ಣನವರ ಬಾಲ್ಯ ಸಿನಿಮಾ ಪ್ರವೇಶ ಎಲ್ಲವೂ ಆಕಸ್ಮಿಕ ಎಂಬಂತೆ ನಡೆದು ಹೋಗುತ್ತದೆ. ಅವರೆಂದು ಸಿನೆಮಾ ನಟರಾಗಬೇಕೆಂದು ಬಯುಸಿದವರಲ್ಲ. ಆದರೆ ಅವರ ತಂದೆ ಪುಟ್ಟಸ್ವಾಮಯ್ಯನವರಿಗೆ ತಮ್ಮ ಮಗ ಸಿನೆಮಾದಲ್ಲಿ ನಟಿಸಬೇಕೆಂಬ ಹೆಬ್ಬಯಕೆ ಇತ್ತು. ದುರಾದೃಷ್ಟ ಎಂದರೆ ರಾಜಣ್ಣನವರು ದೊಡ್ಡ ನಟರಾದದ್ದು ಕಲಾವಿದರಾದ್ದದ್ದನ್ನು ಅವರ ತಂದೆ ನೋಡಲೇ ಇಲ್ಲ.



ಕಲೆಯು ಬಗ್ಗೆ ಅಪಾರ ಶ್ರದ್ಧೆ ಗುರು ಹಿರಿಯರ ಬಗ್ಗೆ ಗೌರವ ಆದರೆ ಇನ್ನಿತರ ಕಲಾವಿದರ ಬಗ್ಗೆ ಪ್ರೀತಿ, ಪ್ರೇಮ ಹೊಂದಿದ್ದ ರಾಜಣ್ಣನವರು ಜೀವನದ ಉದ್ದಕ್ಕೂ ಅತ್ಯಂತ ಸರಳ ಜೀವನ ನಡೆಸಿದವರು. ಅವರಿಗೆ ತಾನು ನಟ ಎಂಬ ಅಹಂಕಾರ ಎಂದಿಗೂ ಇರಲಿಲ್ಲ. ಇಂಥಹ ಮಹಾನ್ ಮೇರುನಟನ ಕಲಾ ಜೀವನ ಯಾವ ರೀತಿ ಆರಂಭವಾಯಿತು ಎಂಬುದನ್ನು ಓದುವುದರಲ್ಲಿ ಅತ್ಯಂತ ರೋಚಕತೆ ತುಂಬಿದೆ. ಚಿ. ಉದಯಶಂಕರ್, ಗೌರಿ ಸುಂದರ್, ಜಗನ್ನಾಥ್ ಬಹುಳೆ, ಗಣಪತಿ ಬೊಳಾರ್ ಮುಂತಾದವರು ಈ ವಿಷಯದ ಬಗ್ಗೆ ಸವಿಸ್ತಾರವಾಗಿ ಬರೆದು ಓದುಗರ ಕುತೂಹಲವನ್ನು

ತಣಿಸಿದ್ದಾರೆ. ಹುಲ್ಲೂರು ದೊಡ್ಡ ರುಕ್ಕೂಜಿರಾವ್‌ರವರು ಹಿಮಾಲಯ ಪರ್ವತದಷ್ಟು ಮಾಹಿತಿಗಳನ್ನು ಕಲೆ ಹಾಕಿದ್ದಾರೆ. ಇದು ಬೃಹತ್ ಗ್ರಂಥ. ಈ ಎಲ್ಲ ಲೇಖಕರ ಗ್ರಂಥ ಋಣವನ್ನು ಪಡೆದ ನನಗೆ ಈ ಅಧ್ಯಾಯ ಬರೆಯಲು ಅತ್ಯಂತ ಮಾಹಿತಿಗಳು ದೊರೆತಿವೆ.



ರಾಜಣ್ಣನವರು ಕೆಸರಿನಲ್ಲಿ ಅರಳಿದ ಕಮಲದಂತೆ, ಅತ್ಯಂತ ಬಡ ಕುಟುಂಬದಿಂದ ಕೆಳಸ್ತರದ ವರ್ಗದಿಂದ ಬಂದ ಅಚ್ಚ ಬಂಗಾರ. ಬಂಗಾರ ಎನ್ನುವುದು ಮಣ್ಣಿನಲ್ಲಿ ಹುದುಗಿ ಹೋಗಿರುತ್ತದೆ. ಅದನ್ನು ಅಗೆದು ಬಗೆದು ತೆಗೆಯಬೇಕಾಗುತ್ತದೆ. ಅದಕ್ಕೆ ಕಲೆಯೆಂಬ ಸ್ಪರ್ಷ ನೀಡಬೇಕಾಗುತ್ತದೆ. ಶಿಲ್ಪಿಯ ಉಳಿಪೆಟ್ಟು ಬಿದ್ದಾಗಲೇ ಕಲ್ಲು ತನ್ನ ಮೊದಲಿನ ರೂಪ ಕಳೆದುಕೊಂಡು ಸುಂದರ ಮೂರ್ತಿಯಾಗುತ್ತದೆ. ಅದೇ ರೀತಿ ನಾಟಕ ಎನ್ನುವ ಪ್ರಕಾಶ ರಾಜಣ್ಣನವರ ಬಾಲ್ಯ ಮನಸ್ಸಿನಲ್ಲಿ ಬಹಳ ಪ್ರಭಾವ ಬೀರಿದೆ. ರಾಜಣ್ಣ ಎನ್ನುವ ಚಿನ್ನದ ಪುತ್ಥಳಿ ನಿರ್ಮಾಣ ಆಗಬೇಕಾದರೆ ಅದಕ್ಕೆ ರಂಗಭೂಮಿಯ ಹಿನ್ನೆಲೆಯೇ ಅತಿ ಮುಖ್ಯವಾದದ್ದು ಎಂಬುದು ಜಗಜ್ಜಾಹಿರ. ರಂಗಭೂಮಿಯ ಅನುಭವ ರಾಜಣ್ಣನವರಿಗೆ ಸಿಗದೇ ಹೋಗಿದ್ದರೆ, ಕನ್ನಡ ನಾಡಿಗೆ ರಾಜ್‌ನವರಂಥಹ ಮಾಣಿಕ್ಯ ಸಿಗದೇ ಹೋಗುತ್ತಿತ್ತು.



ಈ ಎಲ್ಲಾ ಕಾರಣಗಳಿಂದ ರಾಜಣ್ಣನವರ ಸಂಶೋಧನಾ ಕೃತಿಯಲ್ಲಿ ಜನನ, ಬಾಲ್ಯ, ಆನಂತರ ರಂಗ ಪ್ರವೇಶದ ಆರಂಭ. ಈ ಸಂಶೋಧನೆಯು ಅತ್ಯಂತ ಪ್ರಮುಖ ಅಧ್ಯಾಯವಾಗಿದೆ. ಅವರು ನಾಟಕ ಕ್ಷೇತ್ರಕ್ಕೆ ಕಾಲಿಡಲು ಅತ್ಯಂತ ಮುಖ್ಯ ಪ್ರೇರಣೆ ಎಂದರೆ ಅವರ ತಂದೆ ಪುಟ್ಟಸ್ವಾಮಯ್ಯನವರು, ಅಭಿನಯ ಅವರಿಗೆ ಪೂಜೆ, ಆರಾಧಿಸುವ ಕಲೆಯಾಗಿತ್ತು. ಹೊಟ್ಟೆ ಹೊರೆಯುವ ಸಾಧನವಾಗಿತ್ತು ನಾಟಕ ಇಲ್ಲದಿದ್ದರೆ ಜೀವನವೇ ಇಲ್ಲ ಎಂಬಂತೆ ಇತ್ತು. ಈ ಮುಖ್ಯ ಕಾರಣದಿಂದಲೇ ರಾಜಣ್ಣನವರು ಸದಾ ಅಭಿನಯಕ್ಕೆ ಅಂಟಿಕೊಂಡರು. ಊರೂರು ತಿರುಗುತ್ತ ನಾಟಕದಲ್ಲಿ ಮುಳುಗಿ ಹೋಗಿದ್ದ. ಪುಟ್ಟ ಸ್ವಾಮಯ್ಯನವರು ತಮ್ಮ ಮಗ ಚೆನ್ನಾಗಿ ಓದಲಿ ಎಂಬ ಆಸೆ ಇತ್ತು. ಆದರೆ ವಿದ್ಯೆ ನೈವೇದ್ಯ ಎಂದಾದಾಗ ಮಗನನ್ನು ನಾಟಕ ಕಂಪೆನಿಗೆ ಎಳೆದುಕೊಂಡರು. ಮಗನಿಗೂ ಕಂದಪದ್ಯ, ಸೀಸ ಪದ್ಯಗಳನ್ನು ಹೇಳಿಕೊಡುತ್ತಾ ಅಭಿನಯವನ್ನು ತಿದ್ದಿ ತೀಡಿ ಅವನನ್ನು ಒಬ್ಬ ಪರಿಪೂರ್ಣ ಕಲಾವಿದನನ್ನಾಗಿ ಮಾಡಿದ ಮೊದಲ ಕೀರ್ತಿ ಅವರ ತಂದೆಗೆ ಸಲ್ಲುತ್ತದೆ.



ಮೈಸೂರಿನ ಕುಂಬಾರ ವೆಂಕಟಪ್ಪ ಎಂಬ ಮಹನೀಯರು ಪುಟ್ಟಸ್ವಾಮಯ್ಯನವರ ದೈತ್ಯ ಪ್ರತಿಭೆಯನ್ನು ಅತ್ಯಂತ ಸನಿಹದಿಂದ ಕಂಡವರು. ಗುಬ್ಬಿ ಕಂಪೆನಿಯಲ್ಲಿ ಶಿಫಾರಸ್ಸು ಮಾಡಿ ಪುಟ್ಟಸ್ವಾಮಯ್ಯನವರಿಗೆ ಒಂದು ಒಳ್ಳೆಯ ಸ್ಥಾನ ಸಿಗುವಂತೆ ಮಾಡುತ್ತಾರೆ. ಗುಬ್ಬಿ ಕಂಪೆನಿಯ ಶಾಖಾ ಕಂಪೆನಿಯಾದ ನೀಲಕಂಠರವರ ಕಂಪೆನಿಯಿಂದ ಇವರಿಗೆ ಬುಲಾವ್ ಬರುತ್ತದೆ. ತಿಂಗಳಿಗೆ ಮೂವತ್ತು ರೂಪಾಯಿ ಸಂಬಳ. ತಂದೆ ಹಿಂದೆ ಮಗ ಹೀಗೆ ಇಡೀ ಕುಟುಂಬ ಕಂಪೆನಿಯ ಆಶ್ರಯಕ್ಕೆ ಬರುತ್ತಾರೆ. ಆ ಕಾಲಕ್ಕೆ ಸುಮಾರು ೨೦೦ ಜನ ಕಲಾವಿದರು ಇದ್ದ ದೊಡ್ಡ ಕಂಪೆನಿ. ಹೆಂಡತಿ ಮಕ್ಕಳು ಇಡೀ ಕುಟುಂಬವನ್ನು ಕಂಪೆನಿ ಸಾಕುತ್ತಿತ್ತು. ಇಂಥಹ ದೊಡ್ಡ ಕುಟುಂಬದ ನಡುವೆ ರಾಜಣ್ಣನವರು ತಮ್ಮ ಕಲಾ ಜೀವನವನ್ನು ಆರಂಭಿಸುತ್ತಾರೆ. ೧೯೪೦ ಜೂನ್ ೭ನೇ ತಾರೀಖು ಗುಬ್ಬಿ ಕಂಪೆನಿಯ ಕೃಷ್ಣಲೀಲಾ ನಾಟಕದಲ್ಲಿ ಗೋಪಾಲಕನಾಗಿ ಹದಿನೈದು ಮಂದಿ ಗೋಪಾಲಕರಲ್ಲಿ ಒಬ್ಬನಾಗಿ ರಾಜಣ್ಣ ವೇದಿಕೆಗೆ ಬರುತ್ತಾರೆ. ದೀಪದ ಬೆಳಕು ಎಮರು ನೆರೆದಿದ್ದ ಅಪಾರ ಜನಸ್ತೋಮ ಕಂಡು ಹೆದರಿ ಅರೆಕ್ಷಣ ತಬ್ಬಿಬ್ಬಾಗುತ್ತಾರೆ. ದೃಶ್ಯ ಮುಗಿದ ತಕ್ಷಣ ನೇಪಥ್ಯ ಸೇರುತ್ತಾರೆ. ಇದು ಅವರ ಮೊದಲ ಅನುಭವ.

ಅಂದು ಆರಂಭವಾದ ನಂತರ ಮುಂದೇನು? ಇನ್ನೇನು ರಂಗ ಪ್ರವೇಶ ಆಯಿತಲ್ಲ. ಅಲ್ಲಿಂದ ಸಣ್ಣ ಪುಟ್ಟ ಪಾತ್ರ ನಿರ್ವಹಿಸುತ್ತ ಕಂಪೆನಿಯಲ್ಲಿ ಉಳಿಯುತ್ತಾರೆ. ಸಖಿ, ಸೇವಕ, ಸೈನಿಕ, ಬಾಲಕ, ಬಾಲಕಿ ಬಂದ ಬಂದ ಪಾತ್ರವನ್ನು ಬಿಡದೆ ಎಲ್ಲದರಲ್ಲಿಯೂ ಅಭಿನಯಿಸುತ್ತಾ ಸೈ ಎನಿಸಿಕೊಳ್ಳುತ್ತಾರೆ. ಕಂಪೆನಿಯ ಹೆಚ್. ಕೃಷ್ಣ ಶಾಸ್ತ್ರಿಗಳಿಂದ ಸಂಗೀತ ಪಾಠ ಕಲಿಯುತ್ತಾರೆ. ಆ ಕಾಲಕ್ಕೆ ವೃತ್ತಿ ನಾಟಕ ರಂಗದ ಅತಿರಥ ಮಹಾರಥರಾದ ಗುಬ್ಬಿ ವೀರಣ್ಣ, ಸುಬ್ಬಯ್ಯ ನಾಯ್ಡು, ನಾಗೇಂದ್ರರಾಯರು, ಜಯಮ್ಮ, ವೈ.ವಿ. ರಾಯ್, ಮುಂತಾದವರು ಚಿತ್ರರಂಗದಲ್ಲಿ ತೊಡಗಿಸಿಕೊಂಡಿದ್ದರು. ಇದೇ ಅವಧಿಯಲ್ಲಿ ಗುಬ್ಬಿ ಕಂಪೆನಿಯಿಂದ ತಯಾರಾದ ಸುಭದ್ರ ನಾಟಕದ ಮೂಲಕ ಹೊನ್ನಪ್ಪ ಭಾಗವತರ್ ನಾಯಕರಾಗುತ್ತಾರೆ. ಅನಕೃ, ಕಾಳಿಂಗರಾವ್, ಕೆಂಪರಾಜ್ ಅರಸ್, ಟಿ. ಚೌಡಯ್ಯ, ಮಲ್ಲಿಕಾರ್ಜುನ ಮನ್ಸೂರ್ ಮುಂತಾದವರು ಚಿತ್ರರಂಗಕ್ಕೆ ಆಗಮಿಸುತ್ತಾರೆ. ಜನಪ್ರಿಯವಾಗಿದ್ದು ನಾಟಕಗಳನ್ನು ಸಿನೆಮಾ ಮಾಡುವ ಪ್ರಯತ್ನ ನಿಧಾನವಾಗಿ ಜಾರಿಗೆ ಬರುತ್ತಿತ್ತು.



ಪುಟ್ಟಸ್ವಾಮಯ್ಯನವರ ಶ್ರೀಕಂಠೇಶ್ವರ ನಾಟಕಸಭಾ, ಶೇಷಾಚಾರ್ಯರ ಶೇಷಕಮಲ, ಮಂಡಲಿಗಳ ನಾಟಕದಲ್ಲಿ ಅಭಿನಯಿಸುತ್ತಿದ್ದರು. ಗುಬ್ಬಿ ಕಂಪೆನಿಯಲ್ಲಿಯೇ ಇದ್ದೇ ಇತ್ತು. ಗುಬ್ಬಿ ಕಂಪೆನಿ ಕಲಾವಿದರು ದೂರದ ಊರಾದ ಮದ್ರಾಸಿಗೆ ಹೋಗಿ ನಾಟಕ ಆಡಿ ಬರುತ್ತಿದ್ದರು. ಇದು ಅತ್ಯಂತ ಗೌರವದ ವಿಷಯವಾಗಿತ್ತು. ಅಲ್ಲಿ ಕಲಾವಿದರಿಗೆ ಸಿಕ್ಕ ಗೌರವ ಪ್ರೀತಿ ಆದರವನ್ನು ಪುಟ್ಟಸ್ವಾಮಯ್ಯನವರಿಗೆ ಅಲ್ಲಿನ ಸಿನೆಮಾದ ಒಂದಿಷ್ಟು ವಿಚಾರಗಳು ಕಿವಿಗೆ ಬಿದ್ದವು, ಕಣ್ಣಿಗೆ ಕಂಡವು. ಸಿನೆಮಾ ಎಂಬುದು

ತುಂಬಾ ದೊಡ್ಡದು ಎಂಬ ಸತ್ಯ ಅವರಿಗೆ ಅರಿವಾಗುತ್ತದೆ. ಸಿನೆಮಾದ ನಿರ್ದೇಶಕರು ನಿರ್ಮಾಪಕರುಗಳ ಕಚೇರಿ ಮನೆ ಮುಂದೆ ಮಗ ಮುತ್ತುರಾಜನನ್ನು ಕರೆದುಕೊಂಡು ಹೋಗಿ ಅವಕಾಶಗಳಿಗಾಗಿ ವಿನಂತಿಸಿಕೊಳ್ಳಲು ಆರಂಭಿಸಿದರು ದೊರೆಯಂತೆ ಇದ್ದ ಮಗ ಇಂಪಾಗಿ ಹಾಡುತ್ತಾನೆ. ಸಿನೆಮಾ ಅವನ ಜೀವನವನ್ನು ಬದಲಿಸಬಹುದೆಂದು ಅವರಿಗೆ ಗೊತ್ತಿದ್ದು, ಆದರೆ ಅವರ ಪ್ರಯತ್ನಗಳೆಲ್ಲವೂ ಮಣ್ಣುಪಾಲಾದವು. ಹೋದ ಕಡೆ ಎಲ್ಲಾ ನಿರಾಸೆ. ಎಲ್ಲರೂ "ನೋಡೋಣ" ಎಂಬ ಭರವಸೆ ಕೊಟ್ಟರು, ಅವಕಾಶ ನೀಡಲಿಲ್ಲ. ಇದರಿಂದ ಮನ ನೊಂದ ಪುಟ್ಟಸ್ವಾಮಯ್ಯನವರು ಭಾವಪರವಶರಾಗಿ ಹಲವಾರು ಬಾರಿ ಅತ್ತದ್ದೂ ಉಂಟು.

ಅಪ್ಪ ಅತ್ತಾಗ ಮಗನಿಗೆ ಬಹಳ ಸಂಕಟವಾಗುತ್ತಿತ್ತು. ಅಪ್ಪನ ಆಸೆ ಎಂದು ನೆರವೇರುತ್ತದೆಯೋ ಎಂಬ ತುಡಿತ ಮಗನಲ್ಲಿ. ತಂದೆಗೆ ಮಗನನ್ನು ಸಿನೆಮಾದ ದೊಡ್ಡವನನ್ನಾಗಿ ಮಾಡಬೇಕೆಂಬ ಉತ್ಕಟ ಬಯಕೆ ಇತ್ತು ಜೀವ ಇರುವವರೆಗೂ ಬಹಳ ಪ್ರಯತ್ನಗಳನ್ನು ಮಾಡಿ ಬೇಸತ್ತು ಘೋರ ನಿರಾಸೆಯಿಂದ ಜೀವನದ ಪ್ರಯಾಣವನ್ನು ಮುಗಿಸಿದ್ದರು. ಈ ಆಸೆಯನ್ನು ತಾನು ನೆರವೇರಿಸಲೇಬೇಕೆಂಬ ಬಯಕೆ ಮಗನಲ್ಲಿ ಹತ್ತಿಕೊಂಡಿದ್ದು ಸತ್ಯ.

ಸಿನೆಮಾ ದೂರವಿದ್ದರೂ ನಾಟಕಗಳಿಗೆ ಏನೂ ಬರವಿರಲಿಲ್ಲ. ಸದೃಢ ಸುಂದರ ಯುವಕನಿಗೆ ನಾಟಕಗಳಲ್ಲಿ ನಾಯಕ ಪಾತ್ರ ಒಲಿದುಕೊಂಡು ಬರುತ್ತದೆ. ಹಿರೀಪುರ, ತಿಗಣಾರೆ, ಅರಕಲ್‌ವಾಡಿ, ಕೋಲಾರ, ಬಳ್ಳಾರಿ, ಬೆಂಗಳೂರು, ತಾಳವಾಡಿ, ಗಾಜನೂರು, ಎಬ್ಬೂರು, ಕಲ್ಲಾರೆ, ತಿಪಟೂರು ಹೀಗೆ ಊರೂರು ಸುತ್ತುತ್ತಾ ಮುತ್ತುರಾಜ ಪೂರ್ಣಾವಧಿಯ ಕಲಾವಿದನಾಗಿ ಮಾರ್ಪಟ್ಟ, ಊಟಕ್ಕೇನೂ ತೊಂದರೆ ಇರಲಿಲ್ಲ. ಆದರೆ ಕೈ ತುಂಬ ಸಂಬಳ ಸಿಗುತ್ತಿರಲಿಲ್ಲ. ಒಮ್ಮೆ ಆರ್ಥಿಕ ಸಮಸ್ಯೆಗಳಿಂದಾಗಿ ಕಂಪೆನಿಯನ್ನು ಮುಚ್ಚಲಾಯಿತು. ನಾಟಕ ಇಲ್ಲದಿದ್ದರೆ ಕಲಾವಿದರು ತಮ್ಮ ತಮ್ಮ ಊರುಗಳಿಗೆ ಹಿಂದಿರುಗಬೇಕಾಗುತ್ತದೆ. ಹಾಗೆ ಪುಟ್ಟಸ್ವಾಮಯ್ಯನವರು ಮುತ್ತಣ್ಣನನ್ನು ಕರೆದುಕೊಂಡು ಗಾಜನೂರಿಗೆ ಹಿಂದಿರುಗುತ್ತಾರೆ. ನಾಟಕ ಇಲ್ಲದ ದಿನಗಳು ಅತ್ಯಂತ ಕಷ್ಟಕರ ದಿನಗಳು, ನಾಟಕ ಎನ್ನುವುದು ಕೇವಲ ಹೊಟ್ಟೆ ತುಂಬುವ ಸಾಧನವಾಗಿರದೆ ಅಭಿನಯ ಎಂಬುದು ಅವರ ಉಸಿರಾಗಿತ್ತು. ಸ್ವಲ್ಪ ಕಾಲದ ನಂತರ



ಗುಬ್ಬಿ ಕಂಪೆನಿ ಪುನಃ ಆರಂಭವಾಗುತ್ತದೆ. ಕಲಾವಿದರಿಗೆ ಹೋದ ಜೀವ ಬಂದಂತೆ ಆಗುತ್ತದೆ. ಮುತ್ತರಾಜ ಎಲೆ ಮುಂದೆ ಕೂತರೆ ಗಡದ್ದಾಗಿ ತಿನ್ನುತ್ತಿದ್ದ ಮೂರು ಜನ ಉಣ್ಣುವಷ್ಟು ಒಬ್ಬನೇ ಮುಗಿಸುತ್ತಿದ್ದ. ಕಂಪೆನಿಗೆ ಹಿಂದಿರುಗಿದ ಮೇಲೆ ತೃಪ್ತಿಯಾಗಿ ಪುನಃ ಊಟ ಮಾಡಲು ಸಾಧ್ಯವಾಯಿತು

ಮೊದಮೊದಲು ಸಣ್ಣ ಪಾತ್ರಗಳು ಬಂದವು ಆದರೆ ಕ್ರಮೇಣ ಬಾಲಕನ ಅಪ್ರತಿಮ ಪ್ರತಿಭೆ ಕಂಡು ಅಪೂರ್ವ ಅವಕಾಶಗಳು ಅವನನ್ನು ಅರಸಿ ಬಂದವು. ನಾರದನ ಪಾತ್ರದಲ್ಲಿಯೇ ಮುತ್ತಣ್ಣ ಮಿಂಚಿದ್ದೇ ಮಿಂಚಿದ್ದು. ಬಾಲಕ ಇಂಪಾಗಿ ಹಾಡುತ್ತಾ ಇಡೀ ನಾಟಕಕ್ಕೆ ಹೊಸ ಕಳೆ ತಂದು ಕೊಡುತ್ತಿದ್ದ. ಭಗವಂತನ ದಯೆ ಎಂಬಂತೆ ಬಾಲಕನ ಕಂಠದಲ್ಲಿ

ಸರಸ್ವತಿ ಮನೆ ಮಾಡಿ ನಿಂತಿದ್ದಳು. ನಾರದನ ವಿದ್ಯೆಗಳನ್ನು ಕೇಳಿದ ಜನರು ಒನ್ಸ್ ಮೋರ್ ಎಂದು ಕೂಗುತ್ತಿದ್ದರು. ಜಿ.ವಿ. ಐಯ್ಯರ್, ಬಾಲಕೃಷ್ಣ ಎಲ್ಲರೂ ಅವನನ್ನು ಹುರಿದುಂಬಿಸುತ್ತಿದ್ದರು. ದೂರದಿಂದ ಮಗನ ಪ್ರತಿಭೆ ಕಂಡು ಸಂತಸ ಪಟ್ಟ ತಂದೆ ಮುಂದೆ ಮಗ ಬೆಳೆದು ದೊಡ್ಡ ಕಲಾವಿದ ಆಗುತ್ತಾನೆ ಎಂಬ ಆಸೆ ಹೊಂದಿದ್ದರು. ಮುತ್ತರಾಜನ ಶಾರೀರ, ಅಭಿನಯ, ಭಾಷಾ ಶುದ್ದತೆ, ಸ್ಪಷ್ಟ ಉಚ್ಚಾರಣೆ ಕೇಳುಗರನ್ನು ಮಂತ್ರ ಮುಗ್ಧಗೊಳಿಸಿತ್ತು.



ತಮ್ಮ ವರದಪ್ಪ, ತಂಗಿ ಶಾರದಮ್ಮನೂ ಸಹಾ ಮುತ್ತುರಾಜನ ಜೊತೆಯಲ್ಲಿ ಅಭಿನಯಿಸುತ್ತಿದ್ದರು. ತಂಗಿಯ ಬಗ್ಗೆ ಅಪಾರ ಪ್ರೀತಿ , ಯಾವಾಗಲೂ ಬೆನ್ನ ಮೇಲೆ ಕೂಸು ಮರಿ ಮಾಡಿಸುತ್ತಿದ್ದ, ತಾಯಿ ಎಂದರೆ ಅಪಾರ ಪ್ರೀತಿ. ತಂದೆ ಬಗ್ಗೆ ಗೌರವ, ಬಾಲ್ಯದಿಂದಲೂ ಮುತ್ತುರಾಜ ಒಳ್ಳೆಯ ಸಂಸ್ಕೃತಿಯನ್ನು ಬೇಡಿಕೊಂಡು ಬಂದ ಕಣ್ಮಣಿ. ಕೋಲಾರ, ಮಂಡ್ಯ, ಚೆನ್ನಪಟ್ಟಣ, ಚಿಂತಾಮಣಿ, ತುಮಕೂರು, ಸಿದ್ಧಗಂಗೆ, ಹೀಗೆ ನೂರಾರು ನಾಟಕ ಪ್ರದರ್ಶನಗಳನ್ನು ನೀಡುತ್ತಾ, ರಾಮ, ಕೃಷ್ಣ, ಅರ್ಜುನ, ಬಸವೇಶ್ವರ ಮುಂತಾದ ಪಾತ್ರಗಳನ್ನು ಲೀಲಾಜಾಲವಾಗಿ ಮಾಡುತ್ತಾ, ಹಾಡುತ್ತಾ ಮುತ್ತರಾಜ ನಾಟಕ ರಂಗದ ಬಹು ಬೇಡಿಕೆಯ ನಟನಾಗಿ ಹೋದ. ಹಲವಾರು ಬಾರಿ ತಂದೆ ಮಗ ಒಟ್ಟಾಗಿ ಅಭಿನಯಿಸಿದದು ಉಂಟು. ಹಿರಣ್ಯ ಕಶಪು ಪಾತ್ರದಲ್ಲಿ ತಂದೆ ಪ್ರಹ್ಲಾದ ಪಾತ್ರದಲ್ಲಿ ಮಗ. ತಂದೆ ಭೀಮನಾದರೆ ಮಗ ಅರ್ಜುನ. ಹೀಗೆ ರಾಮಾಯಣ ಮಹಾಭಾರತ ಕಥೆಗಳೆಲ್ಲವೂ ಬಾಲ್ಯದಲ್ಲಿಯೇ ಮುತ್ತಣ್ಣನಿಗೆ ಬಾಯಿಪಾಠವಾಗಿದ್ದವು.







ಹಳ್ಳಿಯ ವಾತಾವರಣದಲ್ಲಿ ಬೆಳೆದ ಮುತ್ತುರಾಜ ಹಳ್ಳಿಗರು ಮಾತನಾಡುತ್ತಿದ್ದ ಗ್ರಾಮೀಣ ಭಾಷೆಯನ್ನು ಚೆನ್ನಾಗಿ ಬಲ್ಲವನಾಗಿದ್ದ. ಗಾದೆ, ನಾಣ್ನುಡಿ, ಪ್ರಾಸಪದ, ಒಗಟು, ಎಲ್ಲವೂ ಅವನ ನಾಲಿಗೆ ಮೇಲೆ ನಲಿದಾಡುತ್ತಿದ್ದವು. ಇದೆಲ್ಲಕ್ಕಿಂತ ಹೆಚ್ಚಾಗಿ ಜನಪದರು ಬಳಸುತ್ತಿದ್ದ ಜನಪದ ಸಾಹಿತ್ಯ ಕಂದ ತ್ರಿಪದಿಗಳು.

ನಾಟಕಗಳಲ್ಲಿ ಹೇರಳವಾಗಿ ಬಂದು ಮೇಳೈಸುತ್ತಿದ್ದವು. ಗರತಿಯ ಹಾಡು, ಶಿಶುಪದ್ಯ, ಬೀಸು ಪದ್ಯ, ಮೊಹರಂ ಗೀತೆ ಇವೆಲ್ಲವೂ ಸಾಮಾಜಿಕ ನಾಟಕಗಳಲ್ಲಿ ಬರುತ್ತಿದ್ದ ಕಾರಣ ಜಾನಪದ ಸೊಗಡಿನಿಂದ ಅವನ ಭಾವ ಕಂಗೊಳಿಸುತ್ತಿತ್ತು. ಬಬ್ರುವಾಹನ ಚಿತ್ರದಲ್ಲಿ ಕ್ಲೈಮಾಕ್ಸ್‌ನಲ್ಲಿ ಬರುವ ಸೀಸ ಪದ್ಯವನ್ನು ಅಷ್ಟು ನಿರರ್ಗಳವಾಗಿ ಮಾತನಾಡಲು ಹಾಡಲು, ಇಂಥಹ ರಂಗಭೂಮಿ ಕಲಾವಿದನಿಂದಲೇ ಸಾಧ್ಯವಾದದ್ದು. ಕವಿರತ್ನ ಕಾಳಿದಾಸ ಸಿನೆಮಾದಲ್ಲಿ ಕಾಳಿಮಾತೆಯ ಮಹಿಮ ಸ್ವರೂಪವನ್ನು ಹಾಡಿ ಹೊಗಳುವಾಗ ಸುಂದರ ಸ್ಪಷ್ಟ ಸಂಸ್ಕೃತ ಈ ಹಳ್ಳಿ ಹುಡುಗ ಹೇಗೆ ಕಲಿತ ಎಂದು ವಿದ್ವಾಂಸರು ಕೂಡ ಮೂಗಿನ ಮೇಲೆ ಬೆರಳಾಡುತ್ತಿದ್ದರು. ಇದಕ್ಕೆಲ್ಲಾ ಪ್ರೇರಣೆ ರಂಗ ಗೀತೆಗಳು, ರಂಗಭೂಮಿ, ಮುತ್ತಣ್ಣನನ್ನು ತಿದ್ದಿ ತೀಡಿ ಬೆಳೆಸಿತ್ತು. ಮೈಸೂರು ವಿಶ್ವವಿದ್ಯಾಲಯ, ಗೌರವ ಡಾಕ್ಟರೇಟು ನೀಡಿ ಗೌರವಿಸುವುದು ಎಂದರೆ ಸಾಮಾನ್ಯ ವಿಷಯವೇ.



ಮುಂದೆ ಗುಬ್ಬಿ ಕಂಪೆನಿಯಿಂದ ಸಾಹಿತ್ಯ ಸಾಮ್ರಾಜ್ಯ, ನಾಟಕ ಮಂಡಳಿ ಸೇರಿದ ಮುತ್ತಣ್ಣ ಸುಬ್ಬಯ್ಯನಾಯ್ಡು ಅವರ ಸಂಪರ್ಕಕ್ಕೆ ಬರುತ್ತಾನೆ. ಅವನ ಪ್ರತಿಭೆಗೆ ತಕ್ಕ ಪಾತ್ರಗಳು ಇಲ್ಲಿ ಸಿಗುತ್ತವೆ. "ಹೆಚ್.ಆರ್. ಕೃಷ್ಣಶಾಸ್ತ್ರಿ, ರಾಧಾಕೃಷ್ಣ ಅಯ್ಯರ್, ಪ್ರಭುಸ್ವಾಮಿಗಳು ರಂಗ ಸಂಗೀತದ ಪರಿಚಯ ನೀಡಿದರೆ ಮಾಧವರಾಯರು ಪೌರಾಣಿಕ ನಾಟಕಗಳ ರೀತಿ ರಿವಾಜು ತಿಳಿಸಿಕೊಡುತ್ತಿದೆ."[೪] ಕುರುಕ್ಷೇತ್ರದ ಅರ್ಜುನ, ವಸಂತ ಸೇನೆಯ ಶಕಾರ, ಎಚ್ಚಮ ನಾಯಕ, ಸಂಪೂರ್ಣ ರಾಮಾಯಣ, ರಾಮಾಯಣದ ರಾಮ, ಬಸವಣ್ಣ, ನಾರದ, ಕಣ್ಣಪ್ಪ, ಹೀಗೆ ಹಲವು ಪಾತ್ರಗಳು, ಇವನನ್ನು ಹುಡುಕಿಕೊಂಡು ಬರುತ್ತವೆ.

ಮಗನ ನಾಟಕದ ಈ ಗೆಲವು ನೋಡಿಕೊಂಡು ಸಂತಸ ಪಡಲು ತಂದೆ ಹೆಚ್ಚು ದಿನ ಈ ಭೂಮಿ ಮೇಲೆ ಬದುಕಿರಲಿಲ್ಲ. ಆಸ್ತಮಾ, ರಕ್ತದೊತ್ತಡ, ಡಯಾಬಿಟೀಸ್ ರೋಗದಿಂದ ನರಳಿ ಪುಟ್ಟಸ್ವಾಮಯ್ಯನವರು ಮೈಸೂರಿನ ಆಸ್ಪತ್ರೆಯಲ್ಲಿ ೧೯೫೧ ಸೆಪ್ಟೆಂಬರ್ ೯ ರಂದು ಅಸುನೀಗುತ್ತಾರೆ. ಇಪ್ಪತ್ತನೆಯ ವಯಸ್ಸಿನಲ್ಲಿಯೇ ತಂದೆ ಕೈಲಿ ಹೊಡೆಸಿಕೊಂಡ, ತಂದೆ ಕಂಡರೆ ಹೆದರಿ ನಡುಗುವ ಮುತ್ತುರಾಜ ತನ್ನ ತಂದೆಯಿಂದ ಕಲಿತದ್ದು ಬಹಳಷ್ಟು ಇದೆ. ಕಡು ಬಡತನದಲ್ಲಿಯೇ ಹೃದಯ ಶ್ರೀಮಂತಿಕೆ ಇದ್ದ ತಂದೆಯ ವಾತ್ಸಲ್ಯವನ್ನು ಇವರು ಚೆನ್ನಾಗಿ ಬಲ್ಲರು. ತಂದೆಯ ಆಸೆ ಮಗ ದೊಡ್ಡ ಕಲಾವಿದನಾಗಬೇಕು, ಸಿನೆಮಾದಲ್ಲಿ ಒಳ್ಳೆ ಪಾರ್ಟು ಮಾಡಬೇಕು ಎಂದು ಆದರೆ ತಂದೆ ಬದುಕಿದ್ದಾಗ ಈ ಅಸೆ ನೆರವೇರುವುದಿಲ್ಲ. ಮಗನಿಗೆ ಆಶೀರ್ವಾದ ಮಾಡಿ ಇಹಲೋಕ ತ್ಯಜಿಸಿದ ತಂದೆಯನ್ನು ನೆನೆದು ಡಾ. ರಾಜಣ್ಣನವರು ಸದಾಕಾಲ ಕಣ್ಣೀರಿಡುತ್ತಿದ್ದರು. ತಂದೆಯ ತಿಥಿಯ ದಿನದಂದು ಹಾರ್ಮೋನಿಯಂ ನುಡಿಸುತ್ತ ರಂಗ ಗೀತೆಗಳನ್ನು ಹಾಡುತ್ತಾ ತಂದೆಗೆ ನುಡಿನಮನ ಸಲ್ಲಿಸುತ್ತಿದ್ದರು. ಆಗ ಅವರ ಕಣ್ಣುಗಳಲ್ಲಿ ಅಶ್ರುತರ್ಪಣ ವಾಗುತ್ತಿತ್ತು.



ತಂದೆ ತೀರಿದಾಗ ಮುತ್ತಣ್ಣನ ಬಳಿ ಇದ್ದದ್ದು ಕೇವಲ ಕಪ್ಪು ಹೆಂಚಿನ ಮುರುಕಲು ಮನೆ, ಎರಡು ಎಕರೆ ಭೂಮಿ, ಆಲದ ಮರ, ಇವಿಷ್ಟೆ. ಇದರ ಜೊತೆ ಐದು ಜನರನ್ನು ಸಾಕುವ ಜವಾಬ್ದಾರಿ. ನಾಟಕ ಬಿಟ್ಟರೆ ಮತ್ತೇನೂ ಗೊತ್ತಿಲ್ಲ. ತನ್ನ ಬಳಿ ಇರುವ ಕಲೆಯೇ ತನ್ನ ಆಸ್ತಿ ಎಂದು ತಿಳಿದಿದ್ದ. ಇವರು ಈ ಆಸ್ತಿಯನ್ನೇ ನಂಬಿ ಧೈರ್ಯದಿಂದ ಜೀವನ ನಡೆಸಲು ಆರಂಭಿಸುತ್ತಾರೆ. ಬಹಳ ಕಷ್ಟದ ದಿನಗಳು ನಾಟಕದಿಂದ ಬರುವ ಹಣ ಏನಕ್ಕೂ ಸಾಲದು. ಒಮ್ಮೊಮ್ಮೆ ತುತ್ತು ಕೂಳಿಗೂ ಬರ ಬಂದಂತ ಸಂದರ್ಭ ಉಂಟಾಗುತ್ತಿತ್ತು. ಈ ಎಲ್ಲ ಕಷ್ಟಗಳ ನಡುವೆ ತಂದೆ ಬಿಟ್ಟು ಹೋದ ಆಸ್ತಿ ಶರೀರ, ಶಾರೀರ ಇವೆರೆಡನ್ನೇ ನೆಚ್ಚಿಕೊಂಡು ನಾಟಕಗಳಲ್ಲಿ ಅಭಿನಯಿಸುತ್ತ ಕನಸಿನೊಂದಿಗೆ ಮುತ್ತಣ್ಣನ ಜೀವನ ಸಾಗುತ್ತಿತ್ತು.

### ೩.೩ ವಿವಾಹ :



ಪ್ರತಿಯೊಬ್ಬರ ಜೀವನದಲ್ಲೂ ಒಂದಲ್ಲ ಒಂದು ತಿರುವು ಇದ್ದೇ ಇರುತ್ತವೆ. ಮದುವೆ ಎನ್ನುವ ಮೂರು ಅಕ್ಷರ ನಮ್ಮ ಜೀವನವನ್ನೇ ಬದಲಾಯಿಸುತ್ತದೆ. ಮುತ್ತಣ್ಣ ಚಿಕ್ಕವನಿದ್ದಾಗಲೇ ಅಪ್ಪಾಜಿಗೌಡರ ಮಗಳು ಪಾರ್ವತಿಯೊಂದಿಗೆ ಮುತ್ತುರಾಜನ ವಿವಾಹ ಎಂದು ನಿಶ್ಚಯವಾಗಿತ್ತು. ಪಾರ್ವತಿ ಹುಟ್ಟಿದಾಗಲೇ ಮಗುವಿನ ತೊಟ್ಟಿಲಲ್ಲಿಯೇ ನಿಶ್ಚಿತಾರ್ಥದ ಮಾತುಕತೆ ನಡೆದಿತ್ತು. ಆ ಕಾಲಕ್ಕೆ ಒಂದು ರೂಪಾಯಿ ನೀಡಿ ಸಂಬಂಧವನ್ನು ಗಟ್ಟಿ ಮಾಡಿಕೊಂಡಿದ್ದರು. ಪುಟ್ಟಸ್ವಾಮಯ್ಯನವರು ಅಪ್ಪಾಜಿಗೌಡರ ಹತ್ತಿರದ ಸಂಬಂಧ ತಂದೆ ಬದುಕಿದ್ದಾಗಲೇ ಮುತ್ತುರಾಜನ ಮದುವೆ ಮಾಡಬೇಕೆಂದು ಹಂಬಲಿಸಿದ್ದು ಉಂಟು. ಆದರೆ ನೆರವೇರಲಿಲ್ಲ. ತಂದೆಯ ನಿಧನದ ನಂತರ ಮಗನ ಮದುವೆ ಮಾಡಿ ಜವಾಬ್ದಾರಿ ಹೊರಿಸಬೇಕೆಂಬ ಇಚ್ಚೆ ತಾಯಿ ಲಕ್ಷ್ಮಮ್ಮನವರಲ್ಲಿ ಹೆಚ್ಚಾಯಿತು.

ಹಾಸನದ ಕ್ಯಾಂಪ್ ಒಂದರಲ್ಲಿ ಗೊರೂರಿನಿಂದ ಹೆಣ್ಣುಕೊಡುವ ಸಂಬಂಧವೊಂದು ಕೂಡಿ ಬಂದಿತ್ತು. ಆದರೆ ಮುತ್ತುರಾಜ ಏನನ್ನು ಹೇಳದೆ ಎಲ್ಲಾ ನಿರ್ಧಾರವನ್ನು ತಾಯಿಯ ಹೆಗಲಿಗೆ ಹಾಕುತ್ತಾನೆ. ಪುಟ್ಟಸ್ವಾಮಯ್ಯನವರ ತಾಯಿಯ ಅಣ್ಣ ಚೆನ್ನೇಗೌಡರು, ಅವರ ಮಕ್ಕಳು ಅಪ್ಪಾಜಿಗೌಡರು ಮತ್ತು ಸಣ್ಣೇಗೌಡರು. ಅಪ್ಪಾಜಿಗೌಡರ ಮಗಳು ಪಾರ್ವತಿ ನೋಡಲು ತುಸು ಕಪ್ಪಾಗಿದ್ದರೂ ಗೌರವಸ್ಥ ಕುಟುಂಬದ ಹುಡುಗಿ, ಆಗ ಒಂಭತ್ತನೇ ತರಗತಿ ಶಾಲೆ ಕಲಿಯುತ್ತಿದ್ದಳು. ವಿದ್ಯಾವಂತೆ, ಮುತ್ತುರಾಜನಿಗಿಂತಲೂ ಹೆಚ್ಚು ಓದಿದವಳು ಅವಳೊಂದಿಗೆ ಮುತ್ತುರಾಜನ ವಿವಾಹ ಎಂದು ತಾಯಿ ಲಕ್ಷ್ಮಮ್ಮನವರು ನಿರ್ಧರಿಸುತ್ತಾರೆ.

ಮುತ್ತಣ್ಣ ಚಿಕ್ಕವನಿದ್ದಾಗ ಅಪ್ಪಾಜಿಗೌಡರ ಮನೆಯಲ್ಲಿ ಸಂಗೀತ ಕಲಿಯಲು ನಂಜನಗೂಡಿನಲ್ಲಿ ತಂಗಿದ್ದ. ಅಲ್ಲೇ ಮಾವನ ಮಗಳು ಪಾರ್ವತಿಯನ್ನು ಸಹನೋಡಿದ್ದ.

"ಸಂಗೀತಾಭ್ಯಾಸಕ್ಕೆಂದು ನಂಜನಗೂಡಿಗೆ ಹೋಗಿದ್ದಾಗ ಮಾವನ ಮನೆಯಲ್ಲಿ ಪಾರ್ವತಿ ಕೈಗೂಸಾಗಿ ತೊಟ್ಟಿಲಲ್ಲಿ ಮಲಗಿದ್ದಳು".[೫] ತೂಗುವ ನೆಪದಲ್ಲಿ ಚಿವುಟ ಅಳಿಸುತ್ತಿದ್ದ. ಮಾವ ಒಮ್ಮೆ ಅಪ್ಪಾಜಿಯ ಆಜ್ಞೆಯಂತೆ ಯಡಿಯೂರಿನಲ್ಲಿದ್ದ ಪಾರ್ವತಿಯನ್ನು ಕರೆತರಬೇಕಾಗಿತ್ತು. ಆಗೆಲ್ಲಾ ಸೈಕಲ್ ಶೋಕಿ, ಸೈಕಲ್ ಏರಿ ಯಡಿಯೂರಿಗೆ ಸಂಬಂಧಿಕರ ಮನೆಗೆ ಹೋಗಿದ್ದ. ಪುಟ್ಟ ಪಾರ್ವತಿ ಮೈ ಮೇಲ ಮಣ್ಣು ಸುರಿದುಕೊಂಡು ಆಟ ಆಡುತ್ತಿದ್ದಳು. ಮಾವ ಕರೆದುಕೊಂಡು ಹೋಗಲು ಬಂದಿದ್ದಾನೆ. ಸರಿ ಸ್ನಾನ ಮಾಡಿಸಿ ಬಟ್ಟೆ ಬದಲಿಸಿ ಪಾರ್ವತಿಯನ್ನು ಮುತ್ತುರಾಜನ ಜೊತೆ ಕಳುಹಿಸಿಕೊಟ್ಟರು. ಡಬ್ಬಲ್ ರೈಡ್ ಮಾಡುತ್ತಾ ಪಾರ್ವತಿ ಜೊತೆ ಹೊರಟ ಮುತ್ತಣ್ಣ ದಾರಿಯಲ್ಲಿ ಪಾರ್ವತಿ ಕಿವಿಗೆ ಹಸಿರು ಕಲ್ಲಿನ ಲೋಲಾಕು ಕೊಡಿಸಿದ್ದ. ಮನೆ ತಲುಪಿದ ನಂತರ ಪುಟ್ಟಸ್ವಾಮಯ್ಯನವರು ಪಾರ್ವತಿಯನ್ನು ತೊಡೆಯ ಮೇಲೆ ಕೂರಿಸಿಕೊಂಡು ಪ್ರೀತಿಯಿಂದ ಮಾತನಾಡಿಸುತ್ತಾರೆ. ಲೋಲಾಕ್ ಎಷ್ಟು ಚೆನ್ನಾಗಿದೆ, ಯಾರು ಕೊಡಿಸಿದ್ದು ಎಂದಾಗ ಪಾರ್ವತಿ ಮುತ್ರಾಜು ಮಾವ" ಎಂದು ನಿಜವನ್ನೇ ನುಡಿಯುತ್ತಾಳೆ. ಮುಂದೆ ಮುತ್ರಾಜುವಿಗೆ ಇಪ್ಪತ್ತು ವಯಸ್ಸು ತುಂಬಿದಾಗ ಪುಟ್ಟಸ್ವಾಮಯ್ಯನವರು ನಂಜನಗೂಡಿಗೆ ಬಂದಿದ್ದರು. ಸಂಬಂಧಿಗಳಲ್ಲಿ ಮುತ್ರಾಜುವಿನ ಮದುವೆ ಬೇಗ ಮಾಡಿ ಎಂದು ಕೇಳಿಕೊಂಡಿದ್ದರು. ಕಾರಣಾಂತರಗಳಿಂದ ತಡವಾಯಿತು. ಈ ಮಧ್ಯೆ ಆರೇ ತಿಂಗಳಿನಲ್ಲಿ ಖಾಯಿಲೆ ಬಿದ್ದು ಪುಟ್ಟಸ್ವಾಮಯ್ಯನವರು ತೀರಿಕೊಳ್ಳುತ್ತಾರೆ. ಮಗನ ಮದುವೆಯನ್ನು ಕಣ್ತುಂಬ ನೋಡುವ ಸೌಭಾಗ್ಯ ಅವರಿಗಿರಲಿಲ್ಲ.


ವಿವಾಹ ಮಹೋತ್ಸವ ಆಹ್ವಾನ ಲಗ್ನಪತ್ರಿಕಾ

ಸಾಲಿಗ್ರಾಮದ ಸಂಗೀತ ಮಾಸ್ಟರ್ ಅಪ್ಪಾಜಿಗೌಡ ಮತ್ತು [illegible] ನಾಗೇಗೌಡರು

[illegible] ಗುರು ವಾರ ತಾ|| 25-6-53 [illegible] 10-30 [illegible] 11-15 [illegible]

ಚಿ|| ರಾ|| ಮುತ್ತುರಾಜು

[illegible] : ಅಪ್ಪಾಜಿಗೌಡ ಮತ್ತು ನಾಗೇಗೌಡ

೧೯೫೩ ಜೂನ್ ೨೫ ರಂದು ಮುತ್ತುರಾಜು ಮತ್ತು ಪಾರ್ವತಿಯ ವಿವಾಹ ನಂಜನಗೂಡಿನ ರಾಣಪ್ಪ ಛತ್ರದಲ್ಲಿ ನಡೆಯಿತು. ಮದುವೆ ಖರ್ಚಿಗೂ ಹಣ ಇಲ್ಲದ ಪರಿಸ್ಥಿತಿ. ತಂದೆ ತೀರಿ ಹೋದ ದುಃಖ, ಅವರಿಲ್ಲದೆ ಮದುವೆ ಅಷ್ಟು ಸಂತಸ ತರಲಿಲ್ಲ ಮುತ್ತುರಾಜನಿಗೆ ಆದರೆ ಅವರ ಇಚ್ಛೆಯನ್ನು ನೆರವೇರಿಸಬೇಕಲ್ಲವೇ? ಅಕ್ಕ ಮಹಾದೇವಿ ನಾಟಕ ತರಬೇತಿ ನೀಡಿ ಕೈಗೆ ಮುನ್ನೂರು ರೂಪಾಯಿ ಪಡೆದ ಮುತ್ರಾಜು ಸುಬ್ಬಯ್ಯ ನಾಯ್ಡುರವರಿಂದ ಆಶೀರ್ವಾದ ಪಡೆದು ಮದುವೆಗೆ ಸಿದ್ಧನಾಗುತ್ತಾನೆ. ಮದುವೆ ಹಿಂದಿನ ದಿನವೂ ನಾಟಕದ ಪ್ರದರ್ಶನದಲ್ಲಿ ತೊಡಗಿಕೊಂಡಿದ್ದವರು. ಮದುವೆಗೆ ಬಂದ ಬಂಧು ಬಳಗದವರಿಂದ ಎಂಟಾಣೆ, ನಾಲ್ಕಾಣೆ, ಮುಯ್ಯಿ ಹಣವನ್ನು ಸಂಗ್ರಹಿಸಿದಾಗ ವರನಿಗೆ ನಲವತ್ತು, ವಧುವಿಗೆ ಮೂವತ್ತು ರೂಪಾಯಿ ಸಂಗ್ರಹವಾಗಿತ್ತು. ಮದುವೆ ಮುಗಿಸಿ ಹೊರಡುವ ಬಂಧುಗಳಿಗೆ ಬಸ್ ಚಾರ್ಜಿಗೂ ಸಹ ಹಣವಿಲ್ಲವೆಂದು ತಿಳಿದು ಮುಯ್ಯಿ ಬಂದ ಹಣವನ್ನೇ ಮುತ್ರಾಜು ಪುನಃ ಬಂಧುಗಳಿಗೆ ನೀಡಿ ಕಳುಹಿಸುತ್ತಾರೆ. ಮದುವೆ ಮುಗಿದ

ಎರಡೇ ದಿನಕ್ಕೆ ಮತ್ತೆ ಹೊಸಪೇಟೆಯ ನಾಟಕದ ಕ್ಯಾಂಪಿಗೆ ಮರಳುತ್ತಾರೆ.



ಡಾ. ರಾಜ್‌ಕುಮಾರ್‌ರವರ ಜೀವನದಲ್ಲಿ ಅತಿ ಮುಖ್ಯ ಘಟನೆ ಎಂಬುದು ಅವರು ವಿವಾಹವಾದ ನಂತರವೇ ಘಟಿಸಿತು ಎನ್ನುವುದು ಈಗ ಇತಿಹಾಸ. ಪಾರ್ವತಿ ಎನ್ನುವ ಸ್ತ್ರೀರತ್ನ ರಾಜಣ್ಣನವರ ಜೀವನದಲ್ಲಿ ಬರದೇ ಹೋಗಿದ್ದರೆ ಬಹುಷಃ ರಾಜಣ್ಣನವರ ಬದುಕು ಬದಲಾಗುತ್ತಿತ್ತೋ ಏನೋ? ಆ ಕಾಲಕ್ಕೆ ಹತ್ತನೇ ತರಗತಿಯವರೆಗೂ ಓದಿದ ಕನ್ಯೆ ಅತ್ಯಂತ ಕಡು ಬಡತನದ ಕುಟುಂಬದಿಂದ ಬಂದಿದ್ದರೂ ಮದುವೆಯ ನಂತರ ಗಂಡನ ಮನೆಯನ್ನು, ಗಂಡ ಮನೆ ಮಕ್ಕಳು ಸಂಸಾರವನ್ನು ಎಷ್ಟು ಚೆನ್ನಾಗಿ ಜೋಪಾನ ಮಾಡಿದಳು



ಎನ್ನುವುದಕ್ಕೆ ಅವರು ಕಟ್ಟಿ ಬೆಳೆಸಿದ ಚಿತ್ರ ನಿರ್ಮಾಣ ಸಂಸ್ಥೆ ನಮ್ಮ ಎದುರಿಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಪಾರ್ವತಿಗೆ ಮದುವೆ ಏನೂ ಎಂದು ಗೊತ್ತಿಲ್ಲದ ವಯಸ್ಸಿನಲ್ಲಿಯೇ ಅವರ ಮದುವೆ ಆಗಿ ಹೋಯಿತು. ಅವರಿಗೆ ತಮ್ಮ ಪತಿಯ ಬಗ್ಗೆ ನೆನಪಿರುವುದನ್ನು ಅವರೇ ಸ್ವತಃ ಹೇಳಿಕೊಂಡಿದ್ದಾರೆ. ಇವರ ಮನೆಯಲ್ಲಿಯೇ ರಾಜಣ್ಣನವರು ಸಂಗೀತ ಪಾಠ ಕಲಿಯಲು ಬಂದಿದ್ದರು. ಇವರನ್ನು ತೊಟ್ಟಿಲಿನ ಮಗುವಾಗಿನಿಂದಲೂ ಬಲ್ಲವರು, ಚಿಕ್ಕವರಿದ್ದಾಗ ಒಮ್ಮೆ ಹಸಿರು ಕಲ್ಲಿನ ಲೋಲಾಕ್ ಕೊಡಿಸಿದ್ದನ್ನು ಪಾರ್ವತಮ್ಮ ಯಾವಾಗಲೂ ನೆನಪಿಸಿಕೊಳ್ಳುತ್ತಾರೆ. ಅದಾದ ಮೇಲೆ ಹಲವಾರು ವರ್ಷಗಳ ನಂತರ ರಾಜಣ್ಣನವರು ಪಾರ್ವತಮ್ಮನವರಿಗೆ ಹಲವು ಒಡವೆ ಕೊಡಿಸಿದ್ದಾರೆ. "ವಜ್ರದ ಓಲೆಯನ್ನು ಕೊಡಿಸಿದರು, ಆಗೆಲ್ಲ ನಾವಿಬ್ಬರೂ ಆ ಗಾಜಿನ ಓಲೆಯನ್ನು ನೆನಪಿಸಿಕೊಂಡಿದ್ದೇವೆ"[೬] ಎಂದು ಪಾರ್ವತಮ್ಮ ಹೇಳಿದ್ದಾರೆ. ರಾಜಣ್ಣನವರನ್ನು ಕುರಿತಂತೆ ಸ್ವತಃ ಹೀಗೆ ಹೇಳಿದ್ದಾರೆ. ನನ್ನ ಗುರು ಮತ್ತು ಗುರುತು ವ್ಯಕ್ತಿತ್ವದ ಹಿಂದಿರುವ ವ್ಯಕ್ತಿ ಪುಟ ೧೦೧ "ರಾಜ್‌ಕುಮಾರ್‌ರವರ ಜೊತೆ ನನ್ನ ಜೀವನ ಪೂರ್ವ ನಿರ್ಧಾರವಾಗಿತ್ತು. ನಾನು ಹುಟ್ಟಿದ್ದು ೧೯೩೯ ರಲ್ಲಿ. ನಾನಿನ್ನು ಒಂದು ವರ್ಷದ ಮಗುವಾಗಿ ತೊಟ್ಟಿಲಲ್ಲಿದ್ದಾಗ ನನ್ನ ತಂದೆಯ ಗೆಳೆಯರಾಗಿದ್ದ ಸಿಂಗನಲ್ಲೂರು ಪುಟ್ಟಸ್ವಾಮಯ್ಯನವರು ಮನೆಗೆ ಬಂದು ನನ್ನನ್ನು ನೋಡಿದರು. ನನ್ನ ಕೈಯಲ್ಲಿ ಒಂದು ರೂಪಾಯಿಯನ್ನು ತುರುಕಿ ನನ್ನ ತಂದೆಗೆ ನನ್ನನ್ನು ಅವರ ಸೊಸೆ ಮಾಡಿಕೊಳ್ಳುವುದಾಗಿ ಹೇಳಿದರು. ಸುಮಾರು ೧೨ ವರ್ಷಗಳ ನಂತರ ನನ್ನ ಮದುವೆಯನ್ನು ತಮ್ಮ ಗೆಳೆಯರ ಆಸೆಯಂತೆ ಅವರ ಮಗ ಮುತ್ತುರಾಜನ ಮುಂದೆ ರಾಜ್‌ಕುಮಾರ್ ಆಗಲಿದ್ದವರ ಜೊತೆ ನೆರವೇರಿಸಿದರು".

೧೯೫೩ ರಲ್ಲಿ ಮದುವೆ ಆಗಿ ಮನೆ ಸೊಸೆಯಾಗಿ ಬಂದ ಪಾರ್ವತಮ್ಮನವರು ಸಾಲಿಗ್ರಾಮದ ಮುನ್ಸಿಪಾಲ್ ಶಾಲೆಯಲ್ಲಿ ಒಂಭತ್ತನೇ ತರಗತಿ ಓದುತ್ತಾ ಇದ್ದರು. ಮುಂದುವರೆದು ನಂತರ ಇದನ್ನು ಬಿಟ್ಟು ಸಂಪೂರ್ಣವಾಗಿ ಮನೆ ಸಂಸಾರದತ್ತ ಗಮನ ಹರಿಸಿದವಳು. ಮದುವೆಯಾದ ಹೊಸತರಲ್ಲಿ ಅವರಿಗೆ ಅಡಿಗೆ ಬರುತ್ತಿರಲಿಲ್ಲ. ಅಂದರೆ ಅತ್ತೆ ಲಕ್ಷ್ಮಮ್ಮನವರು ಸೊಸೆಯನ್ನು ಬಹಳ ಪ್ರೀತಿಯಿಂದ ತಿದ್ದಿ ತೀಡಿ ಅಡಿಗೆ ಕಲಿಸಿ, ಒಳ್ಳೆಯ ಗೃಹಿಣಿಯನ್ನಾಗಿ ಪರಿವರ್ತಿಸಿದರು. ಮದುವೆಯಾದಾಗ ಕೇವಲ ೧೫ ವರ್ಷ. ಯಜಮಾನರಿಗೆ ೨೪ ವರ್ಷ, ವಯಸ್ಸಿನ ಅಂತರ ಇದ್ದರೂ ಅವರಿಬ್ಬರ ನಡುವೆ ಇದ್ದ ಅನ್ಯೋನ್ಯತೆ ಪ್ರಪಂಚ ಮೆಚ್ಚುವಂಥದ್ದು. ಸಿನೆಮಾಗಾಗಿ ಕರ್ನಾಟಕ ತೊರೆದು ತಮಿಳುನಾಡಿನಲ್ಲಿ ಹೋಗಿ ಹಲವು ವರ್ಷ ತಂಗಿದ್ದರು. ಅಲ್ಲಿನ ಭಾಷೆ ಕಲಿತರು. ಮನೆಗೆ ಬಂದು ಹೋಗಿ ಮಾಡುವ ಜನರ ಸಂಖ್ಯೆ ಹೆಚ್ಚಾಯಿತು. ರಾಜಣ್ಣನವರ ಅಭಿನಯ ಕುರಿತು ಪತ್ರಗಳು ಬರತೊಡಗಿದವು. ಪಾರ್ವತಮ್ಮನವರು ಅತಿ ಹೆಚ್ಚಿನ ಕಾದಂಬರಿಗಳನ್ನು ಓದಿದ ನಿರ್ಮಾಪಕಿ ಎಂಬ ಕೀರ್ತಿ ಹೊಂದಿದ್ದಾರೆ. ಸಿನೆಮಾ ನಿರ್ಮಾಣದಲ್ಲಿ ಅವರು ವಹಿಸಿದ ಆಸಕ್ತಿ ಅತಿ ದೊಡ್ಡದು. ರಂಗಭೂಮಿ ಬಗ್ಗೆ ತಿಳಿದುಕೊಂಡರು. ಗಂಡನ ಪ್ರತಿಯೊಂದು ಬೇಕು ಬೇಡಗಳ ಬಗ್ಗೆ ಅಪಾರ ಕಾಳಜಿ ವಹಿಸಿದರು. ರಾಜಣ್ಣನವರಿಗೆ ಸಮಯಕ್ಕೆ ಸರಿಯಾಗಿ ಊಟ, ತಿಂಡಿ, ಬಟ್ಟೆ ಬರೆ, ಮಲಗಲು ಹಾಸಿಗೆ ಸಕಲವನ್ನು ಪಾರ್ವತಮ್ಮ ನೋಡಿಕೊಂಡರು. ಅವರ ಆರೈಕೆ ಇಲ್ಲದಿದ್ದರೆ ರಾಜಣ್ಣನವರಿಗೆ ಇಷ್ಟು ಸಾಧನೆ ಮಾಡಲು ಸಾಧ್ಯವಾಗುತ್ತಿತ್ತೋ ಇಲ್ಲವೋ? ನಿರ್ಮಾಪಕಿಯಾಗಿ, ಹಂಚಿಕೆದಾರರಾಗಿ ಚಿತ್ರ ನಿರ್ಮಾಣದಂತಹ ಬೃಹತ್ ಕೆಲಸಕ್ಕೆ ಕೈ ಹಾಕಿ ಅದರಲ್ಲಿ ಸೈ ಎನಿಸಿಕೊಂಡವರು. ಅವರೇ ಹೇಳುವಂತೆ "ನಾನು ನಿಜಕ್ಕೂ ಪೂಜೆ ಮಾಡಿರಬೇಕು. ರಾಜ್‌ಕುಮಾರ್‌ರ ಹಿಂದೆ ನಾನು ಇರುವುದರಿಂದಲೇ ಅವರು ಅನೇಕ ಸಾಧನೆಗಳನ್ನು ಮಾಡಿದರು ಎಂದು ಜನ ಹೇಳುತ್ತಿರುತ್ತಾರೆ. ಆದರೆ ನಿಜ ಅವರ ತದ್ವಿರುದ್ಧ ರಾಜ್‌ಕುಮಾರ್‌ರವರಿಂದಲೇ ನಾನು ಈಗಿರುವ ಹಾಗೆ ಇರುವುದು, ನನ್ನ ಹಿಂದೆ ಇದ್ದು, ನನ್ನ ಹಾದಿಯ ಹೆಜ್ಜೆ ಹೆಜ್ಜೆಗೂ ನಿರಂತರವಾಗಿ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಮೊಟ್ಟ ಮೊದಲಿಗೆ ನಾನು ಒಬ್ಬಳೇ ಸಂಸಾರವನ್ನು ನಿರ್ವಹಿಸಬಲ್ಲೆ ಎಂಬ ನಂಬಿಕೆ ಅವರಲ್ಲಿ ಇತ್ತು. ಅವರೇ ನನ್ನನ್ನು ಒತ್ತಾಯಿಸಿ ನಾನು ಕನಸಲ್ಲೂ ಕಾಣದ ಹಾದಿಯಲ್ಲಿ ನಡೆಸಿದರು. ಅವರ ಉದ್ಯೋಗದ



ಜೀವನವನ್ನು ಸುಧಾರಿಸಲು ಹಾಗೂ ನಮ್ಮದೇ ಚಿತ್ರ ನಿರ್ಮಾಣ ಹಾಗೂ ಬಿಡುಗಡೆ ಕೆಲಸವನ್ನು ಮಾಡಲು ಹಂಚಿಕೆ ಕಚೇರಿಯ ಕಾರ್ಯ ನಿರ್ವಹಣೆಯನ್ನು ಮತ್ತು ಈ ಕೆಲಸಕ್ಕೆ ಸಂಬಂಧಿಸಿದ ಎಲ್ಲವನ್ನೂ ನೋಡಿಕೊಳ್ಳುವ ಜವಾಬ್ದಾರಿ ನನಗೆ ಕೊಟ್ಟರು. ಇವೆಲ್ಲದರ ಹಾಗೂ ನನ್ನ ಇತರೇ ಸಾಧನೆಗಳಿಗೆ ಇಲ್ಲಿಯವರೆವಿಗೆ ಸಿಕ್ಕಿರುವ ಪ್ರಶಸ್ತಿಗೆ ಅವರ ಪ್ರೇರಣೆಯೇ ಕಾರಣ. ಅವರೇ ನನ್ನ ಕೈಯನ್ನು ಹಿಡಿದು ಹೀಗೆ ಹೇಳುತ್ತಿದ್ದರು, "ನಿನಗಾಗುತ್ತೆ ಮಾಡು" ಏನೂ ತಿಳಿಯದ ಹಳ್ಳಿಯ ಹುಡುಗಿ ನಾನು, ಹೊರಗಿನವಳು ಅಂತ ನನ್ನ ಭಾವನೆ. ಕಷ್ಟವಾದ ಹಾದಿಯಲ್ಲಿ ನನ್ನ ಜೊತೆಯೇ

ನಿಂತು ಧೈರ್ಯವನ್ನು ಕೊಟ್ಟು ನನ್ನ ಕಾಲಿನ ಮೇಲೆ ನನ್ನನ್ನು ನಿಲ್ಲಿಸಿದವರೇ ಅವರೇ. ನನ್ನಲ್ಲಿ ಇರುವ ಈ ಶಕ್ತಿ ಹಾಗೂ ಅರ್ಹತೆ ಅವರದೇ".[೭]

ಚಿತ್ರಕಥೆಯ ಬಗ್ಗೆ ವಿಶೇಷ ಕಾಳಜಿ, ಅತ್ಯುತ್ತಮ ಚಿತ್ರಕಥೆಯನ್ನು ಸಿನೆಮಾ ಮಾಡಲು ನಿರ್ಧರಿಸುತ್ತಿದ್ದರು. ಇವರೊಂದಿಗೆ ಸದಾಕಾಲ ವರದಪ್ಪ ಹಾಗೂ ಚಿ. ಉದಯಶಂಕರ್ ಇದ್ದರು ಎಂಬುದು ಸತ್ಯ. ಚಿತ್ರಕಥೆಗಳಲ್ಲಿ ಸಾಮಾಜಿಕ ಕಳಕಳಿ ಇರಬೇಕು. ಸಿನೆಮಾ ಕೇವಲ ಮನೋರಂಜನೆಯ ಸಾಧನವಲ್ಲ. ಅದು ಸಮಾಜವನ್ನು ನಿರ್ಮಾಣ ಮಾಡುವ ಮಾಧ್ಯಮ ಎನ್ನುವುದರ ಬಗ್ಗೆ ಅವರಿಗೆ ಅಪಾರ ನಂಬಿಕೆ ಇತ್ತು. ಹಗಲಿರುಳು ಸಿನೆಮಾದ ಯಶಸ್ಸಿಗೆ ಶ್ರಮಿಸಿದಾಗ ವಜ್ರೇಶ್ವರಿ ಕಂಬೈನ್ಸ್ ಸ್ಥಾಪಿಸಿದರು. ಹೊಸ ಕಲಾವಿದರನ್ನು ಸಿನೆಮಾಕ್ಕೆ ಪರಿಚಯಿಸಿದರು. ರಾಜಣ್ಣನವರ ಜೊತೆ ಜೊತೆಯಾಗಿ ಸಿನೆಮಾಕ್ಕೆ ದುಡಿದರು. ಸಿನೆಮಾ ಕಥೆ ಆಯ್ದ ಬಗ್ಗೆ ಅವರು ಹೇಳಿದ ಮಾತು "ನಮ್ಮ ಯಜಮಾನರು ಹೆಚ್ಚು ಹೆಚ್ಚು ಚಿತ್ರಗಳನ್ನು ಮಾಡ್ತಿದ್ದ ಹಾಗೆ ಅವರ ವೃತ್ತಿ ಬೆಳ್ಳಿ ಪರದೆಯನ್ನು ಮೀರಿದ್ದರಿಂದ ಅವರು ತಮ್ಮ ಕೆಲಸವನ್ನು ಬಹಳ ಗಂಭೀರವಾಗಿ ಪರಿಗಣಿಸಿದರು. ೨೧೨ ಚಿತ್ರಗಳಲ್ಲಿ ನಟಿಸಿದ್ದು ಬೇರೆ ಬೇರೆ ತರಹದ ಪಾತ್ರಗಳನ್ನು ಮಾಡಿದ್ರು, ಚಿತ್ರ ಕಥೆಯನ್ನು ಆಯ್ಕೆ ಮಾಡಿಕೊಳ್ಳುವುದಕ್ಕೆ ಅವರಿಗೆ ತುಂಬಾ ನಿಬಂಧನೆಗಳಿರುತ್ತಿದ್ದವು. ಸಿಗರೇಟ್ ಸೇದುವುದು, ಕುಡ್ಯೋದು, ಹೆಣ್ಣು ಮಕ್ಕಳನ್ನು ಶೋಷಿಸುವಂಥ ಪಾತ್ರಗಳನ್ನು ಅವರು ನಿರಾಕರಿಸುತ್ತಿದ್ದರು."[೮]

ರಾಜಣ್ಣನವರ ಸೂಕ್ಷ್ಮ ಮನಸ್ಸನ್ನು ಅರ್ಥ ಮಾಡಿಕೊಂಡು ಅವರ ಕಲಾ ಜೀವನವನ್ನು ಎಂದೂ ಮುಳ್ಳಾಗಿಸದೇ ಸದಾ ಹೂವಾಗಿ ಅವರ ಕಲಾ ಜೀವನವನ್ನು ಮುನ್ನಡೆಸಿದ ಬಹಳಷ್ಟು ಕೀರ್ತಿ ಪಾರ್ವತಮ್ಮನವರಿಗೆ ಸಲ್ಲುತ್ತದೆ. ೫ ಮಕ್ಕಳ ತಾಯಿಯಾಗಿ ತುಂಬ ಕುಟುಂಬವನ್ನು ನಿಭಾಯಿಸುತ್ತಾ ಮಕ್ಕಳ ಓದು, ಅಡಿಗೆ ಔಷಧ, ಊಟ, ಉಪಚಾರ ಹೊರಗಿನ ಓಡಾಟ, ಶೂಟಿಂಗ್ ಹಣಕಾಸು ಎಲ್ಲವನ್ನೂ ಅವರು ಹೇಗೆ ನಿಭಾಯಿಸಿದರು ಎಂಬುದು ಈಗಲೂ ಹೆಣ್ಣು ಮಕ್ಕಳು ನೋಡಿ ಕಲಿಯಬೇಕು.

"ಮದುವೆ ಮತ್ತು ಕುಟುಂಬಕ್ಕೆ ಸಂಬಂಧಿಸಿದ ಎಷ್ಟೋ ವ್ಯಾಖ್ಯೆಗಳಿವೆ. ನಂಗೆ ತೀವ್ರವಾಗಿ ಅನ್ನೋದು ಏನು ಅಂದರೆ ಗಂಡ ಹೆಂಡ್ತಿ ಮಧ್ಯೆ ಯಾರು ಮುಖ್ಯ ಅನ್ನೋ ಪ್ರಶ್ನೇ ಬರಬಾರದು. ಆ ತರಹದ ಪ್ರಶ್ನೆ ಬಂತು ಅಂದರೆ ನಮ್ಮ ಸಂಸಾರದಲ್ಲಿ ಏನೋ ತೊಂದರೆ ಇದೆ ಎಂದು ಅರ್ಥ. ನಮ್ಮ ಯಜಮಾನರ ಯಶಸ್ಸಿಗೆ ನಾನು ಕಾರಣ ಅಂತಾ ತುಂಬಾ ಜನ ಅಂದ್ಕೊಂಡಿದ್ದಾರೆ. ಆದ್ರೇ ಅವರಿಗೆ ಒಂದು ವಿಚಾರ ಗೊತ್ತಿರಬೇಕು. ನಾನು ಶ್ರೀಮತಿ. ಪಾರ್ವತಮ್ಮ ರಾಜ್‌ಕುಮಾರ್ ಹೊರತು ಶ್ರೀಮತಿ. ಪಾರ್ವತಮ್ಮ ಅಷ್ಟೇ ಅಲ್ಲ. ಅವರಿಲ್ದೆ ನಾನೇನೂ ಅಲ್ಲ, ನನ್ನ ಮತ್ತು ನಮ್ಮ ಸಂಸಾರದ ಅಸ್ತಿತ್ವ ಇರುವುದು ಅವರಿಂದ".[೯]



ಇದು ರಾಜಣ್ಣನವರನ್ನು ಕುರಿತು ಪಾರ್ವತಮ್ಮನವರ ಮಾತು. ರಾಜಣ್ಣನವರ ಕೊನೆ ಗಾಲದವರೆವಿಗೂ ಅವರೊಂದಿಗೆ ಇದ್ದು, ತುಂಬು ಸಂಸಾರವನ್ನು ನಡೆಸಿ ಒಬ್ಬ ಯಶಸ್ವಿ ಮಹಿಳೆಯಾಗಿ, ಪ್ರೀತಿಯ ಮಡದಿ, ಅಕ್ಕರೆಯ ತಾಯಿ, ಚಿತ್ರರಂಗದ ಛಲಗಾತಿಯಾಗಿ ಅವರು ಸವೆಸಿದ ಬದುಕು ಎಲ್ಲ ಹೆಣ್ಣು ಮಕ್ಕಳಿಗೂ ಆದರ್ಶ ಪ್ರಾಯ. ರಾಜ್‌ಕುಮಾರ್‌ರವರನ್ನು ತಮ್ಮ ಗುರು ಎಂದೇ ಅವರು ಭಾವಿಸಿದ್ದರು. ಅವರಿಂದ ಬಹಳಷ್ಟನ್ನು ಕಲಿತರು. ಅವರಿಗೂ ಬಹಳ ಕಲಿಸಿದರು. ಇಬ್ಬರೂ ಶಿವ ಪಾರ್ವತಿಯಂತೆ ಬಾಳಿ ಬದುಕಿದವರು.

ಈ ಅಧ್ಯಾಯದಲ್ಲಿ ವಿವಾಹದ ಜೊತೆ ಜೊತೆ ರಾಜಣ್ಣನವರ ವೈವಾಹಿಕ ಜೀವನ ಪತ್ನಿ ಅವರ ಮೇಲೆ ಬೀರಿದ ಪ್ರಭಾವ ಅವರ ಸುಖ-ದುಃಖವನ್ನು ಸಹಾ ಹೇಳಿದ್ದೇನೆ. ಹಾಗೆ ನೋಡಿದರೆ ರಾಜಣ್ಣನವರ ವಿವಾಹದ ನಂತರವೇ ಅವರು ಸಿನೆಮಾದಲ್ಲಿ ಪ್ರವೇಶಿಸಿದ್ದು, ಹೆಂಡತಿಯ ಕೈಗುಣ, ಸೊಸೆಯ ಕಾಲ್ಗುಣ, ಎಂದು ಏನೆಲ್ಲಾ ಹೇಳಬಹುದು. ಆದರೆ ನನ್ನ ಮಟ್ಟಿಗೆ ಇದು ಭಾರತೀಯ ಹೆಣ್ಣು ಮಗಳ ಲಕ್ಷಣ. ಸಹನೆ, ಬುದ್ಧಿಮತ್ತೆ, ಸಂಸಾರವನ್ನು ನಿಭಾಯಿಸುವ ಸರೀಕರ ಮುಂದೆ ತಲೆ ಎತ್ತಿ ಬಾಳುವ ಹೆಣ್ಣು ಮಗಳ ಒಂದು ಸಾಹಸದ ಗಾಥೆ. ಮದುವೆಯಾದ ಒಂದೇ ವರ್ಷಕ್ಕೆ ರಾಜಣ್ಣನವರ ಅದೃಷ್ಟ ಖುಲಾಯಿಸುತ್ತದೆ. ಅದೂ ಸತ್ಯವೇ ಇದಲ್ಲದೆ ರಾಜಣ್ಣನವರ ಕಲಾ ಜೀವನ ಆರಂಭ ಆಗಲು ಒಂದಷ್ಟು ಕಾಲ ಕಾಯಬೇಕಾಯಿತು. ಈ ಕಾಯುವ ಅವಧಿ ಮುಗಿದ ನಂತರ ಪಾರ್ವತಮ್ಮನವರ ಜೊತೆ ಅವರ ಕಲಾ ಜೀವನ ಆರಂಭವಾಗಿತ್ತು ಎಂದರೆ ತಪ್ಪಾಗಲಾರದು.

### ೩.೪ ಚಿತ್ರರಂಗ ಪ್ರವೇಶ :

ಪ್ರತಿಷ್ಠಿತ ನಾಟಕ ಕಂಪೆನಿ ಗುಬ್ಬಿ ಸಂಸ್ಥೆಯಿಂದ ಆಗತಾನೆ "ಗುಣಸಾಗರಿ" ಚಲನಚಿತ್ರ ನಿರ್ಮಾಣವಾಗಿತ್ತು. ಉತ್ತಮ ಪ್ರತಿಕ್ರಿಯೆಯೊಂದಿಗೆ ಅಪಾರ ಜನಪ್ರಿಯತೆಯನ್ನು ಸಹಾ ಪಡದುಕೊಂಡಿತ್ತು. ಆ ಕಾಲಕ್ಕೆ ನಾಟಕದ ಹೊರತು ಜನರಿಗೆ ಯಾವ ಮನೋರಂಜನೆಯೂ ಇರಲಿಲ್ಲ. ನಾಟಕದ ಹೊರಗೆ ಒಂದು ಸಿನೆಮಾದ ಕತ್ತಲೆ ಥಿಯೇಟರ್‌ನಲ್ಲಿ ಕುಳಿತು ಸಿನೆಮಾ ನೋಡುವುದುಒಂದು ಅಚ್ಚರಿ, ಆಶ್ಚರ್ಯ ಸಂತೋಷವನ್ನು ಉಂಟು ಮಾಡುವ ವಿಷಯವಾಗಿತ್ತು. ನಾಟಕದಲ್ಲಿ ಕಾಣದೇ ಇದ್ದ ಅದ್ಭುತಗಳನ್ನು



ಜನರು ಸಿನೆಮಾದಲ್ಲಿ ಕಂಡರು. ಇದೇನೋ ವಿಸ್ಮಯ ಜನರನ್ನು ಮೋಡಿ ಮಾಡಿತ್ತು. ಇಂಗ್ಲೀಷ್ ಹಿಂದಿ ಸಿನೆಮಾಗಳು ಆಗಲೇ ಜನಪ್ರಿಯತೆ ಪಡೆದುಕೊಂಡಿದ್ದವು. ನಿಧಾನವಾಗಿ ಕನ್ನಡ ಚಿತ್ರಗಳು ನೆಲೆಯೂರಿ ತಮ್ಮ ಸ್ಥಾನವನ್ನು ಭದ್ರಪಡಿಸುತ್ತಿದ್ದವು. ಅಂದಿನ ಜನಪ್ರಿಯ ನಾಟಕಗಳನ್ನು ಸಿನೆಮಾ ಪರದೆಯ ಮೇಲೆ ತರುವ ಪ್ರಯತ್ನ ನಡೆಯುತ್ತಿತ್ತು. ಜೆ.ಹೆಚ್.



ವೀರಣ್ಣ, ಸಿ.ಆರ್. ಬಸವರಾಜ್ ಅಂದಿನ ಜನಪ್ರಿಯ ನಾಟಕ ಬೇಡರ ಕಣ್ಣಪ್ಪನನ್ನು ಚಲನಚಿತ್ರವಾಗಿಸಲು ನಿರ್ಧರಿಸಿದರು. ಪಾಲುದಾರರಾದ ಎ.ಎ. ಮೇಯಪ್ಪ ಚೆಟ್ಟಿಯಾರ್ ಸಹಾ ಒಪ್ಪಿಕೊಂಡರು. ಸಾಧ್ಯವಾದಷ್ಟು ಹೊಸ ತಾರಾಗಣವನ್ನೇ ತರಲು ನಿರ್ಧರಿಸಿದರು. ಬೇಡರ ಕಣ್ಣಪ್ಪ ನಾಟಕದಲ್ಲಿ ಕಾಶಿ ಪಾತ್ರದಲ್ಲಿ ನರಸಿಂಹರಾಜು, ಶಾಸ್ತ್ರಿ ಪಾತ್ರದಲ್ಲಿ ಜಿ.ವಿ. ಅಯ್ಯರ್ ರವರನ್ನೇ ಸಿನೆಮಾಕ್ಕೂ ತರುವ ನಿರ್ಧಾರವಾಯಿತು. ನಾಯಕಿಯಾಗಿ ಆಗಲೇ ಗುಣಸಾಗರಿ ಸಿನೆಮಾದಲ್ಲಿ ಜನಪ್ರಿಯವಾಗಿದ್ದ ಪಂಡರಿಬಾಯಿ ರವರನ್ನು ಆಯ್ಕೆ ಮಾಡಲಾಯಿತು. ಆದರೆ ನಾಯಕ ಪಾತ್ರಕ್ಕೆ ಯಾರೂ ಅಂಥಹ ಉತ್ತಮ ನಟ ಸಿಕ್ಕಿರಲಿಲ್ಲ.



ಚಿತ್ರದ ನಿರ್ದೇಶನದ ಜವಾಬ್ದಾರಿ ಹೊತ್ತ ಹೆಚ್. ಎಲ್. ಎಸ್. ಸಿಂಹರವರು ಅದೇ ನಂಜನಗೂಡಿನವರು. ಒಮ್ಮೆ ಮದ್ರಾಸಿನಿಂದ ನಂಜನಗೂಡಿಗೆ ಬಂದಿದ್ದರು. ಬಸ್ಸಿನಿಂದ ಇಳಿದು ನಂಜನಗೂಡಿಗೆ ಆಗ ತಾನೇ ನಾಲ್ಕಾರು ಹೆಜ್ಜೆ ಇಡುವ ಹೊತ್ತಿಗೆ ತನ್ನ ತಾಯಿ ಮತ್ತು ಹೆಂಡತಿಯೊಡನೆ ಹೋಗುತ್ತಿದ್ದ ಮುತ್ತುರಾಜ ಕಣ್ಣಿಗೆ ಬೀಳುತ್ತಾನೆ. ಹೊಸದಾಗಿ ಮದುವೆ ಆಗಿತ್ತು. ಪುಟ್ಟಸ್ವಾಮಯ್ಯನವರ ಪರಿಚಯ ಸಿಂಹ ಅವರಿಗೆ ಚೆನ್ನಾಗಿಯೇ ಇತ್ತು. ಅವರ ನಾಟಕಗಳನ್ನು ಸಿಂಹರವರು ನೋಡಿದ್ದರು. ತಂದೆ ತೀರಿಹೋದ ವಿಷಯದ ಬಗ್ಗೆ ಮುತ್ತುರಾಜನಿಗೆ ಸಾಂತ್ವನ ಹೇಳಿ ಯೋಗಕ್ಷೇಮ ವಿಚಾರಿಸಿದರು. ಆದರೆ ಅವರ ಮನಸ್ಸಿನಲ್ಲಿ ಒಂದು ವಿಚಾರ ಕೊರೆಯುತ್ತಿತ್ತು. ಅವರಿಗೆ ಬೇಡರ ಕಣ್ಣಪ್ಪನ ಚಿತ್ರಕ್ಕೆ ಕಣ್ಣಪ್ಪನ ಪಾತ್ರ ಮಾಡಲು ಒಂದು ಹೊಸ ಮುಖ ಒಳ್ಳೆಯ ಕಲಾವಿದ ಬೇಕಾಗಿತ್ತು. ಮುತ್ತುರಾಜು ಈಗಾಗಲೇ ನೂರಾರು ನಾಟಕಗಳಲ್ಲಿ ಅಭಿನಯಿಸಿಯಾಗಿತ್ತು. ಅಲ್ಲದೆ ಕಣ್ಣಪ್ಪನ ಪಾತ್ರವನ್ನು ಆತ ನೀರು ಕುಡಿದಷ್ಟೆ ಸಲೀಸಾಗಿ ಮಾಡಿ ಮುಗಿಸಿದ್ದ. ಈ ಹದಿ ಹರೆಯದ ಹುಡುಗ ಕಣ್ಣಪ್ಪನಾದರೆ ಚೆನ್ನಾಗಿರುತ್ತದೆ ಎಂದ ಅವರ ಒಳ ಮನಸ್ಸು ಹೇಳುತ್ತಿತ್ತು. ಆದರೆ ನಿರ್ಮಾಪಕರ ಜೊತೆ ಮಾತನಾಡಿ ಅವರೂ ಸಹಾ ಒಪ್ಪಿದರೆ ಆಮೇಲೆ ಮುತ್ರಾಜು ಜೊತೆ ಮಾತನಾಡುವ ಎಂದು ಸುಮ್ಮನಾದರು.

ಸಿಂಹರವರಿಗೆ ತಮಗೆ ಬೇಕಾದ ಒಬ್ಬ ಸೂಕ್ತ ಕಲಾವಿದ ಸಿಕ್ಕನಲ್ಲ ಎನ್ನುವ ಖುಷಿ. ವೀರಣ್ಣನವರು ಸಹಾ ನಮ್ಮ ಕಂಪೆನಿಯಲ್ಲಿನ ಪುಟ್ಟಸ್ವಾಮಯ್ಯನವರ ಮಗನಲ್ಲವೇ ಎಂದು ಸಂತೋಷದಿಂದ ಒಪ್ಪಿದರು. ಮುತ್ತುರಾಜನನ್ನು ಬಿಟ್ಟರೇ ಈ ಪಾತ್ರಕ್ಕೆ ಬೇರೆ ಕಲಾವಿದ ಸಿಗುವುದಿಲ್ಲ ಎಂದು ಚೆಟ್ಟಿಯಾರ್ ಸಹಾ ಒಪ್ಪುತ್ತಾರೆ. ಸಹ ಇನ್ನೇನು ಮುತ್ತುರಾಜುವನ್ನು ಮೂವೀ ಟೆಸ್ಟ್‌ಗೆ ಕರೆಯಲಾಯಿತು. ತಂದೆ ತೀರಿಹೋದ ನಂತರ ಮಾನಸಿಕವಾಗಿ ದುಃಖಿಯಾಗಿದ್ದ ಮುತ್ತುರಾಜು ತನ್ನ ಜೀವನ ನಿರ್ವಹಣೆಗಾಗಿ ನಾಟಕವನ್ನು ನಂಬಿಕೊಂಡಿದ್ದ. ತನ್ನ ತಂದೆಯಾಸೆ ಒಂದು ದಿನ ನೆರವೇರುತ್ತದೆ ಎಂಬ ಕಲ್ಪನೆಯೂ ಇವನ ಮನದಲ್ಲಿರಲಿಲ್ಲ. ಹಾಸಿಗೆ ಇದ್ದಷ್ಟು ಕಾಲು ಚಾಚು, ಬಡವ ನೀನು ಮಡಗಿದಂಗೆ ಇರು ಎನ್ನುವಂತೆ ತಾನಾಯ್ತು ತನ್ನ ಕುಟುಂಬ, ಮನೆ ಹೆಂಡತಿ, ತಾಯಿ ಮತ್ತು ನಾಟಕ ಇಷ್ಟೇ ಇವನ ಪ್ರಪಂಚವಾಗಿತ್ತು. ಅಪಾರವಾದ ಪ್ರತಿಭೆ ಇದ್ದರೂ ಅವಕಾಶ ವಂಚಿತನಾಗಿದ್ದ. ಮುತ್ತುರಾಜು ತನ್ನ ನಾಟಕದ ಸಂಭಾವನೆಯಲ್ಲಿಯೇ



ಪುಟ್ಟ ಪ್ರಪಂಚದಲ್ಲಿ ಮುಳುಗಿ ಹೋಗಿದ್ದ. ಹೊಸ ಪ್ರಪಂಚವೊಂದು ತನಗಾಗಿ ತೆರೆದುಕೊಳ್ಳಲಿದೆ ಎನ್ನುವ ಕಲ್ಪನೆ ಸಹಾ ಇವನಿಗೆ ಇರಲಿಲ್ಲ. ಮೊದಲು ಸಣ್ಣ ಸಣ್ಣ ಪಾತ್ರಗಳಲ್ಲಿ ಕಾಣಿಸಿಕೊಳ್ಳುವ ಮುತ್ತುರಾಜನ ಜೀವನದಲ್ಲಿ ಒಂದು ಆಕಸ್ಮಿಕ ನಡೆದಿತ್ತು. ಮುತ್ತುರಾಜನ ಪ್ರತಿಭೆಗೆ ಸೂಕ್ತವಾಗುವ ಅದ್ಭುತ ಅವಕಾಶವೊಂದು ಮುತ್ತುರಾಜನನ್ನು ಹುಡುಕಿಕೊಂಡು ಬಂದಿತ್ತು. ಭಕ್ತ ಅಂಬರೀಷ ನಾಟಕದ ರಮಾಕಾಂತ ಪಾತ್ರವನ್ನು ಶ್ರೀಕಂಠಮೂರ್ತಿ ಎಂಬುವವರು ನಿರ್ವಹಿಸುತ್ತಿದ್ದರು. ಸಂಬಂಧಿಕರ ಮದುವೆಗಾಗಿ ಗೈರು ಹಾಜರಾಗಿದ್ದ ಕಾರಣ ಅವರು ಒಮ್ಮೆ ನಾಟಕಕ್ಕೆ ಬರಲಾಗಲಿಲ್ಲ. ಆಗ ಸುಬ್ಬಯ್ಯನಾಯ್ಡುರವರು ರಮಾಕಾಂತನ ಪಾತ್ರಕ್ಕೆ ಮುತ್ತುರಾಜುನನ್ನು ಆಯ್ಕೆ ಮಾಡುತ್ತಾರೆ. ಇದೊಂದು ಅದ್ಭುತ ಅವಕಾಶ, ಅದನ್ನು ಸರಿಯಾಗಿ ಉಪಯೋಗಿಸಿಕೊಂಡ ಮುತ್ತು "ಭೋಗವಿಲಾಸ ಜಗದೇ" ಎಂದು ಹಾಡುತ್ತಾ ರಂಗಪ್ರವೇಶ ಮಾಡುತ್ತಾರೆ. ಜನರೆಲ್ಲಾ ಒನ್ಸ್‌ಮೋರ್ ಎಂದು ಜಯಘೋಷ ಮಾಡುತ್ತಾರೆ. ರಮಾಕಾಂತನಾಗಿ ಮುತ್ತುರಾಜ ಆ ಪಾತ್ರದೊಳಗೆ ಪರಕಾಯ ಪ್ರವೇಶ ಮಾಡಿದಂತೆ ಅದ್ಭುತ ನಟನೆ ಹಾಡು ಜನಪ್ರಿಯತೆ ಗಳಿಸಿಕೊಳ್ಳುತ್ತಾನೆ. ರಮಾಕಾಂತನಾಗಿ ಮುತ್ತಣ್ಣ, ಭಕ್ತ ಅಂಬರೀಷನಾಗಿ ಸುಬ್ಬಯ್ಯ ನಾಯ್ಡು ಈ ನಾಟಕ ಅತ್ಯಂತ ಜನಪ್ರಿಯ ಜೋಡಿಯಾಗುತ್ತದೆ ನಾಟಕವನ್ನು ಮುಂದೆ ಸಿನೆಮಾ ಮಾಡಬೇಕೆಂದು ಭಕ್ತ ಅಂಬರೀಷನಾಗಿ ರಾಜಣ್ಣನವರು ಅಭಿನಯಿಸಬೇಕೆಂದು ಮಹತ್ ಇಚ್ಛೆಯನ್ನು ಹೊಂದಿದ್ದರು. ಈ ಆಸೆ ಕೊನೆಗೂ ನೆರವೇರಲಿಲ್ಲ. ಆಸೆ ಈಡೇರುವ ಮುನ್ನ ವೀರಪ್ಪನ್‌ನಿಂದ ಅಪಹರಣ, ಮಂಡಿ ಶಸ್ತ್ರಚಿಕಿತ್ಸೆ ಮುಂತಾದ ಮಾನಸಿಕ ದೈಹಿಕ ತೊಂದರೆಗಳು ರಾಜಣ್ಣನವರನ್ನು

ಕಾಡಿದ್ದು, ಅವರು ಇಹಲೋಕ ತ್ಯಜಿಸಿದ್ದು ನಮ್ಮ ಪಾಲಿಗೆ ತುಂಬಲಾಗದ ನಷ್ಟವಾಗಿದೆ. ಇದು ಅವರ ಉತ್ತಮ ಪಾತ್ರ ಬಿಡದ ನಾಟಕದ ಅನುಭವ. ಕ್ರಮೇಣ ಅವರಿಗೆ ಕಂಪನಿಯಲ್ಲಿ ಒಳ್ಳೆಯ ಪಾತ್ರಗಳು ಸಿಗುತ್ತವೆ.

ಸುಬ್ಬಯ್ಯ ನಾಯ್ಡು ಅವರ ಕಂಪೆನಿಯಲ್ಲಿ ನಾಟಕಗಳಲ್ಲಿ ತೊಡಗಿಸಿಕೊಂಡಿದ್ದ ಒಂದು ದಿನ ಗುಬ್ಬಿ ಕರ್ನಾಟಕ ಫಿಲಂಸ್‌ನಿಂದ ರಿಜಿಸ್ಟರ್ ಪತ್ರವೊಂದು ಬರುತ್ತದೆ. ತೆರೆದು ನೋಡಿದಾಗ ಸಂತೋಷ ಇಮ್ಮಡಿಸುತ್ತದೆ. "ಶ್ರೀಯುತ. ಮುತ್ತುರಾಜುರವರಿಗೆ ಶರಣಾರ್ಥಿಗಳು. ನಾವು ನಮ್ಮ ಕಂಪೆನಿಯಿಂದ ಬೇಡರ ಕಣ್ಣಪ್ಪ ಚಿತ್ರವನ್ನು ನಿರ್ಮಿಸಲು ನಿರ್ಧರಿಸಿದ್ದೇವೆ. ನಮ್ಮ ಡೈರೆಕ್ಟರ್ ಮತ್ತು ಎ.ವಿ.ಎಂ. ಚೆಟ್ಟಿಯಾರ್‌ರವರು (ಪ್ರಖ್ಯಾತ ಸಿನೆಮಾ ನಿರ್ಮಾಪಕರು) ನಿಮ್ಮನ್ನು ಕರೆಸಿ ಮೂವಿ ಟೆಸ್ಟ್ ಮಾಡಬೇಕೆಂದು ನಿರ್ಧರಿಸಿದ್ದಾರೆ"[೦೦] ಆ ಟೆಸ್ಟ್‌ನಲ್ಲಿ ನೀವು ಉತ್ತೀರ್ಣರಾದರೆ ನಿಮಗೆ ಆ ಚಿತ್ರದಲ್ಲಿ ಒಂದು ಮುಖ್ಯ ಮುಖ್ಯ ಪಾತ್ರವನ್ನು ಕೊಡಬೇಕೆಂದು ನಿರ್ಧರಿಸದ್ದೇವೆ. ಈ ಕಾಗದ ಕಂಡ ಕೂಡಲೇ ತಕ್ಷಣ ಬರುವುದು ರಾಮಾಯಣದ ರಾಮನ ಪಾತ್ರ ಮಾಡುತ್ತಿದ್ದ ಸಂದರ್ಭ. ದಶರಥ ಹೇಗೆ ತಂದೆ ತಾಯಿ ಆಸೆ ನೆರವೇರಿಸಲು ಸದಾ ಬದ್ಧನಾಗಿದ್ದನೋ ಮುತ್ರಾಜು ಸಹಾ ತಂದೆಯ ಆಸೆ ನೆರವೇರಿಸಲು ತುದಿಗಾಲಿನಲ್ಲಿ ನಿಂತಿದ್ದನು. ತಾಯಿಗೆ ವಿಷಯ ತಿಳಿಸಿದನು.

ನಾಟಕ ಮುಗಿದ ಕೂಡಲೇ ನಾಯ್ಡುಗಳ ಅಪ್ಪಣೆ ಪಡೆದು ಹೊಸಪೇಟೆಯಿಂದ ಗುಂತಕಲ್ ಮಾರ್ಗವಾಗಿ ರೈಲಿನಲ್ಲಿ ಬೆಂಗಳೂರಿಗೆ ಬರುತ್ತಾರೆ. ಕಾದಿದ್ದ ಪ್ರತಿನಿಧಿಯೊಂದಿಗೆ ಮದ್ರಾಸಿಗೆ ಪ್ರಯಾಣ. ಶಿವಶರಣರನ್ನು ಹೋಲುವ ವೇಷ, ಪೈಜಾಮ, ಫುಲ್ ಕಪ್ ಶರ್ಟು, ಭಾಗವತರ ಕ್ರಾಪು, ಕೈಯಲ್ಲಿ ನಂಜನಗೂಡಿನ ಸದ್ವೈದ ಶಾಲೆ ಜಾಹಿರಾತಿನ ಚೀಲ, ಅದರಲ್ಲಿ ನಂಜನಗೂಡು ಹಲ್ಲಿನ ಪುಡಿ ಪೊಟ್ಟಣ, ಒಂದು ಪ್ಲಾಸ್ಟಿಕ್ ಬಾಚಣಿಗೆ, ಟವೆಲ್ ಮತ್ತು ಸೋಪು. ಮದ್ರಾಸ್ ತಲುಪಿ ಆಯ್ತು. ಏರ್ ಕಂಡೀಷನ್ ಕೊಠಡಿಯಲ್ಲಿ ಮಾತುಕಥೆ, ಮುಗ್ಧ ಮುತ್ರಾಜುವಿಗೆ ಕೊಠಡಿ ಇಷ್ಟು ತಣ್ಣಗಿದೆಯಲ್ಲ ಹೇಗೆ ಎಂಬುದೇ ಪ್ರಶ್ನೆ. ಮದ್ರಾಸಿನಲ್ಲಿ ಸೆಕೆ ಜಾಸ್ತಿ ಆದರೆ ಈ ಕೊಠಡಿ ತಣ್ಣಗಿರಲು ಹೇಗೆ ಸಾಧ್ಯವಾಯಿತು ಎಂದು ಸಿಂಹರವರನ್ನು ಕೇಳಿದಾಗ ಅವರು ಏರ್ ಕಂಡೀಷನ್



ಬಗ್ಗೆ ತಿಳಿಸುತ್ತಾರೆ. ಅಲ್ಲಿಯವರೆವಿಗೂ ಅದರ ಬಗ್ಗೆ ತಿಳಿದಿರಲಿಲ್ಲ. ಕ್ಯಾಮೆರಾ ಮುಂದೆ ನಿಲ್ಲಿಸಿ ದೃಶ್ಯದ ವಿವರಣೆ ನೀಡುತ್ತಾರೆ.

ಹಸಿವು ಬಾಯಾರಿಕೆ ಬಳಲಿಕೆಯಿಂದ ಕಣ್ಣಪ್ಪ ಕಾಡಿನಲ್ಲಿ ನಡೆದು ಬರುತ್ತಿದ್ದಾನೆ. ಕಾಲಿಡಲೂ ಸಾಧ್ಯವಾಗುತ್ತಿಲ್ಲ. ಸತತ ಬೇಟೆಯ ಹುಡುಕಾಟ ನಡೆಸಿ ಒಂದೂ ಬೇಟೆ ಸಿಗದೇ ನಿರಾಸನಾಗಿದ್ದಾನೆ. ಹೆಂಡತಿ ಮನೆಯಲ್ಲಿ ಹಸಿದಿದ್ದಾಳೆ. ಕಂಡ ಪ್ರಾಣಿಗಳೆಲ್ಲ ಮಾಯವಾಗಿ ಹೋಗುತ್ತಿವೆ. ಎಷ್ಟು ಬೆನ್ನಟ್ಟಿದರೂ ಒಂದು ಸಣ್ಣ ಪ್ರಾಣಿಯೂ ಸಿಗುತ್ತಿಲ್ಲ. ಇಂಥಹ ಪರಿಸ್ಥಿತಿಯನ್ನು ಕ್ಯಾಮೆರಾ ಮುಂದೆ ಅಭಿನಯಿಸುವುದು ಹೇಗೆ ಎಂಬುದು ಮುತ್ತುರಾಜುವಿಗೆ ಹೊಸ ವಿಷಯವಾಗಿತ್ತು. ಈಗಾಗಲೇ ಹೊಟ್ಟೆ ತುಂಬಾ ಇಡ್ಲಿ ಸಾಂಬಾರು ತಿಂದಿದ್ದ, ಹಸಿದವನಂತೆ ಅಭಿನಯಿಸುವುದು ಹೇಗೆ. ಆರಂಭದಲ್ಲಿ ಸ್ವಲ್ಪ ತೊಡಕಾಡಿದ. ನಿರ್ದೇಶಕರು ನವರಸಗಳನ್ನು ಅಭಿನಯಿಸಿ ತೋರಿಸು ಎಂದರು. ರಸ ಎಂದರೇನು ಎಂದು ಕೇಳಿಯೇ ಬಿಟ್ಟ. ಮುತ್ತುರಾಜನ ಅಭಿನಯದ ಬಗ್ಗೆ ಅಪಾರ ನಂಬಿಕೆ ಇದ್ದ ನಿರ್ದೇಶಕರು ಇವನ ಮೇಲೆ ಅನುಮಾನ ಪಡಲಿಲ್ಲ. ಹೊಸ ಪರಿಸ್ಥಿತಿಯನ್ನು ಕ್ಯಾಮರಾ, ಲೈಟ್ ಮುಂತಾದವುಗಳನ್ನು ತಿಳಿಸಿಕೊಟ್ಟರು. ಒಮ್ಮೆ ಅಭಿನಯಿಸಿ ಸಹಾ ತೋರಿಸಿದರು. ಅಭಿನಯದಲ್ಲಿ ಬೆರಳು ತೋರಿಸಿದರೆ ಹಸ್ತ ನುಂಗುವ ಜಾತಿ ಮುತ್ತುರಾಜುವಿನದ್ದು. ನಿರ್ದೇಶಕರು ಮೆಚ್ಚುವ ಹಾಗೆ ಅಭಿನಯಿಸಿದ. ನಿರ್ದೇಶಕರಿಗೆ ಒಪ್ಪಿಗೆಯಾಯಿತು. ವೀರಣ್ಣನವರಿಗೆ ತಂದೆ ಪುಟ್ಟಸ್ವಾಮಯ್ಯನವರ ನೆನಪಾಯಿತು. ಅವರು ಮಗನನ್ನು ಮದ್ರಾಸಿಗೆ ಕರೆದುಕೊಂಡು ಬಂದು ಮಗನಿಗಾಗಿ ಒಂದು ಚಾನ್ಸ್ ಕೊಡಿ ಎಂದು ನಿರ್ದೇಶಕರಲ್ಲಿ ಕೇಳಿಕೊಂಡಿದ್ದು ಉಂಟು. ಇಂದು ವೀರಣ್ಣನವರಿಗೂ ಸಮಾಧಾನ, ಒಂದು ಒಳ್ಳೆಯ ಪಾತ್ರ ಮುತ್ತುರಾಜುವನ್ನು ಹುಡುಕಿಕೊಂಡು ಬಂದಿದ್ದು, ತಂದೆಯ ಆಶೀರ್ವಾದವೇ ಸರಿ. ಸರಿ ಟೆಸ್ಟ್ ಮುಗಿಯಿತು. ಹೇಳಿಕಳುಹಿಸುವುದಾಗಿ ಹೇಳಿ ಮದ್ರಾಸಿನಿಂದ ಮುತ್ತುರಾಜುವನ್ನು ಬೀಳ್ಕೊಟ್ಟರು.

ಅಲ್ಲಿಂದ ಬಂದ ಮೇಲೆ ಪುನಃ ನಾಟಕಗಳದ್ದೆ ಧ್ಯಾನ. ಮೂಲತಃ ರಾಜಣ್ಣನವರು ಸ್ಫುರದ್ರೂಪಿ, ಸುಂದರ ಸದೃಢ ಮೈಕಟ್ಟು, ಕಣ್ಣುಗಳಲ್ಲಿ ಅಪಾರ ವಿಶ್ವಾಸ, ರಾಮ, ಬುದ್ಧ, ಕೃಷ್ಣ ಮುಂತಾದ ಗಂಭೀರ ಪಾತ್ರಗಳಿಗೆ ಹೇಳಿ ಮಾಡಿಸಿದ ಸೌಜನ್ಯ ಭರಿತ ಮುಖ. ಇದೆಲ್ಲಕ್ಕಿಂತ ಕಂಚಿನ ಕಂಠ, ಭೂಕೈಲಾಸದ ನಾರದ, ಬಸವಣ್ಣ ನಾಟಕದ ಬಿಜ್ಜಳ, ಮುಂತಾದ ಪಾತ್ರಗಳಿಗೆ ಇವರೆ ಜೀವಕಳೆ ತುಂಬುತ್ತಿದ್ದರು. ಢಿಕ್ಕಿ ಮಾಧವರಾವ್, ಹೆಚ್. ಕೃಷ್ಣಶಾಸ್ತ್ರಿ, ರಾಧಕೃಷ್ಣ ಅಯ್ಯರ್, ಪ್ರಭುಸ್ವಾಮಿ, ಮುಂತಾದವರು ಮುತ್ತುರಾಜುವಿಗೆ ನಾಟಕದಲ್ಲಿ ಅಪಾರ ನೆರವು ನೀಡಿದ್ದು, ಮಳವಳ್ಳಿ ಸುಂದರಮ್ಮ, ನಾಗತ್ನಮ್ಮ ನಾಯ್ಡುರವರ ಧರ್ಮಪತ್ನಿ ಲಕ್ಷ್ಮಿಬಾಯಿ ಮುಂತಾದವರು ನಾಟಕಗಳ ನಾಯಕಿಯರಾಗಿದ್ದರು. ಅವರೆಲ್ಲಾ ಮುತ್ತುರಾಜಿಗೆ ಸಿನೆಮಾದಲ್ಲಿ ಪಾರ್ಟು ಸಿಗಲಿ ಎಂದು ಹಾರೈಸುತ್ತಿದ್ದರು. ದಿನೇ ದಿನೇ ಮೂವಿ ಟೆಸ್ಟ್‌ನ ಫಲಿತಾಂಶಕ್ಕಾಗಿ ಮುತ್ತುರಾಜು ಕಾಯತೊಡಗಿದ. ಕೆಲವೊಮ್ಮೆ ನಿರಾಸೆ ಮೂಡುತ್ತಿತ್ತು. ಕೆಲವೊಮ್ಮೆ ಆಸೆ ಚಿಗುರುತ್ತಿತ್ತು. ಹೀಗೆ ಇದ್ದಾಗ ಒಂದು ದಿನ ನಾಟಕದ ಕ್ಯಾಂಪ್ ಹುಬ್ಬಳ್ಳಿಯಲ್ಲಿ ಬೀಡು ಬಿಟ್ಟಿತ್ತು ಆಗ ಗುಬ್ಬಿ ಕಂಪೆನಿಯಿಂದ ಪಾತ್ರಕ್ಕೆ ಆಯ್ಕೆಯಾದ ಬಗ್ಗೆ ಪತ್ರ ಒಂದು ಬಂದಿತು. ಲಕೋಟೆ ಒಡೆದು ಓದಿದ ತಕ್ಷಣ ಸಂತೋಷದಿಂದ ತಾಯಿ ಮತ್ತು ಹೆಂಡತಿಗೆ ಈ ವಿಚಾರ ತಿಳಿಸುತ್ತಾರೆ. ಪಾತ್ರದ ಜೊತೆಗೆ ೬೦೦ ರೂ.ಗಳ ಚೆಕ್ ಸಹಾ ನೀಡಿದ್ದರು. ಇಷ್ಟು ದೊಡ್ಡ ಮೊತ್ತ ನೋಡಿ ಸ್ವಲ್ಪ ದಿಗಿಲು ಸಹಾ ಆಯ್ತು. ಜೊತೆಗೆ ಸಂತೋಷವೂ ಆಯಿತು.

ಹುಬ್ಬಳ್ಳಿಯ ಸಿದ್ದಾರೂಢ ಮಠದ ಶ್ರೀ ಶ್ರೀ ಶ್ರೀ ಗೋವಿಂದ ಸ್ವಾಮಿಗಳಿಗೆ ತಿಳಿಸಿ ಅವರ ಆಶೀರ್ವಾದ ಪಡೆದು ಹೊರಡುತ್ತಾರೆ. ಸುಬ್ಬಯ್ಯ ನಾಯ್ಡು ರವರಿಗೆ ಒಂದು ಕಡೆ ಸಂತಸ ಒಂದು ಕಡೆ ಇಂಥಹ ಒಳ್ಳೆಯ ಕಲಾವಿದನನ್ನು ನಾಟಕಗಳಿಂದ ದೂರ ಕಳುಹಿಸಬೇಕೆ ಎಂಬ ದು:ಖ ಆದರೂ ಒಳ್ಳೆಯ ಭವಿಷ್ಯ ನೆನೆದು ಮುತ್ತಾರಾಜುವನ್ನು ಮದ್ರಾಸಿಗೆ ಕಳುಹಿಸುತ್ತಾರೆ. ಸಹಕಲಾವಿದರು ರೇಡಿಯಂ ಡಯಲಿನ ರಿಸ್ಟ್ ವಾಚನ್ನು ಕಾಣಿಕೆಯಾಗಿ ನೀಡುತ್ತಾರೆ. ಬೆಳಗಿನ ಜಾವ ಮೂರಕ್ಕೆ ರೈಲಿನಲ್ಲಿ ಪ್ರಯಾಣಿಸಬೇಕಾಗಿರುತ್ತದೆ. ರಾತ್ರಿ ಎರಡಕ್ಕೆ ನಾಟಕ ಮುಗಿಯುತ್ತದೆ. ನಾಟಕ ಮುಗಿದ ಮೇಲೆ ಎಲ್ಲರೂ ಹಾರ, ಹೂ ಹಣ್ಣುಗಳಿಂದ ಮುತ್ತಾರಾಜುವನ್ನು ಬೀಳ್ಕೊಡುತ್ತಾರೆ. ಸುಬ್ಬಯ್ಯ ನಾಯ್ಡು, ಲಕ್ಷ್ಮಿದೇವಿರವರ ಪಾದಗಳಿಗೆ ನಮಸ್ಕರಿಸಿದ ಮುತ್ತಾರಾಜು ಕಣ್ಣುಗಳಲ್ಲಿ ನೀರಾಡುತ್ತದೆ ಇಷ್ಟು ವರ್ಷ ಸಾಕಿ ಸಲಹಿದ ನಾಟಕದ ಕಂಪೆನಿ ಬಿಟ್ಟು ಬೇರೆ ಊರಿಗೆ ಹೊರಡಲು ಮನಸ್ಸಿಗೆ ಬಹಳ ಕಷ್ಟವಾಗುತ್ತದೆ. ಅಲ್ಲಿಂದ ನೇರ ಮದ್ರಾಸು ತಲುಪಿದ ಮುತ್ತಣ್ಣ ಅಲ್ಲಿಯೇ ಬಾಡಿಗೆ ಕೋಣೆ ಹಿಡಿದು ಚಿತ್ರೀಕರಣಕ್ಕೆ ಹಾಜರಾಗುತ್ತಾನೆ.

ಚಿತ್ರೀಕರಣ ಆರಂಭವಾಗುತ್ತದೆ. ಮೊದಮೊದಲು ಕ್ಯಾಮರಾಪ್ಯಾನ್, ಪ್ಯಾನ್ ಲೆಫ್ಟ್, ಪ್ಯಾನ್ ರೈಟ್ ಎನ್ನುವ ಶಬ್ದಗಳು ತೀರಾ ಅಪರಿಚಿತ ಎನಿಸುತ್ತವೆ. ಅವರ ಮೊದಲ ನಾಯಕಿ ಪಂಡರಿಬಾಯಿ.ಅವರು ಈಗಾಗಲೇ ಗುಣಸಾಗರಿ ಎನ್ನುವ ಚಿತ್ರಕ್ಕೆ ಹೊನ್ನಪ್ಪ ಭಾಗವತರ್ ಚಿತ್ರದಲ್ಲಿ ನಟಿಸಿದ್ದರು. ಅವರಿಗೆ ಕ್ಯಾಮೆರಾ ಅರಿವಿತ್ತು. ಕ್ಯಾಮೆರಾದ ಮುಂದೆ ಹೇಗೆ ನಟಿಸಬೇಕು ಎಂಬುದನ್ನು ಪಂಡರಿಬಾಯಿ ರವರು ಸಲಹೆ ನೀಡುತ್ತಾರೆ



ಬೇಡರ ಕಣ್ಣಪ್ಪನಾಗಿ ಮೊದಲು ಬಣ್ಣ ಹಚ್ಚುವ ಮುತ್ತಾರಾಜು ಯಾವ ಘಳಿಗೆಯಲ್ಲಿ ಬಣ್ಣ ಹಚ್ಚಿದರೂ ತಾಯಿ ಸರಸ್ವತಿ ಅವನಿಗೆ ಒಲಿಯುತ್ತಾಳೆ. ತಮ್ಮ ಮೊದಲ ಚಿತ್ರದಲ್ಲೇ ಸರಳ ಸಹಜ ಅಭಿನಯದ ಮೂಲಕ ಕನ್ನಡ ಚಿತ್ರರಸಿಕರ ಮನಸ್ಸನ್ನು ಗೆಲ್ಲುತ್ತಾರೆ. ಶ್ರದ್ದೆ, ಸಹನೆ, ಧೈರ್ಯ, ನಿರ್ದೇಶಕರ ಮನ ಗೆಲ್ಲುತ್ತದೆ. ತಂದೆ "ಪುಟ್ಟಸ್ವಾಮಯ್ಯನವರು" ನನ್ನ ಮಗ ರಾಜಕುಮಾರ ಇದ್ದಹಾಗೆ ಇದ್ದಾನೆ ಅವನಿಗೊಂದು ಪಾತ್ರಕೊಡಿ" ಎಂದು ಕೇಳಿದ ನೆನಪಲ್ಲಿ ಸಿಂಹರವರು ಮುತ್ತುರಾಜುನನ್ನು 'ರಾಜಕುಮಾರ' ಎಂಬ ಹೆಸರಿನಿಂದ ಕರೆಯುತ್ತಾರೆ. ಅಂದಿನಿಂದ ಮುತ್ತುರಾಜು ರಾಜಕುಮಾರನಾಗುತ್ತಾನೆ. ತಮ್ಮ ಹೆಸರನ್ನು ಬದಲಿಸಲು ಮುತ್ತಣ್ಣನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ನಿರ್ದೇಶಕರು ಸರಿಯಾದ ಆಯ್ಕೆ ತೀರ್ಮಾನ ಮಾಡಿದ್ದಾರೆಂದು ನಂಬಿ ನಿರ್ದೇಶಕರ ಮಾತು ಮೀರದೇ ಅವರು "ರಾಜಕುಮಾರ್" ಆಗಿ ಪರಿವರ್ತನೆಯಾಗುತ್ತಾರೆ. ನಿದೇಶಕರು ಮುತ್ತುರಾಜು ನಿನ್ನನ್ನು ಕಂಬಕ್ಕೆ ಕಟ್ಟುತ್ತೇವೆ, ಚಾಟಿ ಏಟು ಹೊಡೆಯುತ್ತೇವೆ, ನಿನ್ನ ಮುಂದೆ ಸೀಮೆ ಎಣ್ಣೆ ಹಾಕಿ ಬೆಂಕಿ ಹಚ್ಚುತ್ತೇವೆ ಎಲ್ಲವನ್ನು ಸಹಿಸಿಕೊಳ್ಳಬೇಕು" ಎಂದರು. ಅದಕ್ಕೆ ಮುತ್ತಣ್ಣ ಹೂಂ ಹೂಂ ಎಂದ, ಬೇರೆ ಮಾತೆ ಇಲ್ಲ. "ಅನನ್ಯ ಭಾವದಿಂದ ಶಿವನನ್ನು ಸ್ತುತಿಸುವಾಗ ಆ ಕರುಣಾ ಮೂರ್ತಿಯ ಕಣ್ಣೀರು ಬಿಡುತ್ತಿರುವುದನ್ನು ಕಂಡು ಪರಿತಾಪದಿಂದ ಕನಿಕರಗೊಂಡು ಅವನನ್ನು ಸಮಾಧಾನ ಪಡಿಸುತ್ತಾ ನಿನ್ನ ಕಣ್ಣುಗಳನ್ನು ಅವನಿಗೆ ಅರ್ಪಿಸುವಾಗ ನಿನ್ನನ್ನೇ ಮರೆತು ಕಣ್ಣಪ್ಪನೇ ಆಗಿರಬೇಕು ಎಂದರು. ಅದಕ್ಕೆ ಹೂಂ ಎಂದರು. ಇವರು ಕೇವಲ ಹೂಂಗುಟ್ಟಲಿಲ್ಲ. ನಿರ್ದೇಶಕರ ನಿರೀಕ್ಷೆಗೆ ಮೀರಿ ಸಹಜ ಅಬಿನಯ ನೀಡಿದರು. ಸಂಪೂರ್ಣವಾಗಿ ಕಣ್ಣಪ್ಪನೇ ಆಗಿ ಹೋದರು."[೧೧]

ಜಿ.ವಿ. ಅಯ್ಯರ್, ನರಸಿಂಹರಾಜು, ಬಿಂದ್ರ ಶಾಸ್ತ್ರಿ, ಸಂಧ್ಯಾ, ರಾಜಿ ಸುಲೋಚನ ಮತ್ತು ಪಂಡರಿಬಾಯಿ ಮುಖ್ಯ ತಾರಾಗಣದಲ್ಲಿದ್ದರು. ಸುದರ್ಶನ್‌ರವರ ಸಂಗೀತ, ಲಾವಣಿ ವಿದ್ವಾಂಸ ಆನೇಕಲ್ ನಂಜಪ್ಪನವರು, ಗೀತೆಗಳನ್ನು ರಚಿಸಿದ್ದರು. ಚಿತ್ರವು ೧೯೫೪ ರಲ್ಲಿ ಬಿಡುಗಡೆ ಹೊಂದಿದಾಗ ಕನ್ನಡ ಚಿತ್ರರಂಗದಲ್ಲಿ ಹೊಸ ಶಕೆಯು ಆರಂಭವಾಯಿತು. ಕನ್ನಡಕ್ಕೆ ಅಗತ್ಯವಿರುವ ಸಮರ್ಥ ನಾಯಕನ ಭರ್ಜರಿ ಪ್ರವೇಶವನ್ನು ಕನ್ನಡಿಗರು ಸಂಭ್ರಮಾತಿರೇಕದಿಂದಲೇ ಆಹ್ವಾನಿಸಿ ಮನೆ ಮನ ಮಂದಿರಗಳಲ್ಲಿ ರಾಜಣ್ಣನವರಿಗೆ ಸ್ಥಾನವನ್ನು ಕಲ್ಪಿಸಿದರು. ಜಿ.ವಿ. ಅಯ್ಯರ್ ಹಾಗೂ ನರಸಿಂಹರಾಜು ರವರ ಪಾತ್ರಗಳು ಅಪಾರ ಮೆಚ್ಚುಗೆ ಪಡೆದವು. ಮೊದಲ ಚಿತ್ರಕ್ಕೆ ಅವರ ಸಂಭಾವನೆ ೧೮೦೦ ರೂಪಾಯಿಗಳು. ೧೯೫೬ರ ಪ್ರಾದೇಶಿಕ ಚಿತ್ರಗಳಿಗೆ ನೀಡುವ ರಾಷ್ಟ್ರಪ್ರಶಸ್ತಿಯನ್ನು ಪಡೆದುಕೊಂಡ ಬೇಡರ ಕಣ್ಣಪ್ಪ ಆ ಗೌರವ ಗಳಿಸಿದ ಮೊದಲ ಕನ್ನಡ ಚಿತ್ರವೂ ಆಗಿ ದಾಖಲೆ ನಿರ್ಮಿಸುತ್ತದೆ.

ಈ ಚಿತ್ರ ಎಷ್ಟು ಯಶಸ್ಸು ಕಂಡಿತು ಎಂದರೆ ಪುನಃ ಎ.ವಿ.ಎಂ. ಸಂಸ್ಥೆ ಇದೆ ಚಿತ್ರವನ್ನು ತೆಲುಗಿನಲ್ಲಿ ನಿರ್ಮಾಣ ಮಾಡಿದರು. ಕಾಳಹಸ್ತಿ ಮಹಾತ್ಯಂ ಎಂಬುದು ಚಿತ್ರದ ಹೆಸರು. ಇದಕ್ಕೂ ರಾಜಣ್ಣನವರೇ ನಾಯಕರು. ಹೀಗೆ ರಾಜಣ್ಣನವರು ತಮ್ಮ ಜೀವಿತದ ಅವಧಿಯಲ್ಲಿ ಒಂದೇ ಒಂದು ಅನ್ಯ ಭಾಷೆ ಸಿನೆಮಾದಲ್ಲಿ ನಟಿಸಿದ್ದಾರೆ. ಇದಾದ ನಂತರ ಮುಂದೆ ಸಂಪೂರ್ಣವಾಗಿ ಕನ್ನಡ ಭಾಷೆಯಲ್ಲಿಯೇ ನಟಿಸಿ ತಮ್ಮತನವನ್ನು ಮೆರೆದ ಕಲಾವಿದರಾಗಿ ಕಂಗೊಳಿಸಿದ್ದು ಈಗ ಇತಿಹಾಸ. ಈ ಚಿತ್ರ ಭಾರಿ ಯಶಸ್ಸು ಕಂಡರೂ ತಮ್ಮ ಎಡರನೇ ಚಿತ್ರಕ್ಕಾಗಿ ಪುನಃ ರಾಜಣ್ಣನವರು ಕಾಯಬೇಕಾಗುತ್ತದೆ. ಈ ಮಧ್ಯೆ ಅವರು ಪುನಃ ನಾಟಕಕ್ಕೆ ಮರಳುತ್ತಾರೆ. ಗೌತಮ ಬುದ್ಧ, ರಾಮ, ಶ್ರೀಕೃಷ್ಣ, ಎಚ್ಚಮ ನಾಯಕ ಮುಂತಾದ ನಾಯಕ ಪಾತ್ರಗಳು ಅವರಿಗೆ ಅನಾಯಾಸವಾಗಿ ದೊರಕುತ್ತವೆ. ಮುತ್ತರಾಜು ಮೊದಲು ಸುಬ್ಬಯ್ಯ ನಾಯ್ಡು. ಅಚ್ಯುತರಾಯರನ್ನು ಅನುಸರಿಸಿದರೂ, ಸಹ ಕ್ರಮೇಣ ತನ್ನದೇ ಆದ ಪಡಿಯಚ್ಚಿಗೆ ಆ ಪಾತ್ರಗಳನ್ನು ಎರಕ ಹೊಯ್ದುಕೊಂಡ. ವಿಶ್ವಕಲಾ ಸಂಸ್ಥೇಯ ವಿಶ್ವನಾಥ ಶೆಟ್ಟರ "ಸೋದರಿ" ಚಿತ್ರ ರಾಜಣ್ಣನವರ ಎರಡನೇ ಚಿತ್ರ, ಟಿ.ವಿ. ಸಿಂಗ್ ಠಾಕೂರ್‌ರವರು ಈ ಚಿತ್ರದ ನಿರ್ದೇಶಕರು.

೧೯೫೬ ರ ಸಮಯ ಕರ್ನಾಟಕ ಏಕೀಕರಣದ ವರ್ಷ. ಆ ಹೊತ್ತಿಗೆ ೫೦ಕ್ಕೂ ಹೆಚ್ಚಿನ ಕನ್ನಡ ಚಿತ್ರಗಳು ಬಿಡುಗಡೆಯಾಗಿದ್ದವು. ಕನ್ನಡೇತರರು ಕನ್ನಡ ಚಿತ್ರವನ್ನು ಹೆಚ್ಚಾಗಿ ನಿರ್ಮಾಣ ಮಾಡುತ್ತಿದ್ದರು. ಜನರಿಗೆ ಕನ್ನಡ ಚಿತ್ರಗಳು ಆಗತಾನೆ ಹತ್ತಿರವಾಗತೊಡಗಿದ್ದವು. ಚಿತ್ರ ನಿರ್ಮಾಣ ಸಂಪೂರ್ಣ ಮದ್ರಾಸಿನಲ್ಲಿ ಕೇಂದ್ರೀಕೃತವಾಗಿತ್ತು. ಏಕೀಕರಣದ ನಂತರ ಉದಯಿಸಿದ ಮೈಸೂರು ರಾಜ್ಯದಲ್ಲಿ ಕನ್ನಡದ ಉಳಿವಿನ ಪ್ರಶ್ನೆ ಎಲ್ಲ ಕಡೆ ಕೇಳಿಬರುತ್ತಿತ್ತು. ಕನ್ನಡ ಭಾಷೆಯ ಅಳಿವು, ಉಳಿವು ಹೋರಾಟದ ಬಗ್ಗೆ ಜನರು ಜಾಗೃತರಾಗುತ್ತಿದ್ದರು. ಕನ್ನಡ ಚಿತ್ರಗಳು ನಿಧಾನವಾಗಿ ನೆಲೆಯೂರಲು ಆರಂಭಿಸಿದ್ದವು ಬೇಡರ ಕಣ್ಣಪ್ಪ ರಾಷ್ಟ್ರ ಪ್ರಶಸ್ತಿ ಪಡೆದದ್ದು ಎಲ್ಲರಿಗೂ ಸಂತಸ ತಂದಿತ್ತು. ಕನ್ನಡ ಚಿತ್ರಗಳತ್ತ ಜನ ಮುಖ ಮಾಡತೊಡಗಿದ್ದರು. ಕನ್ನಡಮಯ ವಾತಾವರಣವನ್ನು ನಿರ್ಮಾಣ ಮಾಡಲು ಕನ್ನಡ ಚಿತ್ರಗಳು ಮೊದಲ ಹೆಜ್ಜೆಯನ್ನು ಇಡಲು ಆರಂಭಿಸಿದ್ದವು. ಕನ್ನಡ ಚಿತ್ರ ಕಲಾವಿದರಿಗೆ ಜನರ ಮಧ್ಯೆ ಗೌರವಗಳು ಲಭಿಸಲಾರಂಭಿಸಿತು.

ಇದೆ ಸಂದರ್ಭದಲ್ಲಿ ರಾಜಣ್ಣವರ ೨ನೇ ಚಿತ್ರ ಸೋದರಿ ಬಿಡುಗಡೆಯಾಗಿತ್ತು. ಚಿತ್ರ ನೋಡಲು ರಾಜಣ್ಣನವರು ಹೋಗಿದ್ದರು. ಆನರು ಪ್ರೀತಿಯಿಂದ ಬರಮಾಡಿಕೊಂಡು ವಿರಾಮದ ವೇಳೆ ರಾಜಣ್ಣನವರಿಗೆ ಶಾಲು ಹೊದೆಸಿ ಗೌರವಿಸಿದರು. ಕನ್ನಡ ಭಾಷೆಯನ್ನು ಬೆಳೆಸಿದ ಗೌರವ ನಿಮ್ಮದು ಎಂದು ಹಾಡಿ ಹೊಗಳಿದರು. ಮುತ್ತಣ್ಣನಿಗೆ ಇದು ಹೊಸ ಅನುಭವ, ನನ್ನಂತಹ ಸಾಮಾನ್ಯ ವ್ಯಕ್ತಿ ಕನ್ನಡ ಭಾಷೆಗೆ ಏನು ಮಾಡಬಹುದು ಎಂಬ ಪ್ರಶ್ನೆ ಅವರನ್ನ ಕಾಡಿತು. ಈ ಗೌರವ ಅವರಿಗೆ ಭಾಷೆಯ ಬಗ್ಗೆ ಜವಾಬ್ದಾರಿಯನ್ನು ಹೆಚ್ಚಿಸಿತು. ಅಂದೇ ಕನ್ನಡೇತರ ಚಿತ್ರಗಳಲ್ಲಿ ನಟಿಸುವುದಿಲ್ಲ ಎಂದು ನಿರ್ಧಾರ ತೆಗೆದುಕೊಂಡರು. ತನ್ನ ಉಸಿರಿರುವ ತನಕ ಕನ್ನಡ ತಾಯಿಯ ಸೇವೆ ಮಾಡುವುದಾಗಿ ಪ್ರತಿಜ್ಞೆ ಮಾಡಿದರು. ಹಾಗೆಯೇ ನಡೆದುಕೊಂಡರು. ಕ್ರಮೇಣ ಕನ್ನಡ ಚಿತ್ರಗಳು ರಾಜಣ್ಣನವರನ್ನು ಹುಡುಕಿಕೊಂಡು ಬಂದವು. ಭಕ್ತ ವಿಜಯ, ಆನಂತರ ಹರಿಭಕ್ತ ತೆರೆಗೆ ಬಂದಿತು. ಹರಿಭಕ್ತದಲ್ಲಿ ಅವರು ಎರಡು ಶ್ಲೋಕಗಳನು ಹಾಡಿದ್ದು, "ತಾಯಿ ತಂದೆಯ ಸೇವೆಯ ಯೋಗ" "ದೇವ ದರುಶನವ ನೀಡೆಯಾ" ಈ ಗೀತೆಗಳು ಜನಪ್ರಿಯಗೊಂಡವು. ಓಹಿಲೇಶ್ವರ ಚಿತ್ರದಲ್ಲಿ "ಶರಣು ಶಂಭೋ ಶಿವ ಶರಣು ಶಂಭೋ" ಗೀತೆಯಲ್ಲಿ ಹಾಡಿದರು. ಆದರೆ ಪಿ.ಬಿ. ಶ್ರೀನಿವಾಸ್‌ರವರು ಮೊದಲು ಬಾರಿಗೆ ರಾಜಣ್ಣನವರಿಗಾಗಿ ಹಾಡಿದರು. "ನಾ ಪಾಪವದೇನ ಮಡಿದನೋ" ಎಂಬ ಗೀತೆ ರಾಜಣ್ಣನವರ ಧ್ವನಿಗೆ ಹತ್ತಿರವಾಗಿತ್ತು. ಹೀಗೆ ಪಿ.ಬಿ. ಶ್ರೀನಿವಾಸ್ ರಾಜಣ್ಣನವರ ಧ್ವನಿಯಾದರು.

ಪ್ರಯಾಣ ಹೀಗೆಯೇ ಮುಂದುವರೆದರೂ ನಾಟಕವನ್ನು ಅವರೆಂದೂ ಬಿಟ್ಟವರಲ್ಲ. ಬಾಲಕೃಷ್ಣ, ನರಸಿಂಹರಾಜು, ಅಯ್ಯರ್ ಮುಂತಾದವರೊಂದಿಗೆ ಕನ್ನಡ ಚಲನಚಿತ್ರ ಕಲಾವಿದರ ಸಂಘ ಕಟ್ಟಿ ಊರೂರು ತಿರುಗುತ್ತಾ, ಚಲನಚಿತ್ರದ ಬಿಡುವಿನಲ್ಲಿ ನಾಟಕಗಳನ್ನು ಮಾಡತೊಡಗಿದರು. ೧೯೫೭ ರಲ್ಲಿ ರಾಯರ ಸೊಸೆ ಬಿಡುಗಡೆಯಾಯಿತು. ಇದು ಇವರ ಸಾಮಾಜಿಕ ಚಿತ್ರ ಅವರ ಕೇಶರಾಶಿಯನ್ನು ಕತ್ತರಿಸಿ ಕ್ರಾಪ್ ಕಟಿಂಗ್ ಮಾಡಿ ಸುಂದರವಾಗಿ ಕಾಣುವಂತೆ ಮಾಡಲಾಯಿತು. ಸ್ಟಾರ್‌ಗಳಿಗೆ ಕಟ್ಟಿಂಗ್ ಮಾಡಿದ್ದ ರಾಜು ಎಂಬ ಕ್ಷೌರಿಕ ರಾಜುರವರ ಹೇರ್ ಡ್ರೆಸರ್ ಆದ. ಸತಿ ನಳಾಯಿನಿ, ಭೂಕೈಲಾಸ, ಶ್ರೀ ಕೃಷ್ಣಗಾರುಡಿ, ಮುಂತಾದ ಪೌರಾಣಿಕ ಚಿತ್ರಗಳು ಒಂದಕ್ಕಿಂತ ಒಂದು ಸುಂದರವಾಗಿ ಮೂಡಿ ಬರತೊಡಗಿದವು. ಹಳ್ಳಿಗಾಡಿನ ಚಿತ್ರ, ಅಣ್ಣ ತಂಗಿ, ಚಿತ್ರ ಗ್ರಾಮೀಣ ಪ್ರೇಕ್ಷಕರನ್ನು ರಂಜಿಸುತ್ತದೆ. ಮುಂದೆ ಹೊನ್ನಪ್ಪ ಭಾಗವತರೊಂದಿಗೆ ಜಗಜ್ಯೋತಿ ಬಸವೇಶ್ವರ ಸಿನೆಮಾದಲ್ಲಿ ರಾಜಣ್ಣ ಅಭಿನಯಿಸುತ್ತಾರೆ. ಈ ಚಿತ್ರವೂ ನಾಟಕದಿಂದಲೆ ಪ್ರೇರಿತವಾದದ್ದು. ನಾಟಕದಲ್ಲಿಯೂ ರಾಜಣ್ಣ ರಾಜ ಬಿಜ್ಜಳ ಪಾತ್ರವಹಿಸುತ್ತಿದ್ದರು. ಸಿನೆಮಾದಲ್ಲಿಯೂ ಅದೇ ಪಾತ್ರ ವಹಿಸುತ್ತಾರೆ. ಜನಪ್ರಿಯ ಜೋಡಿ ದೊರೆ ಭಗವಾನ್ ಈ ಚಿತ್ರದ ಸಹ ನಿರ್ದೇಶಕರಾಗಿರುತ್ತಾರೆ. ಮುಂದೆ ಈ ಜನಪ್ರಿಯ ನಿರ್ದೇಶಕರು ರಾಜಣ್ಣನವರ ಹಲವಾರು ಚಿತ್ರಗಳನ್ನು ನಿರ್ದೇಶಿಸುತ್ತಾರೆ. ಮಹಿಷಾಸುರ ಮರ್ದಿನಿ, ಒಂದು ಅದ್ಭುತ ಚಿತ್ರ, ನಿರ್ದೇಶಕ ಬಿ.ಎಸ್. ರಂಗರವರು ರಾಜಣ್ಣನವರ ಅಪ್ರತಿಮ ಪ್ರತಿಭೆಯನ್ನು ಕನ್ನಡ ಸಿನೆಮಾಕ್ಕೆ ಪರಿಚಯಿಸುತ್ತಾರೆ. ಮಹಿಷ ರಾಕ್ಷಸ, ಈ ರಾಕ್ಷಸನನ್ನು ಚಾಮುಂಡಿ ದೇವಿ ಸಂಹರಿಸುತ್ತಾಳೆ. ರಾಜಣ್ಣನವರದು ಒಂದು ಖಳನಾಯಕ ಪಾತ್ರ, ಅಬ್ಬರಿಸಿ ಬೊಬ್ಬಿರಿಯುವ ಪಾತ್ರ, ಈ ಪಾತ್ರ ತನಗೆ ತುಂಬಾ ತೃಪ್ತಿ ತಂದುಕೊಟ್ಟಿತು ಎಂದು

ರಾಜಣ್ಣನವರು ಹಲವಾರು ಬಾರಿ ಹೇಳಿದ್ದುಂಟು. ಎಸ್. ಜಾನಕಿಯವರೊಂದಿಗೆ "ತುಂಬಿತು ಮನವ ತಂದಿತು ಸುಖವ ಪ್ರೇಮದ ಗಾಳಿ ನನ್ನ ಜೀವನ ಮರಳಿ" ಎಂಬ ಯುಗಳ ಗೀತೆಯನ್ನು ಹಾಡುತ್ತಾರೆ. ಇದು ಇವರ ಪ್ರಥಮ ಯುಗಳ ಗೀತೆ.

ಚಲನಚಿತ್ರದ ಗೆಲುವು ಹೀಗೆಯೇ ಮುಂದುವರೆಯಿತು ಎಂದು ಹೇಳಲು ಬರುವುದಿಲ್ಲ. ಒಂದಿಷ್ಟು ಕಾಲ ಆರ್ಥಿಕ ಪರಿಸ್ಥಿತಿ ತಲೆದೋರುತ್ತದೆ. ಚಿತ್ರ ನಿರ್ಮಾಣ ನಿಧಾನವಾಗುತ್ತದೆ. ಅಂದಿನ ದಿನಗಳಲ್ಲಿ ಜೀವನ ನಿರ್ವಹಣೆ ಕೂಡ ಕಷ್ಟವಾಗಿ ತಲೆದೋರುತ್ತದೆ. ಇದೇ ಸಮಯದಲ್ಲಿ ನಾಟಕವಾಡಿ ಉಳಿಸಿದ ರೂ.೨೫,೦೦೦ ಹಣದಿಂದ ಕನ್ನಡ ಚಲನಚಿತ್ರ ಕಲಾವಿದರ ಸಂಘ "ರಣಧೀರ ಕಂಠೀರವ" ಎಂಬ



ಅದ್ಭುತ ಚಿತ್ರವನ್ನು ನಿರ್ಮಾಣ ಮಾಡುತ್ತದೆ. ರಾಜಣ್ಣನವರ ಪಾಲಿಗೆ ಮೊದಲ ಐತಿಹಾಸಿಕ ಚಿತ್ರ ರಣಧೀರ ಕಂಠೀರವ ನರಸರಾಜ ಒಡೆಯರ್ ಪಾತ್ರ, ಚಿತ್ರಮಂದಿರ ಸಿಗದೇ ಹಿಮಾಲಯ ಚಿತ್ರಮಂದಿರದಲ್ಲಿ ಚಿತ್ರ ಬಿಡುಗಡೆಯಾಗುತ್ತದೆ. ನಂತರ ನಿರ್ಮಾಪಕರು ಚಿತ್ರಮಂದಿರದ ಸಮಸ್ಯೆ ತೋಡಿಕೊಂಡಾಗ "ಭಾರತ್" ಚಿತ್ರ ಮಂದಿರದಲ್ಲಿಯೂ ಈ ಚಿತ್ರ ಬಿಡುಗಡೆಯಾಗುತ್ತದೆ ಕನ್ನಡ ಭಾಷೆಯ ಚಿತ್ರಗಳಿಗೆ ಬಂದ ಸಂಕಷ್ಟ ಕಂಡು ಚಿತ್ರಮಂದಿರದ ಮಾಲೀಕರಾದ ಷರೀಫ್‌ರವರು ಇನ್ನು ಮುಂದೆ ಕೇವಲ ಕನ್ನಡ ಚಿತ್ರಗಳನ್ನು ಬಿಡುಗಡೆ ಮಾಡುವ ನಿರ್ಧಾರ ಮಾಡುತ್ತಾರೆ.

ಭಕ್ತ ಕನಕದಾಸ, ಚಿತ್ರದ ಅಭಿನಯಕ್ಕೆ ರಾಷ್ಟ್ರಪತಿ ಪದಕ ಪಡೆದ ರಾಜಣ್ಣನವರು ಮುಂದೆ ರಾಣಿ ಹೊನ್ನಮ್ಮ, ಕಿತ್ತೂರು ಚೆನ್ನಮ್ಮ ನಂತಹ ಐತಿಹಾಸಿಕ ಚಿತ್ರ ಅಭಿನಯಿಸುತ್ತಾರೆ. ಜಾನಪದ ಶೈಲಿಯ ಆಶಾಸುಂದರಿ, ದಶಾವತಾರ, ಎನ್ನುವ ಪೌರಾಣಿಕ, ಶ್ರೀ ಶೈಲ ಮಹಾತ್ಮೆ ಎನ್ನುವ ಭಕ್ತಿಪ್ರಧಾನ ಚಿತ್ರಗಳು ಜನಮನ್ನಣೆ ಪಡೆಯುತ್ತವೆ. ಕಣ್ತೆರೆದು ನೋಡು, ಕೈವಾರ ಮಹಾತ್ಮೆ, ನಾಗಾರ್ಜುನ ಚಿತ್ರಗಳು ಬಿಡುಗಡೆಯಾಗುತ್ತವೆ. ರಾಜಣ್ಣನವರು ಅತ್ಯಂತ ಬ್ಯುಸಿ ನಟರಾಗುತ್ತಾರೆ. ಪೂರ್ಣ ಪ್ರಮಾಣದಲ್ಲಿ ಸಿನೆಮಾದಲ್ಲಿ



ಮುಳುಗಿ ಹೋಗುತ್ತಾರೆ. ೧೯೬೧ ರಲ್ಲಿ ಬಂದ ಪ್ರಚಂಡ ಮಳೆಗೆ ಇಡೀ ಕರ್ನಾಟಕ ತತ್ತರಿಸಿ ಹೋಗುತ್ತದೆ. ಸಂಕಷ್ಟದಲ್ಲಿ ಇದ್ದವರಿಗೆ ಸಹಾಯ ಮಾಡಲು ಕಲಾವಿದರ ಸಂಘ ಇಡೀ ಕರ್ನಾಟಕದಲ್ಲಿ ಸಂಚರಿಸಿ ರಸಮಂಜರಿ ಕಾರ್ಯಕ್ರಮವನ್ನು ನಡೆಸಿಕೊಡುತ್ತದೆ. ಇದರಿಂದ ಸಂಗ್ರಹವಾದ ೩೫,೦೦೦ ರೂ.ಗಳನ್ನು ಅಂದಿನ ಮುಖ್ಯಮಂತ್ರಿಗಳಾಗಿದ್ದ ಬಿ.ಡಿ ಜತ್ತಿರವರಿಗೆ ಅರ್ಪಿಸಿ ಜನರಿಗೆ ನೆರವಾಗುತ್ತಾರೆ.

ಅನ್ಯ ಭಾಷೆ ಚಿತ್ರಗಳು ಕನ್ನಡಕ್ಕೆ ಡಬ್ ಆಗಿ ಬರಲು ಯತ್ನಿಸಿದಾಗ ಅವುಗಳನ್ನು ತಡೆಯಲು ಹೋರಾಟ ಆರಂಭವಾಗುತ್ತದೆ. ಅ.ನ.ಕೃ, ಮ.ರಾಮಮೂರ್ತಿ, ವಾಟಾಳ್ ನಾಗರಾಜ್, ಮುಂತಾದವರು ಈ ಹೋರಾಟದ ಮುಂಚೂಣಿಯಲ್ಲಿರುತ್ತಾರೆ. ಇವರೊಂದಿಗೆ ರಾಜಣ್ಣನವರು ಕೈ ಜೋಡಿಸುತ್ತಾರೆ. ಡಬ್ಬಿಂಗ್ ಭೂತವನ್ನು ಕರ್ನಾಟಕದಿಂದ ಹೊರದಬ್ಬುತ್ತಾರೆ. ೧೯೬೨ ರಲ್ಲಿ ಗಾಳಿಗೋಪುರ ತೆರೆಕಾಣುತ್ತದೆ. ಇದರಲ್ಲಿ ರಾಜಣ್ಣ-ಕಲ್ಯಾಣ್-ಉದಯ ಕುಮಾರ್ ಮೂವರು ಒಟ್ಟಾಗಿ ಅಭಿನಯಿಸುತ್ತಾರೆ. ಭೂದಾನದಲ್ಲಿ ವೃದ್ಧನ ಪಾತ್ರದಲ್ಲಿ ರಾಜಣ್ಣನವರು ಕಾಣಿಸಿಕೊಳ್ಳುತ್ತಾರೆ. ಆನಂತರ ಸ್ವರ್ಣಗೌರಿ ಬಿಡುಗಡೆಯಾಗುತ್ತದೆ. ನಂತರ ದೇವ ಸುಂದರಿ ಬಹುತೇಕ ಎಲ್ಲ ಚಿತ್ರಗಳು ಯಶಸ್ಸಿನ ತುಟ್ಟ ತುದಿಗೇರುತ್ತದೆ. ಕನ್ನಡ ಚಿತ್ರರಂಗದಲ್ಲಿ ಹೊಸ ಅಲೆ ಬೀಸತೊಡಗುತ್ತದೆ. ಕಥಾವಸ್ತು ಐತಿಹಾಸಿಕ, ಜಾನಪದ, ಹಾಗೂ ಪೌರಾಣಿಕದಿಂದ ಸಾಮಾಜಿಕ ಚಿತ್ರಗಳ ಕಡೆಗೆ ಬದಲಾಗುತ್ತದೆ. ಮೊಟ್ಟಮೊದಲ ಬಾರಿಗೆ ಕೃಷ್ಣಮೂರ್ತಿ ಪುರಾಣಿಕರ ಧರ್ಮದೇವತೆ ಚಿತ್ರವನ್ನು ಕರುಣೆಯೇ ಕುಟುಂಬದ ಕಣ್ಣು ಎಂಬ ಹೆಸರಿನಲ್ಲಿ ಕಾದಂಬರಿ ಆಧಾರಿತ ಚಿತ್ರ ಬಿಡುಗಡೆಯಾಗುತ್ತದೆ. ಇಲ್ಲಿಂದ ಮುಂದೆ ರಾಜಣ್ಣನವರು ಸುಮಾರು ೩೨ ಕಾದಂಬರಿ ಆಧರಿತ ಚಿತ್ರಗಳಲ್ಲಿ ಅಭಿನಯಿಸುತ್ತಾರೆ. ಸಣ್ಣ ಕಥೆ, ನಾಟಕಗಳ ಆಧಾರಿತ ಚಿತ್ರಗಳು ಸಹಾ ಬಿಡುಗಡೆಯಾಗುತ್ತವೆ. ರಾಜಣ್ಣನವರ ಕೊನೆಯ ಚಿತ್ರ ಶಬ್ದವೇಧಿ ಚಿತ್ರವೂ ಸಹಾ ಕಾದಂಬರಿ ಆಧಾರಿತ ಚಿತ್ರ ಎಂದು ಹೇಳಲು ಹೆಮ್ಮೆಯೆನಿಸುತ್ತದೆ.

ಚಂದವಳ್ಳಿಯ ತೋಟ, ಮಲ್ಲಮ್ಮನ ಪವಾಡ, ಪುನರ್ಜನ್ಮ, ಎರಡು ಕನಸು, ಸಂಪತ್ತಿಗೆ ಸವಾಲ್ (ನಾಟಕ) , ಬಂಗಾರದ ಮನುಷ್ಯ, ಸಿಪಾಯಿ ರಾಮು, ಬಂಗಾರದ ಹೂ (ನಾಟಕ), ಚಕ್ರತೀರ್ಥ, ದೇವರ ಮಕ್ಕಳು, ಸ್ವಯಂವರ, ಮಯೂರ, ನಾನಿನ್ನ ಬಿಡಲಾರೆ, (ಸಣ್ಣಕತೆ), ಸನಾದಿ ಅಪ್ಪಣ್ಣ, ಹುಲಿಯ ಹಾಲಿನ ಮೇವು, ಹೊಸ ಬೆಳಕು, ಕಾಮನಬಿಲ್ಲು, ಸಮಯದ ಗೊಂಬೆ, ಜ್ವಾಲಾಮುಖಿ, ಅನುರಾಗ ಅರಳಿತು, ಶೃತಿ ಸೇರಿದಾಗ, ಜೀವನ ಚೈತ್ರ, ಆಕಸ್ಮಿಕ, ಶಬ್ದವೇದಿ ಹೀಗೆ ಹಲವು ಸಿನೆಮಾಗಳು ಸಾಹಿತ್ಯಕ್ಕೂ ಸಿನೆಮಾಕ್ಕೂ ಉತ್ತಮ ಬೆಸುಗೆಯನ್ನು ತಂದುಕೊಟ್ಟಿವೆ. ಓದಲು ಬಾರದವರು ಸಿನೆಮಾ ನೋಡಿ ಆನಂದಿಸಿದ್ದಾರೆ.

ಈ ಕಾದಂಬರಿ ಆಧಾರಿತ ಚಿತ್ರಗಳಲ್ಲಿ ಜಾನಪದ ಅಂಶಗಳನ್ನು ಹುಡುಕುವುದ, ಸಂಶೋಧನೆ ಮಾಡುವುದು ನನ್ನ ಉದ್ದೇಶವಾಗಿದೆ. ಈ ವಿಷಯದ ಬಗ್ಗೆ ಮುಂದಿನ ಅಧ್ಯಾಯದಲ್ಲಿವಿಸ್ತಾರವಾಗಿ ವಿಶ್ಲೇಷಿಸಲಾಗಿದೆ.

**ಕೊನೆ ಟಿಪ್ಪಣಿ :**

೧. ಜಗನ್ನಾಥ ಬಹುಳೆ, ಡಾ. ರಾಜ್‌ಕುಮಾರ್ ದಂತಕಥೆ

೨. ಅದೇ ಪುಸ್ತಕ, ಪು.ಸಂ- ೯, ೧೦

೩. ಅದೇ ಪುಸ್ತಕ, ಪು.ಸಂ- ೧೧.

೪. ಅದೇ ಪುಸ್ತಕ, ಪು.ಸಂ- ೪೮.

೫. ಅದೇ ಪುಸ್ತಕ, ಪು.ಸಂ- ೪೯.

೬ ಪ್ರಹ್ಲಾದರಾವ್.ಅ.ನಾ., ಪಾರ್ವತಮ್ಮ ರಾಜ್‌ಕುಮಾರ್, ಪು.ಸಂ-೨೭

೭ ಅದೇ ಪುಸ್ತಕ, ಪು.ಸಂ- ೧೦೩.

೮. ಅದೇ ಪುಸ್ತಕ, ಪು.ಸಂ- ೧೦-೩೦

೯. ಅದೇ ಪುಸ್ತಕ, ಪು.ಸಂ- ೧೦೩.

೧೦. ಅದೇ ಪುಸ್ತಕ, ಪು.ಸಂ-೫೩

೧೧. ಅದೇ ಪುಸ್ತಕ, ಪು.ಸಂ-೬೦, ೬೧

## ಅಧ್ಯಾಯ : ನಾಲ್ಕು

### ಡಾ.ರಾಜ್‌ಕುಮಾರ್ ಅವರ ಕಾದಂಬರಿ ಆಧಾರಿತ ಚಲನಚಿತ್ರಗಳಲ್ಲಿ ಜಾನಪದೀಯ ಅಂಶಗಳು

೪.೧ ಡಾ.ರಾಜ್ ಅವರ ಚಲನಚಿತ್ರಗಳಲ್ಲಿ ಜಾನಪದೀಯ ನೋಟ

೪.೨ ಉಡುಪು ಮತ್ತು ಭಾಷೆ

೪.೩ ಡಾ.ರಾಜ್ ಅವರ ಸಿನಿಮಾಗಳಲ್ಲಿ ಮೌಲ್ಯ ಆಧಾರಿತ ಸಂಬಂಧಗಳು

೪.೪ ಡಾ.ರಾಜ್ ಅವರ ಚಲನಚಿತ್ರಗಳಲ್ಲಿ ಕೌಟುಂಬಿಕ ಸಂಬಂಧಗಳು

೪.೫ ಡಾ.ರಾಜ್ ಅವರ ಚಲನಚಿತ್ರಗಳಲ್ಲಿ ಸ್ತ್ರೀ ಸಂವೇದನೆ

೪.೬ ಡಾ.ರಾಜ್ ಅವರ ಚಿತ್ರಗಳಲ್ಲಿ ರಸತತ್ವ

# ಅಧ್ಯಾಯ ನಾಲ್ಕು

## ಡಾ.ರಾಜಕುಮಾರ ಅವರ ಕಾದಂಬರಿ ಆಧಾರಿತ ಚಲನಚಿತ್ರಗಳಲ್ಲಿ ಜಾನಪದೀಯ ಅಂಶಗಳು

**ಪೀಠಿಕೆ :**

ಸಿನಿಮಾಕ್ಕೆ ಮಾಂತ್ರಿಕ ಶಕ್ತಿಯೊಂದಿದೆ. ಜನಪದ ಕಣಜವಾದ ನಮ್ಮ ನೆಲದಲ್ಲಿ ಕತೆ ಹೇಳುವ ಕತೆ ಕಟ್ಟುವ, ಹಾಡುವ, ಕುಣಿಯುವ ಮನೋಧರ್ಮವಿದೆ. ಭಾರತದ ಉದ್ದಗಲಕ್ಕೂ ಪ್ರವಹಿಸುತ್ತಿರುವ ಇಂತಹ ಸಂದರ್ಭದಲ್ಲಿ ಜಾನಪದ ಅಂಶಗಳನ್ನು ಮುನ್ನಲೆಗೆ ತರುವ ಪ್ರಯತ್ನವಿದೆ. ಹಿಂದಿನಿಂದ ಮೂಕಿ–ಟಾಕಿ, ವಿಶಾಲಪರದೆ, ಗ್ರಾಫಿಕ್ಸ್, ತ್ರೀಡಿ, ಡಿಜಿಟಲ್ ಹೀಗೆ ಪ್ರೇಕ್ಷಕನ ಅಭಿರುಚಿ ತಕ್ಕಂತೆ ಬದಲಾವಣೆಯಾಗುತ್ತದೆ. ಈ ನಿಟ್ಟಿನಲ್ಲಿ ಡಾ.ರಾಜಕುಮಾರ ಅವರ ಅಭಿನಯದ ಮೂಲಕ ವ್ಯಕ್ತಗೊಂಡ ಕಾದಂಬರಿಗಳಲ್ಲಿ ಜಾನಪದೀಯ ಅಂಶಗಳು ಹಾಗೂ ಜನರಲ್ಲಿ ಮೂಡಿದ ಅಭಿರುಚಿಯ ಜೊತೆಗೆ ಸಾಮಾಜಿಕ ತತ್ವ ಹೊಂದಿದ ಸಂದೇಶ, ಪರಿಣಾಮವನ್ನು ಹುಡುಕುವುದಾಗಿದೆ. ಮುಖ್ಯವಾಗಿ ರಾಜಕುಮಾರರ ಚಿತ್ರಗಳು ಚಿತ್ರಮಂದಿರಗಳ ಮಾರ್ಪಾಡು, ನಾಯಕ ನಾಯಕೀಯರ ಕಲ್ಪನೆ ಹಾಡಿನ ಸೊಗಸು ಮೊದಲಾದುವೆಲ್ಲಾ ರೂಪಗೊಂಡಿರುವುದೇ ಬದಲಾಗುತ್ತಿರುವ ಅಭಿರುಚಿಗನುಗುಣವಾಗಿ ವಿಜ್ಞಾನವಾಗಿ ಆವಿಷ್ಕಾರಗೊಂಡು, ಕಲೆಯಾಗಿ ರೂಪ ಪಡೆದು ವಾಣಿಜ್ಯ ಉದ್ಯಮವಾಗಿ ನೇರ ಹಣಿಯಾಗುತ್ತಿರುವ ಸಿನಿಮಾ ಎಂಬ ಜಾದುವಿನ ಮ್ಯಾಜಿಕ್ ಡಾ.ರಾಜಕುಮಾರ್ ಚಿತ್ರಗಳು ಪ್ರಸ್ತುತವೆನಿಸುತ್ತವೆ. ಹಲವು ವರ್ಷಗಳು ಕಳೆದರೂ ರಾಜಕುಮಾರ್ ಚಿತ್ರಗಳು ಜನರಲ್ಲಿ ಪುಳಕವನ್ನು ಉಳಿಸಿಕೊಂಡಿವೆ.

ಡಾ.ರಾಜಕುಮಾರ್ ಅವರು ಒಬ್ಬ ಮಹಾನ್ ಚಿತ್ರ ಕಲಾವಿದ ಮಾತ್ರವಲ್ಲದೆ ಕರ್ನಾಟಕದ ಸಂಸ್ಕೃತಿಯಲ್ಲಿ ಬೆರೆತು ಹೋಗಿರುವ ಒಂದು ಧಾತುಸತ್ವವೆಂದೇ ಕನ್ನಡ ಜನತೆಯಲ್ಲಿ ಒಡಮೂಡಿದ್ದಾರೆ. ಕನ್ನಡ ನಾಡು ನುಡಿಗಳ ಹಿತಾಸಕ್ತಿಗಳಿಗೆ ಧಕ್ಕೆಯೊದಗಿದ ವಿಷಯ ಸಂದರ್ಭದಲ್ಲಿ ರಾಜ್‌ಕುಮಾರ್

ಜನಪದದ ಸಮಷ್ಟಿ ಶಕ್ತಿಯನ್ನು ಉಚ್ಚರಿಸಿದ್ದಾರೆ. ಸ್ವರಕ್ಷಣೆಗೆ ಸಜ್ಜಾಗುವಂತೆ ಜನರನ್ನು ಹುರಿದುಂಬಿಸುತ್ತಾರೆ. ಜಾತಿ ಮತ್ತು ಕಸುಬು, ಆಚಾರ ವಿಚಾರಗಳಲ್ಲಿ ನಿಮಿತ್ತ ಅಧ್ಯಯನದ ಬಿಕ್ಕಟ್ಟಿನಿಂದ ಬೇರ್ಪಟ್ಟವರನ್ನು ಇಡಿತನದ ಬಿಕ್ಕಟ್ಟಿನಲ್ಲಿ ಕಟ್ಟಿ ಅವರ ಚಲನಚಿತ್ರಗಳ ಮೂಲಕ ಏಕಧ್ಯೆಯಗಳಾಗಿ ಜನರಲ್ಲಿ ಒಡಮೂಡಿಸಿದ್ದಾರೆ. ರಾಜಕುಮಾರ್ ಅವರ ವ್ಯಕ್ತಿತ್ವ ನಿಜ ಜೀವನದಲ್ಲಿ ಹೇಗೆಯೋ ಹಾಗೆಯೇ ಅವರ ಚಲನಚಿತ್ರಗಳಲ್ಲಿ ಕೂಡ ಅಷ್ಟೇ ಮಹತ್ವದಿಂದ ಕೂಡಿದೆ.

ಡಾ.ರಾಜ್ ಅವರ ಅಭಿನಯದ ಚಿತ್ರಗಳು ಜಾನಪದೀಯ ಸೊಗಡನ್ನು ಬೀರುವಲ್ಲಿ ಜನಪದ ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದರಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿವೆ. ಇನ್ನು ಜಾನಪದ ಮೌಲ್ಯಗಳನ್ನು ಕಾಪಾಡುವಲ್ಲಿ ಚಿತ್ರಗಳು ಬಹಳ ಯಶಸ್ವಿಯಾಗಿವೆ. ಜೊತೆಗೆ ಮದುವೆಯಾದ ಹೆಣ್ಣುಮಗಳು ತವರು ಮನೆ ಚೆನ್ನಾಗಿರಲಿ ಎಂದು ಆಶಿಸುವುದು ಗಂಡನ ಮನೆಗೆ ಹೊರಡುವಾಗ ದುಃಖದಿಂದ ಕಣ್ಣೀರಿಡುವುದು ಸರ್ವಮಂಗಳದಂತಹ ಸಿನಿಮಾದಲ್ಲಿ ಕಂಡುಬರುತ್ತದೆ. ತನ್ನ ತಮ್ಮನೇ ತನ್ನ ಮಗಳನ್ನು ಮದುವೆ ಆಗಬೇಕು ಎನ್ನುವ ಅಕ್ಕ, ಮೂರು ಗಂಟು ಬಿದ್ದ ತಕ್ಷಣ ಗಂಡನ ಹಿಂದೆ ನಡೆಯುವ ಹೆಣ್ಣು ಮಗಳು ಇಲ್ಲಿದ್ದಾರೆ. ಇಷ್ಟವೋ ಕಷ್ಟವೋ ಗಂಡನೊಂದಿಗೆ ಕೊನೆಯ ಉಸಿರು ಇರುವವರೆಗೂ ಎನ್ನುವ ಮೌಲ್ಯವನ್ನು ರಾಜಣ್ಣನವರ ಎಲ್ಲಾ ಚಿತ್ರಗಳಲ್ಲಿ ಕಾಣಬಹುದು. ಹಾಗೆಯೇ ಮನೆ ಮುರಿಯಬಾರದು ಸಂಸಾರ ಒಡೆಯಬಾರದು ಅಣ್ಣ ತಮ್ಮಂದಿರು ಒಟ್ಟಾಗಿ ಬಾಳಬೇಕು ಎನ್ನುವ ಮೌಲ್ಯವನ್ನು ಎತ್ತಿಹಿಡಿಯುವ ಸಾರ್ವಕಾಲಿಕ ಚಿತ್ರ ಚಂದವಳ್ಳಿಯ ತೋಟ, ಒಂದು ತೆಂಗಿನ ಮರ ಒಂದು ಕುಟುಂಬವನ್ನು ಸಾಕುತ್ತದೆ. ಎನ್ನುವ ಸತ್ಯ ಚಿತ್ರದಲ್ಲಿದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಜಾನಪದ ನಂಬಿಕೆಗಳಿಗೆ ದ್ರೋಹ ಬಗೆಯದ ರೀತಿಯಲ್ಲಿ ಗ್ರಾಮೀಣ ಜನಪದೀಯ ಸಂಸ್ಕೃತಿಯನ್ನು ಅದರ ಸೊಗಡನ್ನು ಉಳಿಸಿ ಬೆಳಸುವಲ್ಲಿ ರಾಜಣ್ಣನವರ ಈ ಚಿತ್ರಗಳು ತಮ್ಮದೇ ಆದ ಕೊಡುಗೆ ನೀಡಿವೆ. ಈ ಚಲನಚಿತ್ರಗಳ ಮೂಲಕ ಜಾನಪದ ಸಂಸ್ಕೃತಿಯನ್ನು ಹರಡಬಹುದು. ಜೊತೆಗೆ ಜನಪದ ಸಿದ್ಧಾಂತವನ್ನು ಈ ಚಿತ್ರಗಳು ಪ್ರತಿಪಾದಿಸಿವೆ.

ಹಳ್ಳಿಯ ಚಿತ್ರಣ, ಹಳ್ಳಿಯ ಸೊಗಡು ಎದ್ದು ಕಾಣುವ ಚಿತ್ರ "ಸಂಪತ್ತಿಗೆ ಸವಾಲ್" ಹಳ್ಳಿ ಹಾದಿಯಲ್ಲಿ ಹೆಣ್ಣು ಮಕ್ಕಳು ಬಿಂದಿಗೆ ಹಿಡಿದು ಸಾಗಿದ್ದಾರೆ. ಮಕ್ಕಳು ಬುಗುರಿ ಆಡುತ್ತಿದ್ದಾರೆ. ಹುಲ್ಲಿನ ಹೊರೆ ಹೊತ್ತ ಹೆಣ್ಣು ಮಕ್ಕಳು ಅಲ್ಲೆ ಎತ್ತಿನ ಗಾಡಿಮುಂದೆ ಸಾಗಿದೆ. ಹುಲ್ಲಿನ ಬಣವೆ, ರಾಗಿ ತೂರುವ ರೈತರು, ಅಡಿಕೆ ತೋಟ, ಕಲ್ಲಂಗಡಿ ತೋಟ, ನೆಲದಲ್ಲಿ ಸೊಂಪಾಗಿ ಬೆಳೆದ ಹಣ್ಣು, ಎಲೆ ಎಲೆಗೂ ಕಾಯಿ. ಮಣ್ಣನ್ನು ನಂಬಿದರೆ ಭೂಮಿ ತಾಯಿ ತನ್ನ ಮಕ್ಕಳನ್ನು ಎಂದು ಕೈ ಬಿಡುವುದಿಲ್ಲ ಎನ್ನುವುದನ್ನು ಸಿನೆಮಾ ಸಾರಿ ಹೇಳುತ್ತದೆ. ಭಾರತ ದೇಶದ ೭೦% ಜನರು ಕೃಷಿ ಅವಲಂಬಿತರಾಗಿದ್ದಾರೆ. ಕೃಷಿಯ ಮಹತ್ವವನ್ನು ಕಷ್ಟ ಪಟ್ಟು ದುಡಿಯುವ ದುಡಿಮೆಯ ಮಹತ್ವವನ್ನು ಚಿತ್ರಗಳು ಸಾರಿವೆ. ಇಲ್ಲಿ ದುಡಿಮೆಯ ಹಿಂದೆ ತಾವು ನಂಬಿದ ಜಾನಪದ ಧರ್ಮ ಇದೆ ಎನ್ನುವ ತತ್ವವೂ ಇದೆ. ಹಾಗಾಗಿ ಹಳ್ಳಿಯ ಬದುಕಿನಲ್ಲಿ ಇವೆಲ್ಲಾ ಗಾಢವಾಗಿ ಬೆಳೆದಿದೆ. ಸಿನಿಮಾದ ಬೆಳಗಿನ ಜಾವದ ದೃಶ್ಯದಲ್ಲಿ ಕೊ. ಕೊ. ಕೊ. ಎಂದು ಕೂಗುವ ಕೋಳಿ ಬಾಗಿಲಿಗೆ ನೀರು ಹಾಕಿ ರಂಗೋಲಿ ಹಾಕುವ ಹೆಂಗಸರು ದನ ಕರುಗಳನ್ನು ಹೊಲಕ್ಕೆ

ಹೊಡೆದುಕೊಂಡು ಹೋಗುವ ರೈತರು, ಕೊಟ್ಟಿಗೆಯಲ್ಲಿ ಹಾಲು ಕರೆಯುವ ಮಹಿಳೆಯರು, ಬೆಳಗೆದ್ದು ದೇವರ ಫೋಟೋ ನೋಡಿ, 'ಶಿವಾ ಕಾಪಾಡಪ್ಪ' ಎಂದು ಕೇಳುವ ದೃಶ್ಯಗಳನ್ನು ಕಾಣಬಹುದು.

ಸಂಜೆ ಎಂದಾಗ ದನಕರುಗಳನ್ನು ಗೋಧೂಳಿ ಸಮಯದಲ್ಲಿ ಕೊಟ್ಟಿಗೆ ಸೇರುತ್ತಾ ಅಂಬಾ ಎಂದು ಕೂಗುತ್ತಾ ಧೂಳೆಬ್ಬಿಸುತ್ತಾ ಹೋಗುವ ದೃಶ್ಯ ನೇಗಿಲು ಹಿಡಿದು ಮನೆ ಕಡೆ ನಡೆದ ರೈತ, ಮುಳುಗುತ್ತಿರುವ ಸೂರ್ಯ ಇಂತಹ ದೃಶ್ಯಗಳು ಕಾಣುತ್ತವೆ. ಹಾಗೆಯೇ ಜಗಳ, ಕದನ, ಎಂದು ಬಂದಾಗ ಹೊಡೆದಾಡುವ, ಚೆನ್ನಾಗಿ ಬಾಯಿಗೆ ಬಂದಂತೆ ಬೈಯ್ಯುವ, ಗ್ರಾಮೀಣ ಬೈಗುಳಗಳ ಪುಂಖಾನುಪುಂಖ ಶಬ್ದಗಳು ಇಲ್ಲಿ ಕೇಳಸಿಗುತ್ತವೆ. ಪಂಚಾಯಿತಿ ಕಟ್ಟೆ, ಅಲ್ಲಿ ಹಿರಿಕರು ಕುಳಿತಿದ್ದಾರೆ. ಊರ ಗೌಡ ನ್ಯಾಯ ಪಂಚಾಯಿತಿ ಮಾಡುತ್ತಾನೆ. ಅರಳಿ ಕಟ್ಟೆಯ ಮೇಲೆ ಹಿರಿಯರು, ಮಹಿಳೆಯರು ಕುಳಿತಿದ್ದಾರೆ. ಆರೋಪ ಪ್ರತ್ಯಾರೋಪ ಕೇಳಿಸುತ್ತದೆ. ಗುಸು ಗುಸು ಸದ್ದು ಆಮೇಲೆ ಗೌಡರು ಎಲ್ಲರನ್ನು ಸುಮ್ಮನಿರಿಸಿ ತಪ್ಪು ಮಾಡಿದವನಿಗೆ ಛೀಮಾರಿ ಹಾಕುತ್ತಾರೆ. ದೇವರ ಕಾಣಿಕೆಗೆ ದಂಡ ಎಂದು ತಿಳಿಸಬಹುದು, ಊರಿಂದ ಬಹಿಷ್ಕಾರ ಹಾಕಬಹುದು. ಇಲ್ಲವೇ ಚಾಟಿ ಏಟಿನ ಶಿಕ್ಷೆ ಕೊಡಬಹುದು ಇನ್ನು ಹಲವು ನಿಯಮಗಳನ್ನು ಪಾಲಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಹಳ್ಳಿಗರು ಕಾನೂನು ಕೈ ಎತ್ತಿಕೊಳ್ಳದೆ ಕೋರ್ಟ್-ಕಛೇರಿ ಅಲೆಯದೆ ತಮ್ಮದೇ ಕಾನೂನು ರೂಪಿಸಿಕೊಂಡು ಬದ್ಧತೆಯಿಂದ ಇರುತ್ತಾರೆ. ಅವರು ಕೃಷಿ ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿಯಿಂದ ಸಂಪ್ರದಾಯದ ನೆಲೆಯಲ್ಲಿ ಇರುವವರು ಅವರಲ್ಲಿ ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು ಎಂಬ ನಂಬಿಕೆಯಿದೆ. ಭೂಮಿಯ ಮೇಲೆ ಭಾರ ಹಾಕಿ ನಂಬಿಕೆ ಇದ್ದರೆ ಎಂತಹ ಕಷ್ಟವನ್ನಾದರೂ ಗೆಲ್ಲಬಹುದು ಎನ್ನುವ ಸಿದ್ಧಾಂತ ಸಂಪತ್ತಿಗೆ ಸವಾಲ್ ಸಿನಿಮಾದಲ್ಲಿದೆ. ದುಡಿಮೆಯನ್ನು ನೆಚ್ಚಿಕೊಂಡು ಬಾಳುವ ಕೆಚ್ಚೆದೆಯ ಸಾತ್ವಿಕ ಮನೋಭಾವ ಅವರಲ್ಲಿ ಇದೆ. ಯಾರೂ ಅವರನ್ನು ಸೋಲಿಸಲು ಅಸಾಧ್ಯ ದೇವರ ಆರಾಧನೆಯಿಂದ ಎಲ್ಲವು ಸಿದ್ಧಿಸಿದೆ ಎಂಬ ಗಾಢ ನಂಬಿಕೆ ರಾಜಣ್ಣನವರ ಚಿತ್ರಗಳಲ್ಲಿ ಮೂಡಿಬಂದಿದೆ.

ಡಾ.ರಾಜ್ ಅವರ ಸಿನಿಮಾಗಳು ಸಮಾಜದ ಚೌಕಟ್ಟು ಮೀರದೇ ಸಮಾಜದ ವ್ಯವಸ್ಥೆಯನ್ನು ಪ್ರಶ್ನಿಸಿವೆ. ಅನ್ಯಾಯ ಮೋಸ ಕಷ್ಟವನ್ನೂ ಪ್ರೋತ್ಸಾಹಿಸದೆ ಅನ್ಯಾಯದ ವಿರುದ್ಧ ನೆಲೆಯಲ್ಲಿ ಪ್ರತಿಭಟಿಸಿವೆ. ಸತ್ಯ ನಂಬಿಕೆ, ಆದರ್ಶ, ನ್ಯಾಯ, ನೀತಿ, ಧರ್ಮ ಮತ್ತು ಮಾನವೀಯತೆಗೆ ಸಿನಿಮಾದಲ್ಲಿ ಇಂಬು ಕೊಡಲಾಗಿದೆ. ಈ ಚಿತ್ರಗಳು ಸಾರ್ವಕಾಲಿಕ ಚಿತ್ರಗಳಾಗಿದ್ದು ಎಲ್ಲಾ ಕಾಲಕ್ಕೂ ಮದ್ದು ಎನ್ನುವ ಸಂದೇಶದಿಂದ ಎಲ್ಲಾ ವರ್ಗದವರು ನೋಡಬೇಕಾದ ಅತ್ಯುತ್ತಮ ಚಿತ್ರಗಳಾಗಿವೆ.

ಡಾ.ರಾಜ್ ಅವರು ಜಾನಪದೀಯ ವಸ್ತುವನ್ನು ವೈಭವದಿಂದ ನಟಿಸಬಲ್ಲ ವ್ಯಕ್ತಿ. ಹಾಗೆಯೇ ಜನರ ಮೆಚ್ಚುಗೆಯ ಭಾಷೆಯೂ ಕೂಡ ಅಷ್ಟೆ. ಜಾನಪದೀಯ ಅಂಶ ಹೊಂದಿರುವ ಹಳ್ಳಿಯ ಚಿತ್ರವನ್ನು ಸೊಗಸಾಗಿ ಮೂಡಿಸಬಲ್ಲ ಚಿತ್ರ 'ಕರುಣೆಯೇ ಕುಟುಂಬದ ಕಣ್ಣು' ಚಿತ್ರ ಕೃಷ್ಣಮೂರ್ತಿ ಪುರಾಣಿಕರವರ 'ಧರ್ಮದೇವತೆ' ಕಾದಂಬರಿ ಆಧಾರಿತ ಚಿತ್ರವಾಗಿದೆ. ಈ ಚಿತ್ರದಲ್ಲಿ ಡಾ.ರಾಜ್ ಅವರು ಜಾನಪದ ಅಥವಾ ಜನಪದ ಎಂಬ ಹಿನ್ನಲೆಯಾಗಿ ವ್ಯಕ್ತಿತ್ವ ರೂಪಿಸಿಕೊಂಡಿದ್ದಾರೆ. ಅವರ ಅಭಿನಯ ಪ್ರತಿಯೊಬ್ಬ ಹಳ್ಳಿಗರ ಬದುಕು ನಮ್ಮ ಜೀವನವೇ ಎಂದು ತಿಳಿಯುವ ಮಟ್ಟಿಗೆ ಆ ಚಿತ್ರ ಮೂಡಿಬಂದಿದೆ. ಈ ಚಿತ್ರರಂಗದ

ಸಾಹಿತ್ಯ ಲೋಕದ ಕಣ್ಣಾಗಿ ನೋಡುವ ನೋಡುಗರ ದೃಷ್ಟಿಯನ್ನು ತನ್ನತ್ತ ಸೆಳೆದುಕೊಂಡಿದೆ. ಡಾ.ರಾಜ್ ಅವರ ಯಾವುದೇ ಪಾತ್ರ ಜನರ ಬದುಕಿನ ಪ್ರಶ್ನೆಯಾಗಿಟ್ಟುಕೊಂಡು ಒಳ್ಳೆಯ ಸಂಬಂಧ ನೆಲೆಯಾಗಿ ಮೂಡಿಸುತ್ತದೆ. ರಾಜ್ ಅವರು ಒಂದು ಮಾತು ಹೇಳುತ್ತಾರೆ, 'ಯಾವುದೇ ಮನುಷ್ಯ ಇನ್ನೊಬ್ಬರಿಗೆ ಮಾರ್ಗದರ್ಶನ ಮಾಡುತ್ತಾನೆ. ಆದರೆ ತನ್ನನ್ನು ತಾನು ಮಾರ್ಗದರ್ಶನ ಮಾಡಲಾರ' ಎಂಬ ಮಾತು ಸಮಾಜದ ಪ್ರತಿಯೊಬ್ಬನಿಗೆ ಮಹತ್ವವೆನಿಸುತ್ತದೆ.

## ೪.೧ ಡಾ.ರಾಜ್ ಅವರ ಚಲನಚಿತ್ರಗಳಲ್ಲಿ ಜಾನಪದೀಯ ನೋಟ :

ಡಾ.ರಾಜ್ ಅವರ ಚಲನಚಿತ್ರಗಳು ಬಹುತೇಕ ಜನಪದ ಅಂಶಗಳು ಹೆಚ್ಚಾಗಿ ಕಂಡುಬಂದಿವೆ. ಅವರ ಅಭಿನಯ ಮತ್ತು ಆ ಶಕ್ತಿ ಕೂಡ ಜನಪದ ಸೇವೆ ಹಾಗೂ ಜನರ ಬದುಕಿನ ದ್ವಂದ್ವಗಳನ್ನು ಮುನ್ನಲೆಗೆ ತರುವಂತವುಗಳಾಗಿವೆ. ೭೦-೮೦ ದಶಕದಲ್ಲಿ ಶೋಷಣೆ, ದಬ್ಬಾಳಿಕೆ, ಮಿತಿಮೀರಿತ್ತು. ಜಮೀನ್ದಾರಿ ಪದ್ಧತಿಯಂತಹವುಗಳನ್ನು ರಾಜ್ ಅವರ ಚಲನಚಿತ್ರಗಳು ನಿರೂಪಿಸಿವೆ. ಜೊತೆಗೆ ಅಂದಿನ ದಿನಗಳಲ್ಲಿ ತ.ರಾ.ಸು., ಅ.ನ.ಕೃ. ಅವರಂತ ಕಥೆ, ಕಾದಂಬರಿಗಳ ಸಾಮಾಜಿಕ ವಸ್ತುವನ್ನು ಡಾ.ರಾಜ್ ಚಲನಚಿತ್ರಗಳು, ಮುನ್ನಲೆಯಾಗಿ ಮಾಧ್ಯಮಗಳ ಮೂಲಕ ಜನರಲ್ಲಿ ಜಾಗೃತಿ ಲಮೂಡಿಸಿವೆ.

### ಚಂದವಳ್ಳಿಯ ತೋಟ : ವಿಶ್ಲೇಷಣಾತ್ಮಕ ಚಿಂತನೆ

ತ.ರಾ.ಸು. ಅವರ ಭವ್ಯವಾದ ಸಾಮಾಜಿಕ ಕಾದಂಬರಿಯ ಚಿತ್ರ ಚಂದವಳ್ಳಿಯ ತೋಟ, ಈ ಚಲನಚಿತ್ರದಲ್ಲಿ ರಾಜ್ ಅವರ ಅಭಿನಯ ಮೂಡಿಬಂದಿದೆ. ಇದು ಜನಪದ ಅಂಶಗಳಿಂದ ಸಮೃದ್ಧಗೊಂಡು ರೈತಾಪಿ ಜೀವನವನ್ನು ಬಿಚ್ಚಿಡುವ ಹಾಗೂ ತುಂಬು ಕುಟುಂಬದ ಮಹತ್ವಸಾರುವ ಅಂಶ ಒಳಗೊಂಡಿದೆ. ಇಲ್ಲಿ ನಮ್ಮ ಭಾರತೀಯ ಪರಂಪರೆಯಲ್ಲಿ ಮತ್ತು ನಾವು ನಂಬಿದ ಕಲಾಕೃತಿಯಲ್ಲಿ ನಮ್ಮ ಬದುಕಿನಲ್ಲಿ ಅವಿಭಕ್ತ ಕುಟುಂಬದ ಪರಿಕಲ್ಪನೆಯಾಗಿದೆ. ಚಂದವಳ್ಳಿಯ ತೋಟ, ಎನ್ನುವ ಹಿನ್ನೆಲೆಯಲ್ಲಿ ಚಂದದ ತೋಟ, ಮತ್ತು ಚಂದದ ಕುಟುಂಬದ ಈ ಎರಡು ಅಂಶಗಳಲ್ಲಿ ಭಾರತೀಯ ಪರಂಪರೆಯಲ್ಲಿ ಮನುಷ್ಯ ಬದುಕುವ ಪ್ರಕ್ರಿಯೆ ಈ ಚಲನಚಿತ್ರದಲ್ಲಿ ನಡೆಯುತ್ತದೆ. ಈ ಚಿತ್ರ ತುಂಬು ಕುಟುಂಬದ ಮಹತ್ವ ಸಾರುತ್ತದೆ ಮತ್ತು ಒಂದು ಮನೆಗೆ ಹಿರಿಯನೊಬ್ಬ ಇರಬೇಕು ಎನ್ನುವುದು ತಿಳಿಯಪಡಿಸುತ್ತದೆ. ಈ ಹಿನ್ನೆಲೆಯಿಂದ ನಮ್ಮ ಭಾರತೀಯ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಪ್ರಯತ್ನವಿದೆ. ಜೊತೆಗೆ ದುರಂತ ಅಂತ್ಯ ಕಾಣುವುದು ಈ ಚಿತ್ರದಲ್ಲಿ ಕಾಣುತ್ತವೆ. ಈ ಎರಡೂ ದ್ವಂದ್ವದಲ್ಲಿ ಮನುಷ್ಯ ಬದುಕಿನ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳಬೇಕಾಗಿದೆ. ಚಂದವಳ್ಳಿಯ ತೋಟದ ಚಲನಚಿತ್ರದಲ್ಲಿ ಉದಯಕುಮಾರ, ರಾಜಕುಮಾರ ಮುಖ್ಯಪಾತ್ರದಲ್ಲಿದ್ದಾರೆ. ಉದಯಕುಮಾರ್ ಕುಟುಂಬ ದುರಂತಕ್ಕೆ ಒಳಗಾಗುತ್ತದೆ.



'ಚಂದವಳ್ಳಿಯ ತೋಟ' ಚಲನಚಿತ್ರವು ಚಂದವಳ್ಳಿಯ ಗೌಡ ಶಿವನಂಜಪ್ಪ (ಉದಯಕುಮಾರ)ನ ಕುಟುಂಬ ಕಥೆಯಾಗಿದ್ದು ತುಂಬು ಸಂಸಾರ ಹೇಗೆ ಬೀದಿಗೆ ಬರುತ್ತದೆ. ದುಷ್ಟ ಬ್ರಾಹ್ಮಣರಿಂದ ಒಡೆದು




ಚೂರು ಚೂರಾಗಿದ್ದನ್ನು ಈ ಚಿತ್ರವು ಪ್ರತಿಬಿಂಬಿಸುತ್ತದೆ. ಹಾಗೆಯೇ ಹಳ್ಳಿಯ ಮನೆಯೊಂದರ ಕಥೆ ಊರಿನ ಗೌಡ ಶಿವನಂಜಪ್ಪ ನಿಷ್ಠಾವಂತ ಶ್ರಮಜೀವಿಯಾಗಿ ಭೂಮಿತಾಯಿಯನ್ನು ನಂಬಿದವನು. ಇವನ ಮಗ ಡಾ.ರಾಜ್ ಅವರು ಹನುಮನಗೌಡ ಪಾತ್ರದಲ್ಲಿ ಸಮಸ್ಯೆಯನ್ನು ಬಗೆಹರಿಸುವ ಜೊತೆಗೆ ಧೈರ್ಯದಿಂದ ಮುನ್ನುಗ್ಗುತ್ತಾನೆ. ಚಂದವಳ್ಳಿಯ ತೋಟ ರಾಜಣ್ಣನವರ ಅತ್ಯುತ್ತಮ ಚಿತ್ರಗಳಲ್ಲಿ ಒಂದೆನಿಸಿದರೂ ಮುಖ್ಯ ಪಾತ್ರದಲ್ಲಿ ಉದಯ್ ಕುಮಾರ್ ಮಿಂಚುತ್ತಾರೆ. ಆದರೂ ಶಿವನಂಜೇಗೌಡರ ಹಿರಿಯ ಮಗನಾಗಿ ನೈಜ ಅಭಿನಯ ನೀಡಿದ ರಾಜಣ್ಣನವರು ಚಿತ್ರದ ಕೇಂದ್ರ ಬಿಂದು. ಆದರ್ಶ ಪುತ್ರ, ಅಪ್ಪ ಹಾಕಿದ ಗೆರೆ ದಾಟದ, ಮನೆಯ ಗೌರವ, ಮನೆತನದ ಮರ್ಯಾದೆ ಉಳಿಸುವ ಜವಾಬ್ದಾರಿಯುತ ಕಿರಿಗೌಡನ ಹಾಗೆ ರಾಜಣ್ಣನವರದು ಚುರುಕಾದ ಪಾತ್ರ. ಸಂಸಾರದ ಹಿಂದೆ ಯುವಕ ಪಡೆ ಸಂಸಾರ ಎನ್ನುವುದಕ್ಕಿಂತ ಸಂಸ್ಕಾರ ಎನ್ನುವುದು ಮುಖ್ಯವಾಗಿದೆ.

"ಓ ನನ್ನ ಬಾಂಧವರೇ ಕನ್ನಡ ಕುಲಪುತ್ರರೇ
ಕಣ್ತೆರೆದು ನೋಡಿರೋ ಈ ಬಾಳ ಕಥೆಯ
ಒಂದು ಮನೆಯದಲ್ಲ ಒಂದು ಊರಿನದಲ್ಲ
ಭಾರತಾಂಬೆ ಕರೆದ ಕಣ್ಣೀರ ಹೊಳೆಯ
ಸತ್ಯದ ನುಡಿಯ ಲಾಲಿಸಿರೋ, ಪಾಲಿಸಿರೋ,
ಸೋದರ ದ್ವೇಷ, ಹೆಣ್ಣಿನ ರೋಷ ಆಗಿತು ದೇಶಕ್ಕೆ ಯಮಪಾಶ"

ಎಂಬ ಗೀತೆಯಿಂದ ಸಿನೆಮಾ ಆರಂಭವಾಗುತ್ತದೆ. ಚಿತ್ರದ ಮೊದಲ ನುಡಿ "ಪಟ್ಟಿ ಎಲ್ಲ ನೋಡಿದಾಯ್ತೆಲ್ಲ, ಪುರಾಣ ಪಂಚಾಯಿತಿ ಇಲ್ಲದೆ ಪಾಲು ಮಾಡಿ" ಎಂಬ ಮಾತು ಕೇಳಿ ಗೌಡ ಪಾಲು ಕೇಳುವ ಅಣ್ಣತಮ್ಮಂದಿರಿಗೆ ಪಾಲು ಬೇಡ ಎಂಬ ಮಾತು ಹೇಳುತ್ತಾನೆ.



ಅಣ್ಣ ತಮ್ಮಂದಿರು ಮುಖದಲ್ಲಿರೊ ಎರಡು ಕಣ್ಣು ಇದ್ದಂಗೆ ಎಂದು ಬುದ್ಧಿವಾದ ಹೇಳಿದರೂ ಕೇಳದ ಹಳ್ಳಿಗರಿಗೆ ಊರ ಹಿರಿಯ ಗೌಡನ ಕಥೇ ಹೇಳುತ್ತಾನೆ. ಊರಿನ ದೊಡ್ಡ ಗೌಡ ಶಿವನಂಜೇಗೌಡ ತನ್ನ ಇಬ್ಬರು ಗಂಡು ಮಕ್ಕಳೊಂದಿಗೆ ಬುಗುರಿ ಆಡ್ತಾ ಇರ್ತಾನೆ. ಅಲ್ಲಿಗೆ ಬಂದ ನರಹರಿ "ನಾಳೆ ಹಳ್ಳಿಗೆ ಅಮಾಲ್ದಾರ್ ಬರ್ತಾರೆ, ಊರಿಗೆ ಗೌಡ

ಅನಿಸಿಕೊಂಡ ನೀನು ಎಲ್ಲೂ ಹೋಗದೆ ಮನೆ ಹತ್ರನೇ ಇರು'" ಎಂದು ಸಂದೇಶ ನೀಡುತ್ತಾನೆ. ಬಂದ ಅಮಾಲ್ದಾರ್ ಇದು ಸುಡುಗಾಡು, ನರಕ, ಊರಿಗೆ ಊರೇ ಸುಡುಗಾಡು, ಉರಿಬಿಸಿಲು, ಬೆಂಕಿ, ಮರಳುಗಾಡು, ಅಗ್ನಿ ನಕ್ಷತ್ರ ಎಂಬ ಮೂದಲಿಕೆಯ ನುಡಿ ಆಡುತ್ತಾನೆ. ಇದರಿಂದ ಬೇಸರಗೊಂಡ ಗೌಡ



ಎಳನೀರು ಕೊಡುವ ತೋಟ ಕಟ್ಟಲೇ ಬೇಕು ಎಂಬ ನಿರ್ಧಾರಕ್ಕೆ ಬರುತ್ತಾನೆ. ಈ ಹಿನ್ನೆಲೆ ಎಳನೀರು ಎನ್ನುವುದು ಹಳ್ಳಿಯ ಸಂಸ್ಕೃತಿ ಬಿಂಬ ಜನಪದ ನಂಬಿಕೆ ಸಂಸ್ಕೃತಿಯಾಗಿದೆ.

ಜನಪದರ ನಂಬಿಕೆಯಿಂದ ಇಲ್ಲಿ ತೋಟ ಮಾಡಲಿಸಲು ಪ್ರಯತ್ನ ಮಾಡುತ್ತಾನೆ. ತಾವರೆಕೆರೆಯ ವೆಂಕಟರಮಣ ಜೋಯಿಸರು "ತೋಟಮಾಡೋ ಯೋಗ ನಿನಗೆ ಇದೆ. ಆದರೆ ಅದನ್ನು ಅನುಭವಿಸುವ ಯೋಗ ಇಲ್ಲ" ಎಂದು ಬಿಡುತ್ತಾರೆ. ಯಾವುದೇ ಕಾಲಕ್ಕೂ ಜೋಯಿಸರ, ಬ್ರಾಹ್ಮಣರ, ಹಿರಿಯರ ಮಾತನ್ನು ಜ್ಯೋತಿಷ್ಯವನ್ನು ಬಿಡದ ಗೌಡ ಪಟ್ಟು ಹಿಡಿದು ತನ್ನ ನೆಲವನ್ನು ನರಹರಿಗೆ ದಾನ ಮಾಡಿ ಅದೇ ನೆಲದಲ್ಲಿ ತೆಂಗಿನ ಸಸಿ ನಡೆಸುತ್ತಾನೆ. ಚಂದವಳ್ಳಿಯ ಆ ತೆಂಗಿನ ತೋಟ ಸಸಿಯಿಂದ ಮರವಾಗಿ ನೂರಾರು ಜನರಿಗೆ ಕಲ್ಪವೃಕ್ಷವಾಗುತ್ತದೆ. ಗೌಡನ ಚಂದವಳ್ಳಿಯ ತೋಟ ಹತ್ತೂರಿಗೂ ಹೆಸರಾಗುತ್ತದೆ.



ನಮ್ಮದು ಕೂಡು ಕುಟುಂಬದ ಸಂಸ್ಕೃತಿ, ತಂದೆ ಮಗ ಮೊಮ್ಮಗ, ಮರಿಮೊಮ್ಮಗ ಹೀಗೆ ಹಲವು ಪೀಳಿಗೆಗಳು ಒಂದೇ ಸೂರಿನಡಿ ಬದುಕಿ ಬಾಳಿದ ನೂರಾರು ಉದಾಹರಣೆಗಳು ನಮ್ಮ ಭಾರತ ದೇಶದಲ್ಲಿದೆ. ಮನಸ್ಸು ಒಡೆದರೂ ಮನೆ ಒಡೆಯಬಾರದು, ಎರಡು ಬಾಗಿಲು ಬೇಡ, ಎರಡು ಒಲೆ ಹಚ್ಚಬೇಡ, ಎಂಬಂತೆ ಅತ್ತೆ ಸೊಸೆ ನಾದಿನಿ, ಓರಗಿತ್ತಿ, ಚಿಕ್ಕಪ್ಪ, ದೊಡ್ಡಪ್ಪ, ದೊಡ್ಡಮ್ಮ ಹೀಗೆ ನಾನಾ ಸಂಬಂಧಗಳು ಒಟ್ಟಿಗೆ ಬೆಸೆದುಕೊಂಡು ಬಾಳುವ ಪರಂಪರೆ ನಮ್ಮದು. ಇದೇ ಹೇಳುವ ಪ್ರಯತ್ನ ತ.ರಾ.ಸು. ಅವರು ಮಾಡಿದ್ದಾರೆ. ಕಥೆ ಚಿತ್ರದುರ್ಗದ ಅಕ್ಕಪಕ್ಕದ ಹಳ್ಳಿಯಲ್ಲಿ ನಡೆಯುತ್ತವೆ. ಅಂಥಹ ಒಂದೆರೆಡು ಸಂಭಾಷಣೆಗಳು ಸಹಾ ಚಿತ್ರದಲ್ಲಿ ಕೇಳಿಬರುತ್ತದೆ. ನಮ್ಮ ದೇಶ ಹಳ್ಳಿಗಳ ನಾಡು, ಭಾರತದ ೭೦% ಜನರು ಹಳ್ಳಿಗಳಲ್ಲಿ ವಾಸವಾಗಿದ್ದಾರೆ. ಅವರ ವೃತ್ತಿ ಕೃಷಿ. ರೈತ ಅನ್ನ ಬೆಳೆದರೆ ಇಡೀ ದೇಶಕ್ಕೆ ಊಟ ಇಲ್ಲವಾದರೆ ಇಲ್ಲ. ಈ ಮೂಲ ಧ್ಯೇಯ ಅಂದರೆ ಕೃಷಿ ಪ್ರಧಾನ ಸಂದೇಶವನ್ನು ಚಿತ್ರ ಸಾರುತ್ತದೆ. ಗೌಡ ತೋಟ ನೆಡುವುದರ ಮೂಲಕ ಮಣ್ಣಿನ ಮಗ ಶ್ರಮಜೀವಿ ಕಾಯಕ ಯೋಗಿ ಎನಿಸಿಕೊಳ್ಳುತ್ತಾನೆ.

ನಮ್ಮ ಜನಪದರಲ್ಲಿ ಜಗಳ ದ್ವೇಷ ಇದ್ದದ್ದೆ. ಆದರೆ ಮಾನವೀಯತೆಗೆ ದೊಡ್ಡ ಸ್ಥಾನವಿದೆ. ಹೊಲ ಭೂಮಿ ಚಿನ್ನ ಪಾತ್ರೆ ಪಗಡೆ ತೋಟ, ಹಸು ಕರು ಕೊನೆಗೆ ಪಾತ್ರೆಗಾಗಿ ಜಗಳ ಆಡಿದ್ದೆ ಉಂಟು. ಅಲ್ಲಿ ಹಿರಿಯನೊಬ್ಬ ಬಂದು ಜಗಳ ಬಿಡಿಸುತ್ತಾನೆ. ನ್ಯಾಯ ಮಾಡುತ್ತಾನೆ. ಇಲ್ಲಿ ಅಣ್ಣ ತಮ್ಮಂದಿರ ಜಗಳ



ಬಿಡಿಸಲು ಶಿವನಂಜೇಗೌಡ ವಿಫಲನಾಗುತ್ತಾನೆ. ಇವರಿಬ್ಬರ ಜಗಳ ವಿಕೋಪಕ್ಕೆ ತಿರುಗುತ್ತದೆ ಎಷ್ಟರ ಮಟ್ಟಿಗೆ ಎಂದರೆ ರಾಮಣ್ಣನ ಹೆಂಡತಿ ಹನುಮನ ಮಗನನ್ನು ಪಾಷಾಣ ಇಟ್ಟು ಕೊಲ್ಲಲು ತಿಪ್ಪಿಂಬೆಂಬ ಆಳನ್ನು ಕಳುಹಿಸಿ ಮಗುವನ್ನು ಕೊಲ್ಲಿಸುತ್ತಾಳೆ. ಮಗನನ್ನು ಕಳೆದುಕೊಂಡ ಹನುಮ ಹುಚ್ಚನಂತೆ ಬಂದು ತಮ್ಮನೊಂದಿಗೆ ಕಾದಾಡುತ್ತಾನೆ. ಹೊಡೆದಾಟದಲ್ಲಿ ಅಣ್ಣನೇ ತಮ್ಮನ ಬಲಿ ಪಡೆಯುತ್ತಾನೆ. ತಮ್ಮನ ಹೆಂಡತಿ ಪ್ರಾಣ ಉಳಿಸಿಕೊಳ್ಳಲು ಮನೆಯಿಂದ ಹೊರ ಓಡುತ್ತಾಳೆ. ಆದರೆ ಕೆರೆ ಏರಿ ಮೇಲೆ ಓಡುವಾಗ ಕಾಲು ಜಾರಿ ಕೆರೆಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾಳೆ. ಹನುಮನಿಗೆ ಜೀವನ ಪರ್ಯಂತ ಜೈಲಾಗುತ್ತದೆ. ಗಂಡನಿಗೆ ಜೈಲಾದ ವಿಷಯ ತಿಳಿದು ಹನುಮನ ಹೆಂಡತಿ ಎದೆ ಬಡಿದುಕೊಂಡು ಸಾಯುತ್ತಾಳೆ. ಹೀಗೆ ಶಿವನಂಜೇಗೌಡನ ಮನೆ ಮುರಿದು ಗೌಡ ಹುಚ್ಚನಂತಾಗುತ್ತಾನೆ. ತೋಟ ಕಿಡಿಗೇಡಿಗಳ ಪಾಲಾಗುತ್ತದೆ. ಒಂದು ಹಳ್ಳಿಯಲ್ಲಿ ಸಾಮಾನ್ಯವಾಗಿ ಕಂಡು ಬರುವ ಬಹುತೇಕ ಸನ್ನಿವೇಶಗಳನ್ನು ಚಿತ್ರದಲ್ಲಿ ಸಹಜವಾಗಿ ಚಿತ್ರಿಸಲಾಗಿದೆ.



೧೯೬೪ ರ ಕಾಲಕ್ಕೆ ದುರಂತ ಅಂತ್ಯ ಕಂಡ ಜನ ಈ ಸಿನೆಮಾದಿಂದ ಪಾಠ ಕಲಿತದ್ದು ಉಂಟು. ಸಿನೆಮಾ ಕೆಟ್ಟ ಸಂದೇಶ ಬೀರುವುದಿಲ್ಲ. ಅಣ್ಣ ತಮ್ಮಂದಿರು ಬೇರೆಯಾಗಬಾರದು. ಒಂದು ತಾಯಿ ಮಕ್ಕಳು ಒಟ್ಟಿಗೆ ಬಾಳಬೇಕು ಆಗಲೇ ಸುಖ ಎನ್ನುವ ಸಂದೇಶದೊಂದಿಗೆ ಸಿನೆಮಾದ ಅಂತ್ಯದಲ್ಲಿ ಶಿವನಂಜೇಗೌಡನ ಕಥೆ ಕೇಳಿ ಅವರಿಂದ ಬುದ್ಧಿ ಕಲಿತ ಅಣ್ಣ ತಮ್ಮಂದಿರು ತಮ್ಮ ಮನೆಯನ್ನು ಪಾಲು ಮಾಡುವುದು ಬೇಡ, ನಾವು ಒಟ್ಟಾಗಿ ಇರುತ್ತೇವೆ ಎಂಬ ನಿರ್ಣಯಕ್ಕೆ ಬರುತ್ತಾರೆ.

ಡಾ. ರಾಜ್‌ಕುಮಾರ್ ಅವರ ಚಿತ್ರಗಳಲ್ಲಿ ಜನಪದೀಯ ಅಂಶಗಳು ಕಣ್ಣಿಗೆ ರಾಚುವುದು ಚಿತ್ರಕಥೆಯಲ್ಲಿ ಒಂದಕ್ಕೊಂದು ಸುಂದರವಾಗಿ ಹೆಣೆದಿರುವ ದೃಶ್ಯಗಳು ಅಲ್ಲಿ ಉಪಯೋಗಿಸಿರುವ ಸಲಕರಣೆಗಳು, ಪಾತ್ರಗಳು ಉಡುಗೆ ತೊಡುಗೆಗಳಲ್ಲಿ. ಇವೆಲ್ಲವನ್ನೂ ಚಂದವಳ್ಳಿಯ ತೋಟ ಎಲ್ಲಿಯೂ ತೊಡಕುಂಟು

ಮಾಡದೆ ಇದು ಸೆಟ್ ಅಲ್ಲ, ನೈಜವಾದದ್ದು ಎಂಬ ಭ್ರಮೆ ಹುಟ್ಟಿಸುವಂತೆ ಒಳಾಂಗಣ ದೃಶ್ಯದ ನಿರ್ಮಾಣವಾಗಿದೆ. ಈ ಚಿತ್ರ ಮತ್ತೊಂದು ಮಹತ್ವದ ಅಂಶ ಎಂದರೆ ಜನಪದೀಯ ಶೈಲಿಯ ನಿರೂಪಣೆ, ರಾಜಣ್ಣನವರ ಚಿತ್ರಗಳಲ್ಲಿ ಬಳಕೆಯಾದ ಕನ್ನಡ ಭಾಷೆ ಸರ್ವಕಾಲಕ್ಕೂ ಪ್ರಸ್ತುತವಾದದ್ದು. ಮಂಗಳೂರು, ಧಾರವಾಡ, ಹುಬ್ಬಳ್ಳಿ, ಮೈಸೂರು, ಬೆಂಗಳೂರು ಹೀಗೆ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಶೈಲಿಯ ಕನ್ನಡ ಪ್ರಚಲಿತದಲ್ಲಿದ್ದರೂ ಚಿತ್ರ ನಿರ್ಮಾಣದ ಸಮಯದಲ್ಲಿ ಎಲ್ಲರಿಗೂ ಪ್ರಿಯವಾದ ಸರಳಗನ್ನಡವನ್ನು ಬಳಸಿದ ಖ್ಯಾತಿ ರಾಜಣ್ಣನವರ ಚಿತ್ರಕ್ಕೆ ಸಲ್ಲಬೇಕು. ಚಂದವಳ್ಳಿಯ ತೋಟದ ಕಥೆ ತ.ರಾ.ಸು ಚಿತ್ರಕಥೆಯನ್ನು ನಿರ್ಮಾಣ ಮಾಡುವಾಗ ತ.ರಾ.ಸು.. ಅವರ ಕಾದಂಬರಿಯ ಕೆಲವು ಸಂಭಾಷಣೆಯನ್ನು ಇಲ್ಲಿ ಬಳಸಿರುವುದು ಉಂಟು. ಚಿತ್ರದ ಬಗ್ಗೆ ಒಂದೆರೆಡು ಮಾತುಗಳು ತ.ರಾ.ಸು. ಅವರನ್ನು ನೆನಪಿಸುತ್ತದೆ.

ಇಲ್ಲಿ ಸಂಪೂರ್ಣವಾಗಿ ಹಳ್ಳಿಯ ಗ್ರಾಮೀಣ ಭಾಷೆಯನ್ನು ಬಳಸಲಾಗಿದೆ.

"ಮನೆಗೆ ಬೆಂಕಿ ಹಚ್ಚಿ ಬೇರೆಯವರಿಗೆ ಬೆಳಕು ಕೊಡದಾ".

"ನೆಕ್ಕಾ ನಾಯಿಗೆ ಲಿಂಗ ಆದ್ರೇನು, ಪಾನು ಬಟ್ಟಲಾದ್ರೇನು".

"ನಾಗರ ಹಾವು ಮನುಷ್ಯರನ್ನು ಕಚ್ಚುತ್ತೆ, ಇನ್ನೊಂದು ಹಾವನ್ನು ಕಚ್ಚಲ್ಲ".

"ಕಾಲಿಗೇನು ಬರ ಬಡಿದ್ದೆತಾ?"

"ಬಾಯಿಮುಚ್ಚಿ ಕೊಂಡಿದ್ರೆ ಬಾಗಿಲ ಗೂಟಾನು ದರ್ಬಾರು ಮಾಡುತ್ತೆ."

ಹೀಗೆ ಗಾದೆ, ನಾಣ್ನುಡಿ, ಒಗಟು ಇವೆಲ್ಲವೂ ಪಾತ್ರಗಳ ಬಾಯಲ್ಲಿ ಸಹಜವಾಗಿ ನುಡಿಯುಲ್ಪಡುತ್ತವೆ.

ಈ ಚಿತ್ರ 'ಸತ್ಯದ ನುಡಿಯ ಆಲಿಸಯ್ಯ' ಎಂಬ ಉಲ್ಲೇಖದ ಹಾಡುವಿನ ಮೂಲಕ ಸತ್ಯಕ್ಕೆ ಯಾವಾಗಲೂ ಸಾವು ಇಲ್ಲ. ಆದರೆ ಮನುಷ್ಯನು ಇದನ್ನು ಅರ್ಥ ಮಾಡಿಕೊಳ್ಳಬೇಕು. ಮನುಷ್ಯ ಸತ್ತು ಹೋದರೆ ಅವನ ಹೆಸರು ಸಮಾಜದಲ್ಲಿ ಶಾಶ್ವತ ಇರುತ್ತದೆ. ಎಂಬ ಮಾತು ಸುಳ್ಳಲ್ಲ. ಈ ನಿಟ್ಟಿನಲ್ಲಿ ಡಾ.ರಾಜ್ ಅವರ ಆದರ್ಶ ಜೀವನ, ಸತ್ಯದ ನುಡಿ ನಮ್ಮೊಂದಿಗೆ ಇದೆ ಎಂಬುದನ್ನು ಮರೆಯುವಂತಿಲ್ಲ. ಈ ಚಿತ್ರದಲ್ಲಿ ಕೃಷಿ ಪ್ರಧಾನವಾಗಿದ್ದರೂ ಜನಪದ ನಂಬಿಕೆಗಳು ಬಹುಮುಖ್ಯ ನೆಲೆಯಲ್ಲಿ ಕಂಡುಬರುತ್ತದೆ. ಕೃಷಿ, ಪೂಜೆ ವಿಧಾನ, ಹೆಣ್ಣುಮಕ್ಕಳು ಜಾನಪದ ಗೀತೆಗಳನ್ನು ಹಾಡುವುದು, ಒಗಟು, ಗಾದೆ ಅವರ ಉಡುಪುಗಳಲ್ಲಿ ಜಾನಪದೀಯ ಅಂಶಗಳು ಕಂಡುಬಂದಿವೆ.



ಈ ಚಿತ್ರದಲ್ಲಿ ಕೃಷಿಕನಾದ ಗೌಡ ಬ್ರಾಹ್ಮಣರ ಮಾತಿಗೆ ಎದುರು ಮಾತನಾಡುವುದಿಲ್ಲ. ಬ್ರಾಹ್ಮಣ ಮಾತೇ ವೇದವಾಕ್ಯ. ತಮ್ಮ ಊರಿನಲ್ಲಿ ಬ್ರಾಹ್ಮಣ ಇದ್ದರೆ ಚೆನ್ನ ಎಂಬುದು ಶಿವನಂಜೇಗೌಡನ ನಂಬಿಕೆ. ಆದರೆ ಈ ಬ್ರಾಹ್ಮಣರು ಶಿವನಂಜೇಗೌಡನನ್ನು ಬೀದಿಗೆ ತರುವುದು ಈ ಗೌಡನಿಗೆ ಗೊತ್ತಾಗುವುದಿಲ್ಲ. ಇದರಿಂದ ತಮ್ಮ ಊರಿಗೆ ಬೇರೆ ಊರಿಂದ ಬ್ರಾಹ್ಮಣರನ್ನು ಕರೆಸಿ ಪೂಜೆ ಪುನಸ್ಕಾರಕ್ಕೆ ಕರೆಸುವುದು

ಕಷ್ಟಕರ ಎಂದು ವಾಡಿಕೆ. ಹಾಗಾಗಿ ಸುಬ್ಬಾ ಭಟ್ಟರು ಮತ್ತು ಜಲಜಾಕ್ಷಿ ಎಂಬ ಬ್ರಾಹ್ಮಣ ದಂಪತಿಯನ್ನು ಊರಿಗೆ ಕರೆಯಿಸಿಕೊಳ್ಳುತ್ತಾರೆ. ಈ ಮೂಲಕ ಊರಿನ ಪಾವಿತ್ರ್ಯತೆ ಹೆಚ್ಚಾಯಿತು ಎಂಬ ನಂಬಿಕೆ ಊರಿನ ಮತ್ತು ಶಿವನಂಜೇಗೌಡ ಅವರ ಮನದಲ್ಲಿ ಮೂಡುತ್ತದೆ.

ಊರಿನ ಜವಾಬ್ದಾರಿ ಹೊತ್ತ ಗೌಡ ಬ್ರಾಹ್ಮಣ ಕುಟುಂಬ ಜವಾಬ್ದಾರಿಯನ್ನು ತೆಗೆದುಕೊಳ್ಳುವ ಮೂಲಕ ಐದು ಎಕರೆ ಜಮೀನನ್ನು ಸುಬ್ಬಾಭಟ್ಟರ ಹೆಸರಿಗೆ ಮಾಡಿಕೊಳ್ಳುವ ಜೊತೆಗೆ ಊರಿನ ಜನತೆಯ ಮತ್ತು ಸಮ್ಮುಖದಲ್ಲಿ ನಡತೆ ಮತ್ತು ಗೌರವಯುತ ಮನುಷ್ಯನಾಗಿ ಬಾಳುತ್ತಾನೆ. ಈ ಚಿತ್ರದಲ್ಲಿ ಜಾನಪದ ಅಂಶಗಳು ಹೇಗೆಂದರೆ ಮನುಷ್ಯ ಸಂಬಂಧಗಳು ಎಂದು ಹೇಳಬಹುದು ನಾಲಿಗೆ ಒಂದು ಸಲ ಬಂದ ಮಾತು ನುಡಿದರೆ ಅದರಂತೆ ನಡೆಯಬೇಕು ಎಂಬುದನ್ನು ಚಿತ್ರದಲ್ಲಿ ಗೌಡ ಹಾಗೂ ಅವನ ಹೆಂಡತಿ ಪುಟ್ಟತಾಯಿ ತಿಳಿಸಿಕೊಡುತ್ತಾರೆ. ಚಿತ್ರದಲ್ಲಿ ಪುಟ್ಟತಾಯಿ ಗಂಡನಿಗೆ ತಕ್ಕ ಹೆಂಡತಿ ಊರಿಗೆ ಗೌಡತಿ ಎನಿಸಿಕೊಳುವ ಅವಳು ಊರಿನಲ್ಲಿ ಆದರ್ಶಮಯಿಯಾಗಿರುತ್ತಾಳೆ. ಮೈ ತುಂಬಾ ಒಡವೆ–ಅಡ್ಡಿಕೆ, ದೊಡ್ಡ ಗುಂಡು ಕೈ ತುಂಬಾ ಬಳೆ, ಬಳೆಯ ಕೊನೆಯಲ್ಲಿ ಕೈ ಕಡಗ, ನಾಲ್ಕೆಳೆ ಸರ, ಮಾಂಗಲ್ಯಸರ, ದೊಡ್ಡಂಚಿನ ಸೀರೆ, ಮೈ ತುಂಬಾ ಸೆರಗು ಹೊದ್ದು ಹಿರಿಯ ಮುಂದೆ ಮುತ್ತೈದೆಯಂತೆ ಕಂಗೊಳಿಸುತ್ತಾಳೆ. ಅವಳ ಮಾತು, ನಡಿಗೆ, ಉಡುಗೆ, ತೊಡುಗೆ ಎಲ್ಲವೂ ಪರಿಪೂರ್ಣ ಹಳ್ಳಿಯ ಗೌಡತಿಯಂತೆ ಗಂಡನಿಗೆ



ಎದುರು ಮಾತನಾಡದ ಗರತಿ, ಹಾಗೆಯೇ ಗೌಡನ ದೊಡ್ಡ ಹುರಿಮೀಸೆ ನೋಡಿದಾಕ್ಷಣ ಎದ್ದು ಕೈ ಮುಗಿಯಬೇಕು ಎನ್ನುವ ಮೈ ಕಟ್ಟು ಉತ್ತಮ ಆಕರ್ಷಕ ಹುರಿ ಮಾಡಿದ ತೋಳಗತ್ತು ಗಾಂಭೀರ್ಯ ಕಚ್ಚೆ ಪಂಚೆ, ಮಾತಿನ ಗಾಂಭೀರ್ಯತೆ, ದೊಡ್ಡವರಲ್ಲಿ ಗೌರವ, ದೈವಭಕ್ತಿ ಎಲ್ಲವೂ ಸಾಕಾರ ಮಾಡಿಕೊಂಡ ಶಿವನಂಜೇಗೌಡನ ಚಿತ್ರದಲ್ಲಿ ಪಾತ್ರವಾದರೂ ನಿಜವೇ ಎಂಬಂತೆ ಬಿಂಬಿತವಾಗಿದೆ. ಆದರೆ ಪ್ರಸ್ತುತ ದಿನಗಳಲ್ಲಿ ಯಾವುದೇ ಊರು, ಹಳ್ಳ, ನಗರ, ಪ್ರದೇಶಗಳಲ್ಲಿ ಗೌಡ, ಕುಲಕರ್ಣಿ ಕಾಣಸಿಗುವುದಿಲ್ಲ. ಎಲ್ಲಾ ಊರಿನ ಹಿರಿಯರು ಸಾಮಾನ್ಯ ಸದಸ್ಯರಾಗಿ ಕಂಡುಬರುತ್ತಾರೆ. ಏಕೆಂದರೆ ಕಾನೂನು ದಿನೇ ದಿನೇ ಗಟ್ಟಿಗೊಳ್ಳುತ್ತಾ ಹಳ್ಳಿ ಪಂಚಾಯಿತಿ ಕಟ್ಟೆ ಮರೆಯಾಗುತ್ತಿದೆ. ಇದಕ್ಕೆ ಮುಖ್ಯ ಕಾರಣ ಸಮಾಜದಲ್ಲಿ ಹೊಸತನ ಆವಿಷ್ಕಾರ ಮತ್ತು ತಂತ್ರಜ್ಞಾನ ಎಂಬುದಾದರೆ, ಹಿಂದಿನ ಕಾಲದಲ್ಲಿ ನಂಬಿಕೆಯ ಮತ್ತು ಜಾನಪದೀಯ ಅಂಶಗಳು ಇವೆ. ಪ್ರಸ್ತುತ ನಂಬಿಕೆಯೇ ಪ್ರಶ್ನೆಯಾಗಿ ಮಾಡುತ್ತದೆ. ಅಂದರೆ ಸ್ಪರ್ಧಾತ್ಮಕ ಯುಗವಾಗಿ, ಹೊರ ಹೊಮ್ಮಿವೆ. ಆದರೆ ರಾಜ್ ಅವರ ಚಿತ್ರಗಳು ಮೌಲ್ಯಯುತ ಸಮಾಜವನ್ನು ನಿರ್ಮಾಣ ಮಾಡಿವೆ.

## ಬಂಗಾರದ ಮನುಷ್ಯ : ವಿಶ್ಲೇಷಣಾತ್ಮಕ ಚಿಂತನೆ

ಟಿ.ಕೆ. ರಾಮರಾವ್‌ರವರ ಕಾದಂಬರಿ ಆಧಾರಿತ ಡಾ.ರಾಜ್‌ಕುಮಾರ್ ಅವರು ಅಭಿನಯಿಸಿದ ಬಂಗಾರದ ಮನುಷ್ಯ ಚಿತ್ರ ಕನ್ನಡ ನಾಡಿನಲ್ಲಿ ಅಭೂತಪೂರ್ವ ಯಶಸ್ಸನ್ನು ಸಾಧಿಸಿದ್ದಲ್ಲದೇ ಅನೇಕ ಯುವಪೀಳಿಗೆಯನ್ನು ತನ್ನತ್ತ ಆಕರ್ಷಣೆಗೆ ಮಾಡಿಕೊಂಡಿದ್ದಲ್ಲದೇ ಅನೇಕ ಆದರ್ಶ ಗುಣಗಳನ್ನು ರೂಪಿಸಿಕೊಳ್ಳಲು ಸಹಾಯಕವಾಗಿದೆ. ಹಳ್ಳಿಯನ್ನು ಬಿಟ್ಟು ಪಟ್ಟಣವನ್ನು ಸೇರುವ, ಹಣವನ್ನೇ ಪ್ರಮುಖವಾದ ಅಂಶವೆಂದು ಭಾವಿಸಿದ ದಿನಗಳಲ್ಲಿ ನೈತಿಕತೆಯೇ ಮಾನವನ ಮುಖ್ಯವಾದ ಆದರ್ಶಗುಣವೆಂದು ತೋರಿಸುವಲ್ಲಿ ಬಂಗಾರದ ಮನುಷ್ಯ ಸಿನಿಮಾ ಪ್ರಮುಖವೆನಿಸುತ್ತದೆ.



"ನಗುನಗುತಾ ನಲಿ ನಲಿ ಎಲ್ಲಾ ದೇವನ ಕಲೆಯೆಂದೇ ನೀ ತಿಳಿ ಅದರಿಂದ ನೀ ಕಲಿ" ಎಂದು ಹಾಡುತ್ತಾ ನಲಿಯುವ ನವಯುವಕ, ಕೆಂಪು ಶರ್ಟು, ಬಿಳಿ ಪ್ಯಾಂಟ್, ಹೆಗಲಲ್ಲಿ ಒಂದು ಬ್ಯಾಗ್, ಸಾಧಾರಣ ಚಪ್ಪಲಿ, ಅಪಾರ ಆತ್ಮವಿಶ್ವಾಸ, ಕಣ್ಣಲ್ಲಿ ತುಂಬಿ ತುಳುಕುವ ಅಗಾಧ ವಿಶ್ವಾಸ, ಕಟ್ಟು ಮಸ್ತಾದ ದೇಹ, ಚಿಗುರು ಮೀಸೆ ಎಲ್ಲಕ್ಕಿಂತ ಪ್ರೀತಿ ಸೂಸುವ ಕಿರುನಗೆ ಇಷ್ಟು ಸಾಕಲ್ಲವೇ ಈ ರಾಜೀವ ಎನ್ನುವ ಯುವಕನ ವರ್ಣನೆಗೆ. ರಾಜೀವನೇ ರಾಜಣ್ಣ, ರಾಜಣ್ಣನೇ ಬಂಗಾರದ ಮನುಷ್ಯ. ಕಾಡು, ಬೆಟ್ಟ, ಗುಡ್ಡ ಸುತ್ತಿ ಬಂದ ರಾಜೀವ ಬಾಲ್ಯ ಯೌವ್ವನ, ಮುಪ್ಪು, ಮೃತ್ಯು ಎಲ್ಲವನ್ನೂ ಒಂದೇ ಹಾಡಿನಲ್ಲಿ ತೋರಿಸಿಬಿಡುತ್ತಾನೆ. ಅದೇ



ಉತ್ಸಾಹದಲ್ಲಿ ಅಕ್ಕನ ಮನೆಗೆ ಬಂದಾಗ ಅಲ್ಲಿ ಪ್ರೀತಿಯ ಭಾವನ ಮೃತ್ಯುವಿನ ದರ್ಶನವಾಗುತ್ತದೆ. ಅಕ್ಕ ಹರಿಶಿನ ಕುಂಕುಮ ಕಳೆದುಕೊಂಡ ವಿಧವೆ, ಅವಳ ಮೂವರು ಮಕ್ಕಳು ಅನಾಥರಂತೆ ಅಳುತ್ತಿದ್ದಾರೆ. ಚಿತ್ರದ ಆರಂಭದಲ್ಲೇ ಕಷ್ಟಗಳ ಸುರಿಮಳೆ. ಚಟ್ಟದ ಮೇಲೆ ಮಲಗಿದ್ದ



ಶವದ ಸುತ್ತ ಸೂತಕದ ವಾತಾವರಣವನ್ನು ಸಹಜವಾಗಿಯೇ ಇಲ್ಲಿ ಸೃಷ್ಟಿಸಲಾಗಿದೆ. ಹಳ್ಳಿ ಜನ ಸಾವಿಗೆ ಬಂದಿದ್ದಾರೆ. ಜೋರಲು ಮುಂಕರಿಯ ಮೇಲೆ ಒಂಟಿ ಮಣ್ಣಿನ ದೀಪ ಉರಿಯುತ್ತಿದೆ. ಶವಸಂಸ್ಕಾರದ ನಂತರ ತಿಥಿಗೆ ಹಣ ಹೊಂದಿಸಬೇಕಾಗಿದೆ. ಸ್ವಂತ ತಮ್ಮನ ಹೆಂಡತಿ ಹಣ ನೀಡಲು ನಿರಾಕರಿಸಿ ಗಂಡನನ್ನು ತಡೆಯುತ್ತಾಳೆ. ಗಂಡ ಗುಲಾಮನಂತೆ ಮೂಕನಾಗುತ್ತಾನೆ. ಸಾವಿನ

ಮನೆ ಸೂತಕದ ಮನೆಯಲ್ಲಿ ೧೧ ದಿನ ಬೆಂಕಿ ಹಚ್ಚುವಂತಿಲ್ಲ. ಲಕ್ಷ್ಮಿ (ಭಾರತಿ) ಎಲ್ಲರಿಗೂ ಊಟ ತರುವುದು ಹಳ್ಳಿಯ ವಾತಾವರಣ ನಿರ್ಮಿಸುತ್ತದೆ. ಈಗಲೂ ಸೂತಕದ ಮನೆಯಲ್ಲಿ ಅಡುಗೆ ಮಾಡಲಾಗುವುದಿಲ್ಲ. ೧೧ ದಿನ ಅಕ್ಕಪಕ್ಕದವರು, ಬಂಧುಮಿತ್ರರು ಸತ್ತ ಕುಟುಂಬದ ಸದಸ್ಯರಿಗೆ ಊಟ ಉಪಚಾರ ಮಾಡುತ್ತಾರೆ.

ಇದಕ್ಕೆ ಇನ್ನೊಂದು ಕಾರಣದಿಂದ ಗ್ರಹಿಸುವುದಾದರೆ ಸತ್ತ ಮನೆಯಲ್ಲಿ ನೋವು, ನೆಂಟರು ಬಂಧುಮಿತ್ರರಿಗೆ ಊಟ ಉಪಚಾರ ಮಾಡುವ ಸ್ಥಿತಿಯಲ್ಲಿರುವುದಿಲ್ಲ. ಬಂದ ನೆಂಟರು ದೀಪ ನೋಡಿ ತಮ್ಮ ಮನೆಗೆ ಹಿಂದಿರುಗುತ್ತಾರೆ. ಸಂಜೆ ಹೊತ್ತು ಯಾರೂ ಸಾವಿನ ಮನೆಯಲ್ಲಿ ಉಳಿಯುವುದಿಲ್ಲ. ಹೋಗಿ ಬರುತ್ತೇವೆಂದೂ ಹೇಳುವುದಿಲ್ಲ, ಅದು ಜಾನಪದ ನಂಬಿಕೆ, ಹೇಳದೇ ಹೋಗುವುದು. ಇಲ್ಲಿ ಬಡತನವನ್ನು ಗಮನಿಸಿದ ರಾಜೀವ್ ತನ್ನ ಅಕ್ಕ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಊರಿನ ಸಾಹುಕಾರ ರಾಚೂಟಪ್ಪನ ಹತ್ತಿರ ಸಹಾಯಕ್ಕಾಗಿ ಬರುತ್ತಾನೆ.

ಅದೇ ಸಮಯಕ್ಕೆ ಬರುವ ರೈತನೊಬ್ಬ ರಾಚೂಟಪ್ಪನ ಬಳಿ ಸಾಲ ಕೇಳಲು ಬರುತ್ತಾನೆ. ಕೋಪಗೊಂಡ ರಾಚೂಟಪ್ಪ ಹಿಂದಿನ ಸಾಲ ತೀರಿಸಿಲ್ಲ, ಆಗ್ಲೆ ಇನ್ನೂ ಸಾಲ ಕೇಳೋಕ್ಕೆ ಬಂದ್ಯಾ. ಪೇಟೆಯಲ್ಲಿ ಹೋಟಲಿಗೆ ಹೋಗಿ ತಿಂದು ಮಜಾ ಮಾಡೋನು ನೀನು, "ತಿನ್ನೋದು ತಂಗಳು, ಬಾಯಿ ಮುಕ್ಕಳಿಸೋದು ಪನ್ನೀರು" ಎಂದು ಬೈದು ರೈತನನ್ನು ಕಳಿಸುತ್ತಾನೆ.

ಈ ಚಿತ್ರದಲ್ಲಿ ರಾಚೂಟಪ್ಪ ಅತಿ ಮುಖ್ಯ ಪಾತ್ರ ವಹಿಸುತ್ತಾನೆ. ರಾಜೀವನ ತನ್ನ ಅಕ್ಕನ ಮಕ್ಕಳನ್ನು ಓದಿಸಲು ೫೦೦ ರೂ. ಸಾಲ ಪಡೆದು ಅವರನ್ನು ಪಟ್ಟಣಕ್ಕೆ ಕಳುಹಿಸುತ್ತಾನೆ. ಕಂದಾಯ ಕಟ್ಟಬೇಕು, ಗೊಬ್ಬರ ತರಬೇಕು, ಅಕ್ಕನ ಮಕ್ಕಳು ಚೆನ್ನಾಗಿ ಓದಬೇಕು ಎಂಬ ಇಚ್ಛೆಯಿಂದ ಸಾಲ ಕೇಳಿದಾಗ ರಾಚೂಟಪ್ಪ ಪ್ರತಿ ಮಾತನಾಡದೆ ನಂಬಿಕೆಯಿಂದ ಹಣ ಕೊಡುತ್ತಾನೆ. ಬಹುಷಃ ನಂಬಿಕಸ್ಥ ಮನುಷ್ಯರಿಗೆ ಹಳ್ಳಿಯಲ್ಲಿ ಗೌರವ, ಸಹಾಯ ಎಲ್ಲಾ ಸಿಗುತ್ತದೆ. ಕೆಟ್ಟು ಪಟ್ಟಣ ಸೇರು ಎಂಬಂತೆ ದುಡಿಯಲು ಆಗದವನು ಪಟ್ಟಣಕ್ಕೆ ಹೋಗಿ ಹಾಳಾಗುತ್ತಾನೆ. ಚಿನ್ನದ ನೆಲದ ಒಡೆತನ ಬಿಟ್ಟು ಪುಡಿಗಾಸಿಗಾಗಿ ಕೂಲಿ ಮಾಡುವ ರೈತರಿಗೆ ಭೂಮಿತಾಯಿ ಸೇವೆಯ ಬೆಲೆ ಗೊತ್ತಿಲ್ಲ. ಅದನ್ನು ತಿಳಿದಿದ್ದ ರಾಜೀವನಿಗೆ ಸಾಲ ಸಿಗುತ್ತದೆ, ಗೌರವ ಸಿಗುತ್ತದೆ. ಮನೆಯಲ್ಲಿ "ಅಕ್ಕಿ ಹತ್ತಿರ ಇರಲಿ ನೆಂಟರು ದೂರ ಇರಲಿ" ಎಂಬಂತೆ ಶಾರದೆಯ ಅತ್ತಿಗೆ ಶಾರದೆಯನ್ನು ಒಂದು ಹೊತ್ತು ಊಟವೂ ಹಾಕದೆ ಮನೆಯಿಂದ ಹೊರ ಕಳುಹಿಸುತ್ತಾಳೆ. ಆಗ ರಾಜೀವ ಇದ್ದರೆ ತಿನ್ನೋಣ, ಇಲ್ಲದಿದ್ದರೆ ಉಪವಾಸ ಇರೋಣ ಎಂಬ ದೃಢವಾದ ಮಾತನ್ನು ಹೇಳುತ್ತಾನೆ. "ಏಕಾದಶಿ ಮನೆಗೆ ಶಿವರಾತ್ರಿ ಬಂದ ಹಾಗೆ" ಎಂದು ಶಾರದೆಯು ಅತ್ತಿಗೆ ಹೇಳಿದ್ದನ್ನು ನೋಡಿದರೆ ಅವಳ ಸ್ಥಿತಿ ಚೆನ್ನಾಗಿಲ್ಲವೋ ಎನ್ನಿಸುತ್ತದೆ. ಆದರೆ ತಂಗಿ ಮಕ್ಕಳಿಗೆ ಊಟ ಕೊಡಲು ಅಣ್ಣನಿಗೆ ಮನಸ್ಸಿಲ್ಲ, ಮನಸ್ಸಿದ್ದರೂ ಹೆಂಡತಿ ಬಿಡೋಲ್ಲ.

ಆಗೊಮ್ಮೆ ಈಗೊಮ್ಮೆ ಸೂಕ್ತ ಗಾದೆ ಮಾತು ಸಿನಿಮಾದಲ್ಲಿ ಬಳಕೆಯಾಗಿದೆ. (ಹೆಚ್.ಕೆ. ಮೂರ್ತಿಯವರ ಸಂಭಾಷಣೆ) ವಿಧವೆ ಅಕ್ಕನ ಸಂಸಾರಕ್ಕೆ ಒಂದು ನೆಲೆ ಕಾಣಿಸಬೇಕೆಂಬ ರಾಜೀವನ ಛಲವೇ ಅವನನ್ನು

ಕೃಷಿಕನನ್ನಾಗಿ ಮಾಡಿಸುತ್ತದೆ. ಪಟ್ಟಣದಲ್ಲಿ ಓದಿ ಬಂದ ವಿದ್ಯಾವಂತ ಮತ್ತೆ ಪಟ್ಟಣಕ್ಕೆ ಹೋಗದೆ ಹಳ್ಳಿಯಲ್ಲೆ ನೆಲೆಸುವ ನಿರ್ಧಾರ ಮಾಡುತ್ತಾನೆ. ಬಹುಶಃ ಇದೇ ಒಂದು ಅತಿ ದೊಡ್ಡ ತೀರ್ಮಾನ. ಕೃಷಿ ಸಹಾ ನಮಗೆ ಜೀವನ ಕೊಡಬಲ್ಲದು ಎಂಬ ನಂಬಿಕೆ ರಾಜೀವನದ್ದು. ಈ ನಂಬಿಕೆಯೇ ಮುಂದೆ ಅವನ ಜೀವಾಳವಾಗುತ್ತದೆ.

ಜಮೀನು ಉಳುಮೆ ಮಾಡುವ ಭೂಮಿ ಬಿಡಿಸಿಕೊಳ್ಳಲು ಮನಸ್ಸು ಮಾಡುತ್ತಾನೆ. ಗುತ್ತಿಗೆಗೆ ಕೊಟ್ಟ ಜಮೀನು ಹೊನ್ನನ ಪಾಲಾಗಿರುತ್ತದೆ. ಹೊನ್ನ "ಉಳುವವನೇ ಭೂಮಿಯ ಒಡೆಯ" ಎಂಬ ಗರ್ವದಿಂದ ಜಮೀನು ಬಿಟ್ಟುಕೊಡಲು ಸಿದ್ಧನಿರುವುದಿಲ್ಲ. ಇಷ್ಟು ವರ್ಷದಿಂದ ಎದೆ ರಕ್ತ ಬಸಿದು ಬೇಸಾಯ ಮಾಡುತ್ತಿರೋದು ನಾನು ಇನ್ನು ಮುಂದೆಯೂ ಜಮೀನಿನ ಮಾಲೀಕ ನಾನೇ ಎಂಬ ಹಕ್ಕಿನ ಮಾತನಾಡುತ್ತಾನೆ. ಅಕ್ಕ ಶಾರದಮ್ಮ ವಿಧವೆ ಅವಳಿಂದ ಏನೂ ಮಾಡಲು ಆಗುವುದಿಲ್ಲ , ಮಕ್ಕಳು ಚಿಕ್ಕವರು. ಇನ್ನು ರಾಜೀವ ಪಟ್ಟಣದಲ್ಲಿ ಕಲಿತು ಬಂದವನು, ಆರಂಭ ಮಾಡೋದು ಏನೂ ಗೊತ್ತಿಲ್ಲ. ಉತ್ತು ಬಿತ್ತು ನೇಗಿಲು ಹೊತ್ತು ಮಣ್ಣು ಉಳುತ್ತಾನೆಯೇ, ಕೈ ಮಣ್ಣು ಮಾಡಿಕೊಳ್ಳುತ್ತಾನೆಯೇ ಕೊನೆಯವರೆಪಿಗೂ ಈ ನೆಲದಲ್ಲಿ ಈ ಹಳ್ಳಿಯಲ್ಲಿ ಉಳಿಯುತ್ತಾನೆಯೇ ಎಂಬ ಧೈರ್ಯದಿಂದ ಹೊನ್ನ ರಾಜೀವನ ಮೇಲೆ ಕೈ ಮಾಡುತ್ತಾನೆ.

ಆದರೆ ರಾಜೀವ ಅಂತಿಂಥ ಕುಳ ಅಲ್ಲ, ಅವನು ಗಟ್ಟಿ ಕುಳ. ಹಳ್ಳಿಯಲ್ಲೇ ಇದ್ದು ಕೃಷಿ ಮಾಡುವ ನಿರ್ಧಾರ ಮಾಡಿ ಬಂದವನು. ಅವನಲ್ಲಿಯೂ ರೈತನ ರಕ್ತ ಹರಿಯುತ್ತದೆ. ಅವನು ಮೂಲತಃ ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದ ರೈತನ ಮಗ, ಪಟ್ಟಣದಲ್ಲಿ ಕಲಿತು ಬಂದಿದ್ದಾನೆ ಹೊನ್ನ "ದಾವಾ ಹಾಕ್ಕೋ" ಉಳುವವನೇ ಭೂಮಿ ಒಡೆಯ ಅದನ್ನು ಕಿತ್ತುಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ ಅಂತಾನೆ



ನನ್ನ ದಾರಿಗೆ ಅಡ್ಡ ಬರಬೇಡ ಬಂದರೆ ತಲೆ ಕಡಿದು ಕೆಸರು ಗದ್ದೇಲಿ ತುಳಿದಾಕ್ತೀನಿ ಎಂದು ಹೆದರಿಸಿದರೂ ಹೆದರದ ರಾಜೀವ ಮಣ್ಣಿನ ಮಗನಂತೆ ಅವನನ್ನು ಎದುರಿಸುತ್ತಾನೆ. ಕೆಸರಿನ ಗದ್ದೆಯಲ್ಲೇ ಅವರಿಬ್ಬರೇ ಹೊಡೆದಾಡುತ್ತಾರೆ. ಗ್ರಾಮೀಣ ಭಾಷೆಯುಲ್ಲಿ ಹೇಳುವುದಾದರೆ "ಉಯ್ದಾಡುತ್ತಾರೆ" ಅದೊಂದು ಹಳ್ಳಿ ಮಕ್ಕಳ ಹೊಡೆದಾಟ. ಹೊಡೆದಾಟದ ದೃಶ್ಯದಲ್ಲಿಯೂ ಅನಾವಶ್ಯಕ ಪರಿಕರಗಳನ್ನು ಬಳಸದೆ ಕೈ ಕೈ ಮಿಲಾಯಿಸುತ್ತಾ ಕೆಸರಲ್ಲಿ ಬಿದ್ದು ಹೊರಳಾಡುತ್ತಾ ಬೆನ್ನು ಕತ್ತು ಕೈ ಕಾಲಿಗೆ ಒದ್ದು ಗುದ್ದಾಡುತ್ತಾ ಮೈಸೂರು ದಸರಾ ಸಮಯದ ಪೈಲ್ವಾನ್ ಗುದ್ದಾಟದ ನೆನಪನ್ನು ತರಿಸುತ್ತಾರೆ. ಕೊನೆಗೆ ರಾಜೂಟಪ್ಪ ಅಲ್ಲಿಗೆ ಬಂದು ಇಬ್ಬರ ಜಗಳ ಬಿಡಿಸುತ್ತಾನೆ. "ಹಾಲು ಕುಡಿದ ಮಕ್ಕಳೇ ಬದುಕೋಲ್ಲ. ಇನ್ನು ವಿಷ ಕುಡಿದ ಮಕ್ಕಳು ಬದುಕುತ್ತಾರೋ. ಲೇ ಹೊನ್ನ ಅವರ ನೆಲ ಅವರಿಗೆ ಬಿಟ್ಟುಕೊಡೂ ದಾಂಡಿಗ" ಎಂದು ಬೈದು ಬುದ್ಧಿ ಹೇಳುತ್ತಾರೆ. ಇನ್ನು ಮುಂದೆ ನನಗೆ ಅನ್ನಕ್ಕೆ

ಏನು ಮಾಡೋದು ಎಂಬ ಪ್ರಶ್ನೆ ಬಂದಾಗ ಅದಕ್ಕೆ ವ್ಯವಸ್ಥೇ ಮಾಡೋಣ ಎಂದ ಇಬ್ಬರ ಜಗಳ ಬಿಡಿಸುತ್ತಾರೆ.

"ಎತ್ತಿದ ಗುದ್ದಲಿ ಇಳಿಸಬೇಡ, ಒಡೆಯರಿಗೆ ಎರಡು ಬಗೀಬೇಡ" ಎಂಬ ಗಾದೆ ಮಾತನ್ನು ಬಳಸಲಾಗಿದೆ. ಹೊನ್ನ ಒಪ್ಪಿದ್ದಕ್ಕೆ ಸಂತೋಷಪಟ್ಟು "ಶಿವ ಮೆಚ್ಚುತ್ತಾನೆ, ಸತ್ಯವಂತ ಅಂತ ಬಾಳುತೀಯಾ ಬಾ" ಎಂದು ಕರೆದುಕೊಂಡು ಹೋಗುತ್ತಾರೆ. ಹಿಂದೆ ಎಲ್ಲಾ ಪೋಲೀಸ್ ಸ್ಟೇಷನ್, ಕೋರ್ಟು ಇರುತ್ತಿರಲಿಲ್ಲ. ವ್ಯಾಜ್ಯ ಕದನ ಎಲ್ಲಾ ಪಂಚಾಯ್ತಿ ಕಟ್ಟೆಯಲ್ಲಿ ಮುಗಿದು ಹೋಗ್ತಾ ಇತ್ತು. ಇಲ್ಲವೆ ಊರಿನ ಹಿರಿಯರು ತೀರ್ಮಾನ ಮಾಡಿದರೆ ಕಿರಿಯರು ಅದೇ ರೀತಿ ನಡೆದುಕೊಳ್ಳುತ್ತಿದ್ದರು. ಹೊನ್ನ ಸಹಾ ರಾಚೂಟಪ್ಪನ ಮಾತಿಗೆ ಒಪ್ಪಿ ಜಮೀನು ಬಿಟ್ಟುಕೊಡುತ್ತಾನೆ. ಮುಂದಿನ ಸನ್ನಿವೇಶದಲ್ಲಿ ಕ್ಷೌರಿಕನೊಬ್ಬ ಮಂಗಳವಾರದಂದು ಗ್ರಾಹಕರಿಲ್ಲದೆ ಪರದಾಡುತ್ತಾನೆ. ಮಂಗಳವಾರ ಹಳ್ಳಿಯಲ್ಲಿ ಯಾರೂ ಚೌರಾ ಮಾಡಿಸುವುದಿಲ್ಲ. ಅದೊಂದು ನಂಬಿಕೆ. ಮಂಗಳವಾರ ಕ್ಷೌರಿಕ ಮುಖ ನೋಡಿದರೆ ದರಿದ್ರ ಬರುತ್ತದೆ ಎಂಬ ಮೂಢನಂಬಿಕೆ. ಇಂತಹ ಜಾನಪದ ನಂಬಿಕೆಯನ್ನು ಚಿತ್ರದಲ್ಲಿ ಬಳಸಲಾಗಿದೆ.



ಮುಂದಿನ ಸನ್ನಿವೇಶವೇ ಚಿತ್ರದ ಅತ್ಯುತ್ತಮ ಸನ್ನಿವೇಶದಲ್ಲಿ ಒಂದು. ರಾಜೀವ ರೈತನಾಗುವ ದಿನ ಹೊಲದಲ್ಲಿ ಎತ್ತಿನ ಜೋಡಿಯೊಂದಿಗೆ ಭೂಮಿ ಪೂಜೆ ಮಾಡುತ್ತಾನೆ. ಇದರಿಂದ ಜಾನಪದ ಮೌಲ್ಯದ ಜೊತೆಗೆ ಕೃಷಿಯ ಮೌಲ್ಯವು ಹೆಚ್ಚಿದೆ.

"ನಂಬಿಕೆ ಇಟ್ಟು ದುಡಿದರೆ ಭೂಮಿತಾಯಿ ಎಂದೂ ಕೈಬಿಡುವುದಿಲ್ಲ" ರಾಜಣ್ಣನವರ ಬಹುತೇಕ ಎಲ್ಲಾ ಚಿತ್ರಗಳಲ್ಲಿ ಯಾವುದೇ ಕೆಲಸ ಮಾಡುವ ಮುನ್ನ ಗುರುಹಿರಿಯರ ಪಾದಗಳಿಗೆ ಎರಗಿ ಆಶೀರ್ವಾದ ಪಡೆಯುವ ಸನ್ನಿವೇಶ ಹೇರಳವಾಗಿ ಕಂಡುಬರುತ್ತದೆ. ಜಾನಪದ ಸಂಸ್ಕೃತಿಯನ್ನು ಬಿಂಬಿಸುವ ಮುಂದುವರೆಸಿ ಕೊಂಡು ಹೋಗುವ ಪಾಠ ಹೇಳುವ ಚಿತ್ರಗಳು ರಾಜಣ್ಣನವರ ಚಿತ್ರಗಳಾಗಿವೆ. ಉಳುವ ಮುನ್ನ ರಾಜಣ್ಣ ಎತ್ತುಗಳ ಮೈದಡವುತ್ತಾರೆ. ಅದನ್ನು ಕಂಡ ರಾಚೂಟಪ್ಪ "ಆರಂಭಗಾರ ಯಾವಾಗಲೂ ಇಂತ ಮಮತೆ ತುಂಬಿಕೊಂಡಿರಬೇಕು" ಎಂದು ಅಕ್ಕರೆಯ ನುಡಿಗಳನ್ನಾಡುತ್ತಾರೆ.



ಚಿತ್ರದುದ್ದಕ್ಕೂ ರಾಜೀವನ ಜೊತೆ ರಾಚೂಟಪ್ಪನ ಪಾತ್ರ ಮನಸ್ಸಿನ ತುಂಬಾ ತುಂಬಿಕೊಳ್ಳುತ್ತದೆ. ಕರಿ ಕೋಟು, ತಲೆಗೆ ಕರಿ ಟೊಪ್ಪಿ, ಹಣೆಗೆ ವಿಭೂತಿ, ಕಣ್ಣಿನ ಅಂಚಿನಲ್ಲಿ, ವಿಭೂತಿ ಬೊಟ್ಟು, ಎಲೆ ಅಡಿಕೆ ಹಾಕಿಕೊಂಡ ಬಾಯಿ, ಕೈಯಲ್ಲಿ ಕೋಲು,

ಪಂಚೆ ಅಪ್ಪಟ ಗ್ರಾಮೀಣ ಭಾಷೆ ಮಾತನಾಡುವ ರಾಜೂಟಪ್ಪ ಜನಪದವೇ ಮೈ ತುಂಬಿ ಕೊಂಡಂತೆ ಭಾಸವಾಗುತ್ತದೆ. ಅದರಲ್ಲಿಯೂ ಬಾಲಕೃಷ್ಣರವರ ಅಭಿನಯ ಈ ಪಾತ್ರಕ್ಕೆ ಹೇಳಿ ಮಾಡಿಸಿದಂತಿದೆ. ಪ್ರತಿ ಹಳ್ಳಿಯಲ್ಲಿಯೂ ಇಂತಹ ಒಬ್ಬ ಹಿರಿಕ ಕಾಣಿಸಿಕೊಳ್ಳುತ್ತಾನೆ. ಪಂಚಾಯ್ತಿ ಮಾಡ್ತಾನೆ. ಅಣ್ಣ ತಮ್ಮಂದಿರ ಜಗಳ ಬಿಡಿಸ್ತಾನೆ. ಮನೆ ಪಾಲಾಗುವಾಗ ಬುದ್ಧಿ ಮಾತು ಆಡುತ್ತಾನೆ. ಆಸ್ತಿ ಅನ್ಯಾಯವಾಗಿ ಕಳ್ಳರ ಪಾಲಾಗುವುದನ್ನು ತಪ್ಪಿಸುತ್ತಾನೆ. "ಮನೆಗೊಂದು ಮಡಕೆ ಎಂಬಂತೆ ಊರಿಗೊಬ್ಬ ಹಿರಿಕ." ನಮ್ಮ ರಾಜೂಟಪ್ಪನವರು. ನೇಗಿಲು ಹಿಡಿಯುವ ಮುನ್ನ ರಾಜಣ್ಣ ಕೈಯಲ್ಲಿ ಬೊಗಸೆ ತುಂಬಾ ಮಣ್ಣು ಹಿಡಿದು ಕಣ್ಣಿಗೆ ಒತ್ತಿಕೊಳ್ಳುತ್ತಾನೆ.

"ಏನೇ ತಪ್ಪು ಮಾಡಿದರೂ ಅನ್ನ ಕೊಟ್ಟು ಕಾಪಾಡಮ್ಮ" ಎಂದು ಹೇಳುತ್ತಾ ನೇಗಿಲು ಉಳುತ್ತಾರೆ. ರಾಜೀವಪ್ಪನ ಮನೆ ಆಳು "ಉಳೊಕ್ಕೆ ನಾವಿಲ್ಲವೆ" ಎಂದರೂ ಬಿಡದೆ "ನಾಲ್ಕು ದಿನ ದುಡಿದರೆ ಎಲ್ಲಾ ಸರಿಹೋಗುತ್ತದೆ. ನಾನು ಉಳುವುದನ್ನು ಕಲಿತುಕೊಳ್ಳುವುದು ಯಾವಾಗ" ಎಂದು ತಾನೇ ಉಳಲು ಮುಂದಾಗುತ್ತಾರೆ. ಅಭ್ಯಾಸ ಇಲ್ಲದ ರಾಜೀವನಿಗೆ ಸಹಜವಾಗಿಯೇ ಕೈಯಲ್ಲಿ ಬೊಬ್ಬೆ ಬರುತ್ತದೆ. ಇದನ್ನು ಕಂಡ ಶಾರದೆ "ಪೆನ್ನು ಹಿಡಿಯುವ ಕೈ ನೇಗಿಲು ಹಿಡಿಯೋ ಹಾಗೆ ಆಯ್ತಲ್ಲ" ಎಂದು ನೊಂದುಕೊಳ್ಳುತ್ತಾಳೆ. "ಕೈ ಕೆಸರಾದರೆ ಬಾಯಿ ಮೊಸರು ಅಕ್ಕ" ಎಂದು ರಾಗವಾಗಿ ಹಾಡಿ ನೋವು ಮರೆಸುತ್ತಾರೆ. ಪೆನ್ ಹಿಡಿದ ಕೈಗಳಿಗೆ ಅನ್ನ ಕೊಡುವ ಕೈಗಳು ಚಿನ್ನದ ಕೈಗಳು ಎಂದು ವ್ಯವಹಾರದ ನುಡಿ ನುಡಿಯುತ್ತಾರೆ. ಹೌದು ನಿಜ ಎಲ್ಲರೂ ಪೆನ್ ಹಿಡಿದರೆ ನೇಗಿಲು ಹಿಡಿಯವವರ್ಯಾರು, ಪೆನ್ ಹಿಡಿವ ಕೈಗಳಿಗೆ ಅನ್ನ ಕೊಡುವವರ್ಯಾರು. ಇತ್ತೀಚೆಗೆ ಹಳ್ಳಿಗಳ ಕಡೆ ವಲಸೆ ಹೆಚ್ಚಾಗಿದೆ. ಯಾರಿಗೂ ಕೃಷಿ ಬೇಕಾಗಿಲ್ಲ. ವಿದ್ಯಾವಂತ ತಕ್ಷಣ ಹಳ್ಳಿ ಬಿಟ್ಟು ಪಟ್ಟಣಕ್ಕೆ ಬರುತ್ತಾರೆ. ಆರಂಭ ಎನ್ನುವುದು ಗೌರವ ತರುವ ಹುದ್ದೆಯಲ್ಲ. ಪಟ್ಟಣದ ಗುಮಾಸ್ತನಾದರೂ ಪರವಾಗಿಲ್ಲ. ರೈತನಿಗೆ ಬೆಲೆಯಿಲ್ಲ. ವಿದ್ಯಾವಂತರೆಲ್ಲ ಪಟ್ಟಣ ಸೇರಿದರೆ ಹಳ್ಳಿ ಗತಿ ಏನು? ನಾವು ಪುನಃ ಕೃಷಿಗೆ ಮರಳೋಣ ಎಂದು ಈ ಸಿನೆಮಾ ಬಿಂಬಿಸುತ್ತದೆ.

"ನಮಗೆ ವಿದ್ಯೆ ಬೇಕು ವಿದ್ಯೆ ಬಂದ ತಕ್ಷಣ ಭೂಮಿ ಬೇಡವೇ, ಕಾಗದ ಪೆನ್ನು ಪುಸ್ತಕಗಳನ್ನು ತಿನ್ನಲು ಸಾಧ್ಯವೇ? ಬರೆಯುವ ಕೈ ಅನ್ನ ಉಣ್ಣದೆ ಗಾಳಿ ಕುಡಿದು ಜೀವಿಸಲು ಸಾಧ್ಯವೇ?" ಭಾರತ ದೇಶದ ಅತಿ ದೊಡ್ಡ ಜನಸಂಖ್ಯೆ ಹಳ್ಳಿಯಲ್ಲಿ ವಾಸ ಮಾಡುತ್ತಾರೆ. ಅತಿ ಮುಖ್ಯ ಉದ್ಯೋಗ ಕೃಷಿ. ಈಗ ಕೃಷಿಕನಿಗೆ ಯಾರೂ ಹೆಣ್ಣು ಕೊಡಲು ಮುಂದಾಗುವುದಿಲ್ಲ. ವರ್ಷವಿಡಿ ದುಡಿದರೂ ಹೊಟ್ಟೆ ತುಂಬಿಸಿಕೊಳ್ಳಲಾಗದ ಪರಿಸ್ಥಿತಿ, ಸಾಲದ ಹೊರೆ, ಮಳೆ ಕೈ ಕೊಡುತ್ತದೆ, ಮಧ್ಯವರ್ತಿಗಳ ಕಾಟ, ಕೂಲಿಯಾಳುಗಳು ಸಿಗುವುದಿಲ್ಲ, ಬೆಳೆದ ಬೆಳೆಗೆ ನ್ಯಾಯಯುತ ಬೆಲೆ ಸಿಗುವುದಿಲ್ಲ. ಸರ್ಕಾರದ ಧೋರಣೆ ದೂರದೃಷ್ಟಿ ಇರದ ನಾಯಕರು ಒಂದೇ ಎರಡೇ ಎಲ್ಲಕ್ಕಿಂತ ಇಲ್ಲಿ ದೈಹಿಕ ಶ್ರಮಕ್ಕೆ ಮೊದಲ ಆದ್ಯತೆ. ಕುಂತು ಹಣ ಎಣಿಸಲು ಸಾಧ್ಯವಿಲ್ಲ. ಬಿಸಿಲು, ಗಾಳಿ, ಚಳಿ ಎನ್ನದೆ ದುಡಿಯಬೇಕು. ನಾಯಿಯಂತೆ ಬೆಳೆದ ಬೆಳೆಗೆ ಕಾವಲು ಕಾಯಬೇಕು.ಬರಗಾಲ ಪ್ರವಾಹ ಬಂದರೆ ಎದುರಿಸಬೇಕು, ರೈತರ ಸಮಸ್ಯೆ

ಒಂದೇ, ಎರಡೇ. ಇಂದಿನ ಯುವ ಪೀಳಿಗೆಯವರು ಯಾರೂ ನೇಗಿಲು ಹಿಡಿಯಲು ಧೈರ್ಯ ಮಾಡುವುದಿಲ್ಲ. ಕಡಿಮೆ ಹಣದಲ್ಲಿ ಕಡಿಮೆ ಸಮಯದಲ್ಲಿ ಹೆಚ್ಚು ಶ್ರಮವಿಲ್ಲದೆ ಅತಿ ಹೆಚ್ಚು ಲಾಭ ಗಳಿಸುವ ಕಡೆ ಗಮನಹರಿಸುತ್ತಾರೆ. ಹಳ್ಳಿಯ ಸಾಮಾನ್ಯ ರೈತ ಕೂಡ ಇಂದು ಮಕ್ಕಳನ್ನು ಪಟ್ಟಣದ ಇಂಗ್ಲೀಷ್ ಮಾಧ್ಯಮ ಶಾಲೆಗೆ ಕಳುಹಿಸುತ್ತಾನೆ. ಓದಿ ಡಾಕ್ಟರ್, ಇಂಜಿನಿಯರ್ ಆಗಲು ಪ್ರೇರೇಪಿಸುತ್ತಾನೆ. ನಾನು ಕೃಷಿ ಮಾಡಿ ಹಾಳಾದೆ, ನನ್ನ ಮಕ್ಕಳು ಇಂತಹ ತಪ್ಪು ಮಾಡದಿರಲಿ, ಅವರಾದರೂ ಓದಿ ದೊಡ್ಡ ಆಫೀಸರ್ ಆಗಿ ಸುಖವಾಗಿರಲಿ ಎಂಬ ಕನಸು ಕಾಣುತ್ತಾನೆ. ಆದರೇ ಸಿನೆಮಾದಲ್ಲಿ ರಾಜಣ್ಣನವರು ಕೃಷಿಯ ಮಹತ್ವವನ್ನು ಹೆಚ್ಚಿಸಿ "ಮರಳಿ ಮಣ್ಣಿಗೆ" ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ರಾಚೂಟಪ್ಪನ ಮಗ ಶಿವಲಿಂಗು ಜಿಮ್‌ನಲ್ಲಿ ಕಸರತ್ತು ನಡೆಸುವುದು. ಮೂಲತಃ ಇವನು ರೈತನ ಮಗ ಹಳ್ಳಿಯಲ್ಲಿ ಹುಟ್ಟಿ ಬೆಳೆದರು ಓದುವ ನೆಪದಲ್ಲಿ ಪಟ್ಟಣಕ್ಕೆ ಸೇರಿ ಪಟ್ಟಣಕ್ಕೆ ಹಾರಿ ಅಲ್ಲಿನ ಶೋಕಿಗೆ ಬಿದ್ದವನು. ಮೈ ಹುರಿಗೊಳಿಸಲು ವರ್ಕ್ ಔಟ್ ಮಾಡುತ್ತಾನೆ. ದುಡಿಯಲು, ಮಣ್ಣು ಮುಟ್ಟಲು ಇವನಿಗೆ ಆಗುವುದಿಲ್ಲ. ಪಟ್ಟಣದ ಶೋಕಿ ಬಟ್ಟೆ, ಬರೆ, ಸ್ಟೈಲ್‌ಗೆ ಮಾರುಹೋದವನು. ವಿಲಾಯಿತಿ ಟೋಪಿ, ಚಡ್ಡಿ, ಶೂ ಹಾಕಿಕೊಂಡು ಬಂದು ಹಳ್ಳಿಯಲ್ಲಿ ಶೋಕಿಧಾರನಂತೆ ಫೋಸ್ ಕೊಡುತ್ತಾರೆ. ಅರೆಬೆಂದ ಮಡಿಕೆ ಪರೀಕ್ಷೆಯಲ್ಲಿ ಫೇಲಾಗಿ ಹಳ್ಳಿಗನೂ ಆಗದೆ, ಪಟ್ಟಣದಲ್ಲಿ ಇರಲಾಗದೆ ಅಲ್ಲಿಂದಲೂ ಓಡಿ ಬಂದು ಹಳ್ಳಿಗೆ ಬೀಳುವ ನಾಲಾಯಕ್ಕು ಮನುಷ್ಯ. ಅದೇ ಇನ್ನೊಂದು ಸನ್ನಿವೇಶದಲ್ಲಿ ಕೇಶವನ ಸ್ನೇಹಿತನನ್ನು ರಾಜೀವ ಓದಿಸುವ ದೃಶ್ಯ ಇದೆ. ವಿದ್ಯಾವಂತರಿಗೆ ರಾಜೀವ ಪ್ರೋತ್ಸಾಹಿಸುತ್ತಾನೆ.

ರಾಜೀವ ತನ್ನ ಅಕ್ಕನ ಮಕ್ಕಳೊಂದಿಗೆ ಕೇಶವನ ಸ್ನೇಹಿತನನ್ನು ಓದಿಸುತ್ತಾನೆ. ಅವನು ಸಹಾ ಅಷ್ಟೇ ಸ್ನೇಹ ಸಲಿಗೆಯಿಂದ ಚೆನ್ನಾಗಿ ಓದಿ ರಾಜೀವನ ಬಗ್ಗೆ ಅಪಾರ ಪ್ರೀತಿ ಗೌರವ ಇಟ್ಟುಕೊಳ್ಳುತ್ತಾನೆ. ಈ ಮೊದಲೇ ಚರ್ಚೆಗೆ ಬಂದ ವಿಷಯ ಎಂದರೆ ಸಿನೆಮಾದ ಕಥಾವಸ್ತು ಭೂತಾಯಿ ಮೇಲೆ ನಂಬಿಕೆ ಇಟ್ಟು ಕೃಷಿಗೆ ತೊಡಗಿಕೊಳ್ಳುವುದಾಗಿದೆ. ತನ್ನ ಅಕ್ಕನ ಮಕ್ಕಳ ಓದಿಗೆ ಹೆಚ್ಚಿನ ಹಣದ ಅವಶ್ಯಕತೆ ಬೀಳುವುದನ್ನು ಮನಗಂಡ ರಾಜೀವ ನೇರಳೆ ಗುಡ್ಡದ ಬಳಿಯ ಬಂಜರು ಭೂಮಿ ೨೫ ಎಕರೆ ಜಮೀನು ಖರೀದಿಸಲು ನಿರ್ಧರಿಸುತ್ತಾನೆ. ಹಣಕ್ಕಾಗಿ ಮತ್ತದೇ ರಾಚೂಟಪ್ಪನ ಸಹಾಯ ಬೇಡುತ್ತಾನೆ.

"ಮಾತಾಡೋಕ್ಕೋಗಿ ಮನೆ ತಲೆ ಮೇಲೆ ಹಾಕಿಕೊಂಡಂತೆ" "ಆ ನೇರಳೆ ಗುಡ್ಡದ ಜಮೀನು ಬಂಜರು ಭೂಮಿ ಅದು ಕೃಷಿಗೆ ಯೋಗ್ಯವಾಗಿದ್ದರೆ ಎಂದೋ ಅದು ಎಲ್ಲರ ಕಣ್ಣಿಗೆ ಬೀಳುತ್ತಿತ್ತು, ಆ ಜಮೀನು ಖಡಾಖಂಡಿತ ಬೇಡ" ಎಂದು ರಾಚೂಟಪ್ಪ ಗಿಣಿಗೆ ಹೇಳಿದಂತೆ ರಾಜೀವನಿಗೆ ಬುದ್ಧಿ ಹೇಳುತ್ತಾನೆ. "ಕಬ್ಬು ಸಿಹಿ ಇದೆ ಅಂತಾ ಬುಡ ಕೂಡಾ ತಿಂದು ಬಿಡೋದೆ" ಎಂಬ ಮಾತನ್ನು ಸನ್ನಿವೇಶಕ್ಕೆ ತಕ್ಕಂತೆ ಬಳಸಲಾಗಿದೆ. ಆಲಸ್ಯ ಅಮೃತಂ ವಿಷಂ ತಡಮಾಡುವುದು ಬೇಡ, ಆ ಜಮೀನಿನಲ್ಲಿ ಚಿನ್ನದ ಬೆಳೆ ತೆಗೆಯಬಹುದು ಎಂದು ರಾಜೀವ ರಾಚೂಟಪ್ಪನಿಗೆ ಮನ ಒಲಿಸಿ ಸಾಲ ತೆಗೆದುಕೊಳ್ಳುತ್ತಾನೆ. ಊರಿನಲ್ಲಿ ಈ ವಿಷಯ ಚರ್ಚೆ ಎಲ್ಲರೂ ರಾಜೀವ ತಪ್ಪು ಮಾಡಿದ್ದಾರೆ "ಈ ಜಮೀನಿನಲ್ಲಿ ರೈತ ರಸ್ತೆಗೆ

ಕಲ್ಲು ಹೊಡೆಯಾಕೆ ತಗೊಂಡಿದಾನಾ" ಎಂದು ಹಾಸ್ಯ ಮಾಡುತ್ತಾನೆ. ಇಡೀ ಬೆಟ್ಟಗುಡ್ಡಗಳ ಜಾಗ ಇಲ್ಲಿ ಫಲವತ್ತತೆ ಇಲ್ಲ. ಇದು ಆಗದ ಕೆಲಸ ಎಂದು ರಾಜೂಟಪ್ಪ ನುಡಿದಾಗ

"ಆಗದು ಎಂದು,
ಕೈಲಾಗದು ಎಂದು
ಕೈ ಕಟ್ಟಿ ಕುಳಿತರೆ ಆಗದು ಕೆಲಸವು ಮುಂದೂ"

ಎಂದು ಹಾಡುತ್ತಾನೆ. ಇದು ಅತ್ಯಂತ ಜನಪ್ರಿಯ ಗೀತೆ. ಈ ಹಾಡಿನಲ್ಲಿಯೇ ಡೈನಾಮ್ ಇಡಿಸಿ ಬೆಟ್ಟ ಸಿಡಿಸುತ್ತಾನೆ. ನೆಲ ಸಮಗೊಳಿಸಿ ಅಲ್ಲಿಯೇ ಬೀಜ ಬಿತ್ತಿ ನಾಟ ಮಾಡಿ ಗದ್ದೆಯನ್ನಾಗಿ ಪರಿವರ್ತಿಸುತ್ತಾನೆ. ಇಡೀ ಕುಟುಂಬವೇ ಸೇರಿ ಕೃಷಿಗೆ ತೊಡಗಿಸಿಕೊಳ್ಳುತ್ತದೆ. ಭತ್ತದ ಸಸಿ ನೆಟ್ಟು ನೀರು



ಹಾಯಿಸಿ ಸಸಿ ಬೆಳೆದು ಕಾಳು ಬಲಿತು ಭತ್ತವಾಗಿ, ನಂತರ ಕಟಾವು ಮಾಡಿ ಭತ್ತದ ರಾಶಿ ಮನೆ ಮುಂದೆ ಬೀಳುತ್ತದೆ. ಅದನ್ನು ತುಂಬಿ ಎತ್ತಿನ ಗಾಡಿಗೆ ಹಾಕಿಕೊಂಡು ಬರುವ ಹೊತ್ತಿಗೆ ಹಾಡು ಮುಗಿಯುತ್ತದೆ. ಒಣಜಮೀನಿನಲ್ಲಿ ಬೋರ್‌ವೆಲ್ ಕೊರೆಸಿ ನೀರು ಹಾಯಿಸಿ ಜಮೀನಿನಲ್ಲಿ ಬಂಗಾರ ಬೆಳೆ ಬೆಳೆದ ಕೀರ್ತಿ ರಾಜೀವನದ್ದಾಗುತ್ತದೆ. ಇದೇ ಹಾಡಿನಲ್ಲಿ ಸರ್.ಎಂ. ವಿಶ್ವೇಶ್ವರಯ್ಯನವರ ಸಾಧನೆಯನ್ನು ತೋರಿಸಲಾಗಿದೆ. ಕೃಷ್ಣರಾಜ ಸಾಗರ ಅಣೆಕಟ್ಟು ಕೆ.ಆರ್.ಎಸ್. ಕಾವೇರಿ ನದಿ, ಚಿನ್ನದ ಪದಕ ಪಡೆದ ವಿಶ್ವೇಶ್ವರಯ್ಯ ಇವೆಲ್ಲವೂ ಹಾಡಿನ ರೂಪದಲ್ಲಿ ಬಂದು ಹೋದ ಕೆಲ ದೃಶ್ಯಗಳಾದರೂ ಜನಪ್ರಿಯ ದೃಶ್ಯಗಳಾಗಿದ್ದು ಮನಸ್ಸಿಗೆ ಹಿತ ನೀಡುವ



ದೃಶ್ಯಗಳಾಗಿವೆ. ರೈತನ ಜೀವನವನ್ನು ಹಾಡಿನಲ್ಲಿ ತೋರಿಸಲಾಗಿದೆ. ರೈತ ಸಾಲ ಮಾಡುವುದು, ಮಳೆ ಕೈಕೊಡುವುದು ಇವೆಲ್ಲವೂ ಸಹಜ ಆದರೆ ಅದನ್ನು ಮೀರಿ ರೈತ ಧೈರ್ಯ ಮಾಡಿ ಜೀವನ ಕಟ್ಟಿಕೊಳ್ಳಬೇಕು ಎಂಬ ಸಂದೇಶ ಸಾರುವ ಸಿನೆಮಾ ಇದು. ಎರಡೂವರೆ ಗಂಟೆ ಸಿನೆಮಾ ನೋಡಿ ಹೊರಬರುವ ರೈತ ಕೃಷಿಯನ್ನು ನಂಬುವಂತೆ ಮಾಡುತ್ತದೆ. ಬಂಗಾರದ ಬೆಳೆ ಮನೆ ಸೇರುತ್ತದೆ. ಹೊಸ ಮನೆ ಕಟ್ಟುತ್ತಾನೆ. ಸಾಲ ತೀರಿಸುತ್ತಾನೆ. ಮಾದರಿ ರೈತ ಎನಿಸಿಕೊಳ್ಳುತ್ತಾನೆ. ಆಗ ಇಡೀ ಹಳ್ಳಿ ಹೊಗಳುತ್ತದೆ. "ಅನ್ನ ಹಾಕಿದ ಮನೆ ಕೆಡೋಲ್ಲ. ಗೊಬ್ಬರ ಹಾಕಿದ ಹೊಲ ಹಾಳಾಗಲ್ಲ" ಎಂಬ ಗಾದೆ ಪ್ರಯೋಗ ಸೂಕ್ತ ಸಮಯದಲ್ಲಿ ಬಳಸಲಾಗಿದೆ. ಕೈಸಾ ನಿಯತ್ ವೈಸಾ ಬರ್‌ಕತ್ ಎಂದು ಮುಸಲ್ಮಾನ ಸಹಾ ತನ್ನ ಭಾಷೆಯಲ್ಲಿ

ಹೊಗಳುತ್ತಾನೆ. ಒಟ್ಟಾಗಿ ಅಂದಿನಿಂದ ರಾಜೀವನ ದುಡಿಮೆಗೆ ಪ್ರತಿಫಲ ದೊರೆಯುತ್ತದೆ. ಇಷ್ಟೆಲ್ಲಾ ಶ್ರಮಜೀವಿ ಆದರೂ ವಿದ್ಯಾವಂತನಾದರೂ ರಾಜೀವ ಎಂದಿಗೂ ಮಣ್ಣಿನ ಮಗನಂತಿರುತ್ತಾನೆ. ಸಿನಿಮಾದಲ್ಲಿ ತಾತ್ವಿಕ ಚಿಂತನೆಯ ಸನ್ನಿವೇಶಗಳು ಕಡಿಮೆ ಕಂಡುಬಂದರೂ ಸಮಯ ಮುಖ್ಯವಾಗಿದೆ. ನಾವು ನೋಡುವ ಸನ್ನಿವೇಶ ಚಿಂತನೆಗೆ ಹೆಚ್ಚು ಮೌಲ್ಯವನ್ನು ಸಾಧ್ಯವಾಗಿಸಲು ಸತ್ವಯುತವಾಗಿದೆಯೇ ಎಂಬುದನ್ನು ಗ್ರಹಿಸಬೇಕಾಗುತ್ತದೆ.

ಆದರೆ ರಾಚೂಟಪ್ಪನ ಮಗ ಡೈನಿಂಗ್ ಟೇಬಲ್ ಮೇಲೆ ಕುಳಿತು ಚಮಚದಲ್ಲಿ ಊಟ ಮಾಡುತ್ತಿದ್ದಾನೆ. ಅದನ್ನು ಕಂಡ ರಾಚೂಟಪ್ಪ ದೇವರು ಕೈ ಕೊಟ್ಟಿದ್ದಾನೆ. ನೆಲದ ಮೇಲೆ ಕುಳಿತು ಸರಿಯಾಗಿ ಊಟ ಮಾಡು ಎಂದು ಬುದ್ಧಿವಾದ ಹೇಳುತ್ತಾನೆ. ಕೈಕಾಲು ತೊಳೆದು ಹಣೆಗೆ ವಿಭೂತಿ ಹಚ್ಚು ಎಂದು ಹೇಳುವ ರಾಚೂಟಪ್ಪ ಸದಾ ಕಾಲ ಪಕ್ಕ ಹಳ್ಳಿಗನಂತೆ ವಿಭೂತಿ ಧರಿಸಿರುವುದು ಜಾನಪದ



ಶೈಲಿಯ ಒಂದು ಉದಾಹರಣೆ. ಸದಾ ತನ್ನ ಮಗನನ್ನು ತಿದ್ದಲು ಪ್ರಯತ್ನಿಸುತ್ತಾನೆ. ಶಿವಲಿಂಗು ವಿದ್ಯೆ ಕಲಿಯಲಾಗದೆ ಫೇಲಾಗಿ ಹಳ್ಳಿಗೆ ಬಂದಿದ್ದಾನೆ. ಆದರೂ ಆಧುನಿಕ ಶೈಲಿಗೆ ಮಾರುಹೋಗಿದ್ದಾನೆ. ವಿದೇಶಿಗನಂತೆ ಬಟ್ಟೆ ಧರಿಸುತ್ತಾನೆ. ಟಸ್ಸು ಬುಸ್ಸು ಇಂಗ್ಲೀಷ್ ಮಾತನಾಡುತ್ತಾನೆ. ಪಟ್ಟಣದ ಮೋಹಕ್ಕೆ ಬಿದ್ದ ಯುವ ಪೀಳಿಗೆ ಜನ ಹೇಗೆ ಕೃಷಿಯನ್ನು ತ್ಯಜಿಸುತ್ತಾರೆ, ಎಲ್ಲರಿಗೂ ಅಧಿಕಾರಿಗಳಂತೆ ಆಳುಕಾಳು ಕಾರು ಬಂಗಲೆ ಬೇಕು ಎನ್ನುವ ಮೋಹ ಬಂದು ಬಿಡುತ್ತದೆ.

ಇಂತಹವರ ನಡುವೆ ರಾಜೀವ ಕೃಷಿ ನಂಬಿ ಬೆಳೆದು ತೆಗೆದು ತನ್ನ ಆರ್ಥಿಕ ಪರಿಸ್ಥಿತಿ ಸುಧಾರಿಸಿಕೊಂಡಿದ್ದಾನೆ. ಚಿತ್ರದ ಪ್ರತಿಯೊಂದು ಸನ್ನಿವೇಶವನ್ನು ವಿಶ್ಲೇಷಿಸುವುದು ನನಗೆ ಆಸಕ್ತಿ ಎನಿಸಿದರೂ ಕೆಲವು ದೃಶ್ಯಗಳು ತುಂಬಾ ಅತಿರೇಕದಿಂದ ಕೂಡಿದೆ. ಅದೇನೆಂದರೆ ಅತಿಯಾದ ಆದರ್ಶ. ಸಾಮಾನ್ಯ ಮನುಷ್ಯನಿಗೆ ತುಂಬಾ ಕಷ್ಟ. ಇಂದಿನ ಕಾಲಕ್ಕೆ ಅದನ್ನು ಪಾಲಿಸುವುದು ತುಂಬಾ ಕಷ್ಟ. ತ್ಯಾಗ ಬಯಸುವ ಮಕ್ಕಳ ಮದುವೆ ನಂತರ ತನ್ನ ಮದುವೆ ಎಂದು ನಿರ್ಧರಿಸುವುದು. ಲಕ್ಷ್ಮಿ ಸಹಾ ಆ ದಿನಕ್ಕಾಗಿ ಕಾಯುವೆ ಎನ್ನುವುದು ಜೀರ್ಣಿಸಿಕೊಳ್ಳುವುದು ಕಷ್ಟ. ಈ ಮಧ್ಯೆ ಕುದುರೆ ಗಾಡಿ ಕೊಂಡ ಮೇಲೆ ಜಾತ್ರೆಗೆ ರಾಜೀವ ಲಕ್ಷ್ಮಿ ಇಬ್ಬರೇ ಹೊರಡುತ್ತಾರೆ. ರಾಜೀವ ವಯಸ್ಸಿಗೆ ಬಂದ ಹುಡುಗಿ ಜೊತೆ ತಾವಿಬ್ಬರೇ ಹೋದರೆ ನೋಡಿದ ಜನ ಏನೆಂದು ಕೊಳ್ಳುತಾರೆ ಎನ್ನುವ ಮಾತು ಹೇಳುತ್ತಾನೆ. ಶಾರದಕ್ಕ ಏನು ಪರವಾಗಿಲ್ಲ ಅವಳು ನಿನ್ನನ್ನು ಮದುವೆ ಆಗುವ ಹುಡುಗಿ ಎಂದು ಧೈರ್ಯ ತುಂಬಿ ಹೇಳಿ ಕಳುಹಿಸುತ್ತಾರೆ. ಆ ಕಾಲಕ್ಕೆ ಹುಡುಗ ಹುಡುಗಿ ಅದು ವಯಸ್ಸಿಗೆ ಬಂದವರು ಈ ರೀತಿ ಸುತ್ತಾಡುವುದು ಒಂದು ಸವಾಲೇ ಸರಿ. ಆದರೆ ಸ್ವಾತಂತ್ರ್ಯ ಬಯಸುವುದು ಜನಪದದ ಸೊಗಡು ಎಂಬುದನ್ನು ಮರೆಯಬಾರದು.



ಮುಂದಿನ ದೃಶ್ಯದಲ್ಲಿ ಜಾತ್ರೆಯ ಸನ್ನಿವೇಶವಿದೆ. ಅದು ಒಂದು ನಿಜವಾದ ಜಾತ್ರೆಯ ಚಿತ್ರೀಕರಣವಾಗಿದ್ದು, ಸಿನೆಮಾಗಾಗಿ ಸಿದ್ಧವಾದ ಜಾತ್ರೆಯಾಗಿರದೆ ರಥೋತ್ಸವ ನಡೆಯುವ ಸನ್ನಿವೇಶದಲ್ಲಿ ಚಿತ್ರೀಕರಿಸಲಾಗಿದೆ. ಸಾವಿರಾರು ಜನರ ನಡುವೆ ನೂರಾರು ದನಗಳ ಜಾತ್ರೆ, ತೇರು ರಥ, ಉತ್ಸವ ಮೂರ್ತಿ, ತೇರಿನ ಮೇಲೆ ಬಾಳೆಹಣ್ಣು ಎಸೆಯುವ ಭಕ್ತರು ಎಲ್ಲವೂ ಅತ್ಯಂತ ನೈಜವಾಗಿದೆ. ಸ್ನಾನ ಮಾಡಿ ಮಡಿಯುಟ್ಟು ಬರುವ ರಾಜೀವ ಲಕ್ಷ್ಮಿ ಸಹಾ ತೇರಿಗೆ ಬಾಳೆಹಣ್ಣು ಧವನ ಎಸೆದು ಭಕ್ತಿ ಮೆರೆಯುತ್ತಾರೆ. ರಾಜಣ್ಣನವರ ಚಿತ್ರದಲ್ಲಿ ಹಲವಾರು ಇಂತಹ ದೃಶ್ಯಗಳನ್ನು ನೋಡಬಹುದು. ಗೋವಿಂದ ಗೋವಿಂದ ಎಂದು ಹಳ್ಳಿಗರು ಭಕ್ತಿಯಿಂದ ತೇರು ಎಳೆಯುತ್ತಾರೆ. ಎತ್ತಿನ ಬಂಡಿಯ ಮೇಲೆ ಕುಳಿತು ನೃತ್ಯ ನೋಡುತ್ತಾ ತಾವೇ ನೃತ್ಯಗಾರರಂತೆ ಕಲ್ಪಿಸಿ ಕೊಳ್ಳುವುದು ಸುಂದರ ಹಾಡಿಗೆ ಮುನ್ನುಡಿಯಾಗುತ್ತದೆ.



"ಆಹಾ ಮೈಸೂರು ಮಲ್ಲಿಗೆ ದುಂಡು ಮಲ್ಲಿಗೆ .. .. .."

ಸಮುದ್ರದ ಅಲೆಗಳೊಂದಿಗೆ ತೇಲುತ್ತಾ ನೂರಾರು ಬೆಸ್ತರು ಹಾಡುತ್ತಾ ಜಾನಪದ ಶೈಲಿಯ ಉಡುಗೆ ತೊಡುಗೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ಸನ್ನಿವೇಶಕ್ಕೆ ತಕ್ಕಂತೆ ಮೀನು ಹಿಡಿಯುವ ಬಲೆ, ದೋಣಿ ಎಲ್ಲವೂ ನೋಡಲು ಕಣ್ಣಿಗೆ ಹಬ್ಬ. ತೆಂಗಿನ ಮರ, ಸಮುದ್ರ ತೀರಗಳ ನಡುವೆ ರಾಜೀವ ಲಕ್ಷ್ಮಿ ಬೆಸ್ತರಂತೆ ಉಡಿಗೆ ತೊಟ್ಟು ನಿಜ ಬೆಸ್ತರಂತೆ ಕಂಗೊಳಿಸುತ್ತಾರೆ.



ಇಡೀ ಚಿತ್ರ ಹಳ್ಳಿಗೆ ಸಂಬಂಧ ಪಟ್ಟಿರುವುದರಿಂದ ಹಳ್ಳಿಯಲ್ಲಿ ನಡೆಯುವ ಸಣ್ಣ ಪುಟ್ಟ ಜಗಳ, ಅನ್ಯಾಯ, ಸುಳ್ಳು, ಕಳ್ಳತನ, ಇವೆಲ್ಲಕ್ಕಿಂತ ಹೊರತಾಗಿಲ್ಲ. ಹೊನ್ನ ರಾಜೀವಪ್ಪನ ಹೊಲದಲ್ಲಿ ಬೆಳೆ ಕದಿಯಲು ಬಂದು ಸಿಕ್ಕಿ ಬೀಳುತ್ತಾನೆ. ಕಾರಣ ಕೇಳಿದಾಗ ಜಮೀನು ಹೋದ ಮೇಲೆ ಹೊಟ್ಟೆ ಪಾಡಿಗೆ ಏನು ಮಾಡುವುದು ಎನ್ನುವ ನಿರುದ್ಯೋಗದ ಮಾತಾಡುತ್ತಾನೆ. ರಾಜೀವ ಇನ್ನಿತರ ರೈತರು ಭೂಮಿ ನಂಬಿ ಬದುಕಬೇಕು. ಕಳ್ಳತನವನ್ನಲ್ಲ. ನಾನು ನಿಮಗೆ ಜಮೀನು ಕೊಡುತ್ತೇನೆ. ಕೃಷಿ ಮಾಡಿ ಎಂದು ಹೇಳಿ ಕಳ್ಳತನವನ್ನು

ಕ್ಷಮಿಸಿ ಹಲವು ರೈತರಿಗೆ ಜಮೀನಿನ ವ್ಯವಸ್ಥೆ ಮಾಡುತ್ತಾನೆ. ಹಲವು ರೈತರು ರಾಜೀವನಿಂದ ಪ್ರೋತ್ಸಾಹಗೊಂಡು ಕೃಷಿಗೆ ತೊಡುಗುತ್ತಾರೆ.

ಬಹುಷಃ ಇದೇ ದೃಶ್ಯ ಹಲವು ರೈತರಿಗೆ ಇಷ್ಟವಾಗಿರಬಹುದು. ತನ್ನ ಅಕ್ಕನ ಮಕ್ಕಳಿಗೆ ಅದ್ದೂರಿಯಾಗಿ ಮದುವೆ ಮಾಡಿ ನಂತರ ತಾವು ದೇವಸ್ಥಾನದಲ್ಲಿ ಸರಳವಾಗಿ ಮದುವೆ ಆಗುವ ರಾಜೀವನ ಸರಳ ಆದರ್ಶ ರೈತ ಎನಿಸಿಕೊಂಡಿದ್ದಾನೆ. ರಾಜೀವಪ್ಪನ ಮಗನಿಗೆ ಹೆಗ್ಗಣ ದೇಶಾಂತರ ಹೋದರೂ ನೆಲ ಕೆರೆಯುವುದನ್ನು ಬಿಡುವುದಿಲ್ಲ ಎಂದು ಹೇಳುತ್ತ ಅವನನ್ನು ಮೂದಲಿಸಿದರೂ ಅವನಿಗೂ ಮದುವೆ ಮಾಡಿಸುತ್ತಾನೆ. ಮದುವೆ ದೃಶ್ಯದಲ್ಲಿಯೂ ಹಳ್ಳಿಯ ಮದುವೆಯಂತೆ ಕಳಸ, ಮುತ್ತೈದೆಯರು, ಓಲಗ, ಸಮೂಹ ಭೋಜನ ಎಲ್ಲವೂ ಒಂದಕ್ಕೊಂದು ಪೂರಕವಾಗಿ ಚಿತ್ರಿಸಲಾಗಿದೆ.

"ಬೆಟ್ಟ ಭೂತಾಯಿ ಆಗಲು ಸಾಧ್ಯವಾಗುತ್ತಿತ್ತಾ" ಎಂದು ತಮ್ಮ ಮದುವೆ ನಿಧಾನವಾಗಿ ಆಗಲು ಕಾರಣ, ಈ ಬೆಟ್ಟವನ್ನು ಜಮೀನನ್ನಾಗಿ ಪರಿವರ್ತಿಸಲು ತೆಗೆದುಕೊಂಡ ಕಾರಣದ ಬಗ್ಗೆ ರಾಜೀವ ಲಕ್ಷ್ಮಿಗೆ ತಿಳಿಸುತ್ತಾನೆ. ನೆಲದ ಋಣ ಎಲ್ಲರಿಗೂ ಸಿಕ್ಕುವುದಿಲ್ಲ. ಅದಕ್ಕೂ ಪುಣ್ಯ ಬೇಕು. ಭೂಮಿಗೂ ನಮಗೂ ಅವಿನಾಭಾವ ಸಂಬಂಧ ಬೆಳೆಯಬೇಕು. ಈ ಸಿನೆಮಾ ನೋಡಿದವರೆಲ್ಲರೂ ಭೂಮಿ ಮೇಲೆ ಪ್ರೀತಿ ಬರುವ ಭಾವನೆ ತನ್ನ ತಾನೇ ಜಾಗೃತಗೊಳ್ಳುತ್ತದೆ. ರಾಜೀವ ಊರ ಆದರ್ಶ ನಾಯಕನಾಗುತ್ತಾನೆ. ಸುಗ್ಗಿ ಸಮಾರಂಭಕ್ಕೆ ಬಂದ ಕೃಷಿ ಅಧಿಕಾರಿಗಳು ರಾಜೀವನನ್ನು ಹೊಗಳುತ್ತಾರೆ. ಇದೇ ಸಂದರ್ಭದಲ್ಲಿ ಜಾನಪದ ಗೀತೆಯೊಂದನ್ನು ಸಿನೆಮಾದಲ್ಲಿ ಬಳಸಲಾಗಿದೆ.

"ಹನಿ ಹನಿ ಗೂಡಿದರೆ ಹಳ್ಳ,  
ತೆನೆ ತೆನೆಗೂಡಿದರೆ ಬಳ್ಳ"  
"ಸಾಲ ಸೂಲ ಅಂತಾ ಕೇಳಿದ್ರೆ,  
ಗದ್ದೆ ಮನೆ ಮಡಗು ಅಂತಾರೆ,  
ಬಡ್ಡಿಗೆ ಚಕ್ರ ಬಡ್ಡಿ ಏರಿಸಿ,  
ಸಾಲ ಶೂಲ ಹಾಕುತ್ತಾರೆ,  
ಓದ್ದೋವರು ಎಷ್ಟು ಮಂದಿ  
ಪಟ್ಟಣ ಸೇರವರೆ ಹಳ್ಳಿ ಮರೆತವರೆ" ಎಂಬ ಸಾಹಿತ್ಯ ಕಥಾವಸ್ತುವಿಗೆ ಪೂರಕವಾಗಿದೆ.



ಸುಗ್ಗಿ ಸಮಯದಲ್ಲಿ ರಾಗಿಯ ರಾಶಿ, ಭತ್ತದ ರಾಶಿಗಳ ನಡುವೆ ಸುಗ್ಗಿ ಪೂಜೆ ಮಾಡುತ್ತಾ ಜಾನಪದ ಹಬ್ಬವನ್ನು ನೆನಪಿಸುವ ಗೀತೆ ಕೇಳಲೂ ಇಂಪು, ನೋಡಲು ಕಣ್ಣಿಗೂ ತಂಪು. ಕಳಸ ಹೊತ್ತ ಮಹಿಳೆಯರು ಕಳಸದಲ್ಲಿ ತೆಂಗಿನ ಎಳೆದೆಲೆ. ಇನ್ನೊಂದು ಕಡೆ ಹೊಂಬಾಳೆ ಮುಂತಾದವನ್ನು

ಬಳಸಲಾಗಿದೆ. ಜಾನಪದ ಕಲಾ ತಂಡಗಳನ್ನು ಇಲ್ಲಿ ನೋಡಬಹುದು. ಹುಲಿವೇಷ , ನವಿಲು ಕುಣಿತ, ತಮಟೆ ಸಮೃದ್ಧ ಜಾನಪದ ಶೈಲಿಯನ್ನು ಗೀತೆಯಲ್ಲಿ ಸಮೃದ್ಧವಾಗಿ ಬಳಸಿಕೊಳ್ಳಲಾಗಿದೆ. ನೃತ್ಯ ಮಾಡುವ ಕಲಾವಿದರು ಪುರುಷರು ಸೈಕಲ್ ಕಚ್ಚೆ, ಜಿಗಿಯಾಗಿ ತೊಟ್ಟಿದ್ದಾರೆ. ಮೊಣಕಾಲಿನವರೆವಿಗೂ ಅವರ ಮೇಲೆ ಶರ್ಟು ತಲೆಗೆ ಟವಲ್, ಸೊಂಟಕ್ಕೊಂದು ಟವಲ್ ಕಟ್ಟಿದ್ದಾರೆ. ಇನ್ನು ಹೆಣ್ಣು ಮಕ್ಕಳು ತಲೆಗೆ ಗಂಟು, ಅದರ ಸುತ್ತ ಹೂ ದಂಡೆ, ಕಾಲಿಗೆ ಕಡಗ, ಗೆಜ್ಜೆ , ಚೌಕುಳಿ ಆಕೃತಿಯ ಡಿಸೈನ್ ಸೀರೆ, ಕಾಸಿನಗಲ ಕುಂಕುಮ, ಕೈತುಂಬಾ ಬಳೆ, ಹೀಗೆ ಹಳ್ಳಿಯ ವಾತಾವರಣಕ್ಕೆ ತಕ್ಕಂತೆ ಕಲಾವಿದರ ಸಿಂಗಾರ, ಬಂಗಾರ ತೊಟ್ಟಿದ್ದಾರೆ. ಇದು ಜನಪದರ ವೈಶಿಷ್ಟ್ಯ ಎಂದು ಹೇಳಬಹುದು.

ಇದರಿಂದ ಇಡೀ ಹಳ್ಳಿಯನ್ನು ತಳಿರು ತೋರಣ ಮಾವಿನ ಸೊಪ್ಪು, ಬಾಳೆ ಕಂಬ, ಹೂಗಳಿಂದ ಅಲಂಕರಿಸಿದ್ದಾರೆ. ತೆಂಗಿನ ಚಪ್ಪರದ ಕೆಳಗೆ ಕಾರ್ಯಕ್ರಮ ನಡೆಯುತ್ತದೆ. ತಮಟೆ ಬಾರಿಸುವವರ ಮಧ್ಯೆ ಜಗಳ ಬಂದಾಗ ರಾಜೀವ

"ಟೊಳ್ಳು ಜಗಳ ಬೇಡ ಹಳ್ಳೀಲಿ
ಒಂದಾಗಿ ದುಡಿದಾಗ
ಸಿರಿ ಇದೆ ಕೈಯಲ್ಲಿ" ಎಂಬ ನೀತಿ ಪಾಠ ಹೇಳಿ ಹಳ್ಳಿಗರನ್ನು ಒಗ್ಗೂಡಿಸುತ್ತಾರೆ.

ಕೃಷಿಯಿಂದಲೂ ಜೀವನ ಕಟ್ಟಿಕೊಳ್ಳಬಹುದು ಎಂದು ದೃಢಪಡಿಸಿದ ರಾಜೀವನನ್ನು ಆದರ್ಶ ರೈತ ಎಂದು ಹಾರ ಹಾಕಿ ಗೌರವಿಸುತ್ತಾರೆ. ಇದು ಒಬ್ಬ ರೈತನಿಗೆ ಸಲ್ಲುವ ಗೌರವವಾಗಿರದೆ ಇಡೀ ರೈತ



ಕುಲ ಬಾಂಧವರಿಗೆ ಸಂದ ಗೌರವವಾಗಿರುತ್ತದೆ. ಈ ಸಂತೋಷದ ವಾತಾವರಣದಲ್ಲಿ ಇಡೀ ರೈತಾಪಿ ವರ್ಗ ಸಿಹಿಯಲ್ಲಿ ಮಿಂದು ಏಳುತ್ತದೆ. ಈ ಸಫಲತೆ ಬೇರೆ ರೈತರನ್ನು ಸಹಾ ಹುರಿದುಂಬಿಸುತ್ತದೆ. ಸಿನೆಮಾ ನೋಡುವ ಕೃಷಿಕರು, ರೈತರು, ಕೂಲಿ ಕಾರ್ಮಿಕರು, ಜಮೀನ್ದಾರರು, ಒಟ್ಟಾಗಿ ಹಳ್ಳಿಯಲ್ಲಿ ವಾಸಿಸುವ ನಮ್ಮ ಆರಂಭಗಾರರಿಗೆ ಒಂದು ಸ್ಫೂರ್ತಿ. ಎಲ್ಲಿಯೂ ಆಧುನಿಕತೆಯ ಸೋಂಕು ತಗುಲದೆ ಒಟ್ಟಾರೆ ಹಾಡು ಜಾನಪದ ಸೊಗಡನ್ನು ಪ್ರತಿಬಿಂಬಿಸುತ್ತದೆ.



ಇನ್ನು ಕಥೆಯ ಒಂದೊಂದು ಸನ್ನಿವೇಶ ದಲ್ಲಿಯೂ ಜಾನಪದ ಅಂಶಗಳನ್ನು ಗುರುತಿಸುವುದು ಮುಖ್ಯವಾಗುತ್ತದೆ. ಶರಾವತಿ ವಿಚಾರದಲ್ಲಿ ಜಗಳ, ಮನಸ್ತಾಪ ತಪ್ಪು ಕಲ್ಪನೆಗಳಿಂದ ಅಣ್ಣ ತಮ್ಮಂದಿರ ಮಧ್ಯೆ ಜಗಳ ಏರ್ಪಟ್ಟು ರಾಜೀವ ಮನೆ ಬಿಡುತ್ತಾನೆ.

ಮನೆಗೆ ಹಿಂದಿರುಗಿದಾಗ ಮನೆಯಲ್ಲಿ ಆಸ್ತಿ ವಿಚಾರಕ್ಕೆ ಕಲಾಪ ಉಂಟಾಗಿ ಮನೆ ಬಿಟ್ಟು ಹೊಲಕ್ಕೆ ಬಂದು ಒಂದು ಕೈಯಲ್ಲಿ ಮಣ್ಣು ಹಿಡಿದು ಕಣ್ಣಿಗೆ ಒತ್ತಿಕೊಳ್ಳುತ್ತಾನೆ. ಇಷ್ಟು ದಿನ ನನ್ನನ್ನು ಸಾಕಿ ಬೆಳೆಸಿದ ನಿನ್ನನ್ನು ಬಿಟ್ಟು ದೂರ ಹೋಗುತ್ತಿದ್ದೇನೆ. ಎಲ್ಲರ ಮೇಲೂ ಅನುಗ್ರಹ ಇಟ್ಟು ಕಾಪಾಡು



ಎಂದು ಹೇಳಿ ಭೂತಾಯಿಗೆ ನಮಿಸಿ ಬಹಳ ದು:ಖದಿಂದ ಊರು ಬಿಡುತ್ತಾನೆ. ಭೂಮಿ ಮೇಲಿನ ಅನುರಾಗ ಅವನನ್ನು ಈಗ ಕಟ್ಟಿಹಾಕುವುದಿಲ್ಲ. ಮನೆ ಬಿಟ್ಟ ರಾಜೀವ ಮತ್ತೆ ಮನೆಗೆ ಹಿಂದಿರುಗುವುದಿಲ್ಲ. ಚಿತ್ರದ ಕೊನೆಯ ದೃಶ್ಯದಲ್ಲಿ ರಾಜೂಟಪ್ಪ ರಾಜೀವನ ಫೋಟೋ ಮುಂದೆ ದು:ಖಿಸುವ ದೃಶ್ಯ ಇದೆ. ಆ ಫೋಟೋ ದಲ್ಲಿಯೂ ರಾಜೀವ ಬಲಿತ ಭತ್ತದ ತೆನೆ ಹಿಡಿದು ಭರವಸೆಯ ನಗೆ ಸೂಸುವ ಫೋಟೋ ಅಲ್ಲಿಯೂ ಭೂ ತಾಯಿ ನಂಬಿದ ರೈತನಂತೆ ಕಂಗೊಳಿಸುತ್ತಾನೆ. ರಾಜೀವ ಮುಳುಗುವ ಸೂರ್ಯನ ಕಡೆ ಹೋಗುವ ದೃಶ್ಯದೊಂದಿಗೆ ಸಿನೆಮಾ ಮುಗಿದು ಹೋಗುತ್ತದೆ. ಕೊನೆಯಲ್ಲಿ ಒಂದು ವಿಷಾದದ ಭಾವ ಮನದಲ್ಲಿ ಮೂಡಿಬರುತ್ತದೆ.

ಈ ಚಿತ್ರದ ಸಂಪೂರ್ಣ ಯಶಸ್ಸನ್ನು ಕೇವಲ ರಾಜಣ್ಣನವರಿಗೆ ನೀಡಲಾಗುವುದಿಲ್ಲ. ಅವರೊಂದಿಗೆ ಬಾಲಕೃಷ್ಣ, ಭಾರತಿ, ವಜ್ರಮುನಿ, ಶ್ರೀನಾಥ್, ಶನಿಮಹಾದೇವಪ್ಪ ಮುಂತಾದ ಕಲಾವಿದರು ಒಳ್ಳೆಯ ಅಭಿನಯ ನೀಡಿ ಸಿನೆಮಾದ ನಿಲುವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಹಾಗೆಯೇ ಒಂದು ಕಾಲಕ್ಕೆ "ರಾಮಾಂಜನೇಯ ಯುದ್ಧ" ಸಿನೆಮಾದಲ್ಲಿ ರಾಜಣ್ಣನವರೊಂದಿಗೆ ನಾಯಕಿಯಾಗಿದ್ದ ಆದಿವಾನಿ ಲಕ್ಷ್ಮಿದೇವಿ



ಈ ಚಿತ್ರದಲ್ಲಿ ರಾಜೀವನ ಅಕ್ಕನ ಪಾತ್ರದಲ್ಲಿ ಬಹಳ ಒಳ್ಳೆಯ ಅಭಿನಯ ನೀಡಿದ್ದಾರೆ. ಸಿದ್ಧಲಿಂಗಯ್ಯ ನವರ ನಾಯಕತ್ವದಲ್ಲಿ ಕತೆ, ಸಂಭಾಷಣೆ, ಸ್ಥಳ, ಭಾಷೆ, ಉಡುಗೆ, ತೊಡುಗೆಯಲ್ಲಿ ಎಲ್ಲ ಕಡೆಯಲ್ಲಿ ಅತ್ಯಂತ ಸೂಕ್ಷ್ಮ ಗ್ರಹಿಕೆಯಾಗಿ ಚಿತ್ರದ ಯಶಸ್ಸಿಗೆ ಬೆಂಗಾವಲಾಗಿದ್ದಾರೆ. ಎಲ್ಲೆಲ್ಲಿ ಒಗಟು, ಗಾದೆ, ಗ್ರಾಮೀಣ, ಸೊಗಡಿನ ಅವಶ್ಯಕತೆ ಇದೆಯೋ ಅಲ್ಲೆಲ್ಲಾ ಒಬ್ಬ ಹಳ್ಳಿಗನಂತೆ ಯೋಚಿಸಿ ನಿರ್ದೇಶನ ಮಾಡಿದ್ದಾರೆ. ಈ ಕಾರಣಕ್ಕೆ ಚಿತ್ರ ಹಳ್ಳಿಗರನ್ನು ಆಕರ್ಷಿಸಿದ್ದು ಸಹಜ. ಸಿದ್ಧಲಿಂಗಯ್ಯನವರನ್ನೂ ಸಹ ಬಂಗಾದ ಮನುಷ್ಯ ಎನ್ನಬಹುದು.

ರಾಜಣ್ಣನವರ ಚಿತ್ರಗಳಲ್ಲಿ ಕನ್ನಡ ನೆಲದ ಸಂಸ್ಕೃತಿಯ ಮೂಲ ಧಾತುಗಳು, ಕೆನೆ ಕಟ್ಟಿದ ಕನ್ನಡಿಗರ ಬದುಕು, ಕನ್ನಡಿಗರ ಜೀವನ, ಜಾನಪದ ಜೀವನ, ಕನ್ನಡಿಗರ ಮನೆಯ ಆಚಾರ ವಿಚಾರಗಳ ಪ್ರತಿಬಿಂಬ ಕಾಣಸಿಗುತ್ತವೆ. ಉದಾಹರಣೆಗೆ ಮುಂಜಾನೆ ಬೆಳ್ಳಂಬೆಳಗ್ಗೆ ಒಂದು ದೃಶ್ಯ ಎಂದು ಬಂದಾಗ ಸಗಣಿಯಿಂದ

ಸಾರಿಸಿದ ನೆಲ, ಬಿಳಿ ಶುಭ್ರ ರಂಗೋಲಿ, ಮನೆ ಮುಂದೆ ತುಳಸಿಕಟ್ಟೆ, ಗೆಜ್ಜೆ ಬತ್ತಿ, ಹೂಹಾರ, ಗಂಧ ಕಡ್ಡಿ, ಕರ್ಪೂರಗಳಿಂದ ಬೆಳಗಿದ ದೀಪ ಮನೆಯ ಸುಂದರ ಅಂಗಳ ಕಾಣಸಿಗುತ್ತದೆ. ಅಲ್ಲಿ ಸಂಪೂರ್ಣ ದೇಸಿತನಕ್ಕೆ ಒತ್ತು ನೀಡಲಾಗುತ್ತದೆ. ಜನಪದೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತಾರೆ. ನಮ್ಮ ನಾಡಿನ ಮೂಲಭೂತ ನುಡಿಗಟ್ಟನ್ನು ಚೆನ್ನಾಗಿ ಹಿಡಿದಿಡುವ ಪ್ರಯತ್ನ ಚಿತ್ರದಲ್ಲಿ ಕಂಡುಬರುತ್ತದೆ. ನಾಯಕ/ ನಾಯಕಿ/ ಪೋಷಕ ಪಾತ್ರಗಳು ಆಡುವ ಭಾಷೆ ಸರಳ ಸಾಮಾನ್ಯವಾದದ್ದು ಎಷ್ಟರ ಮಟ್ಟಿಗೆ ಎಂದರೆ ಚಿತ್ರದ ಶೀರ್ಷಿಕೆಯಲ್ಲಿ ಕನ್ನಡತನ, ದೇಸಿ ಭಾವನೆ ಎದ್ದು ಕಾಣುತ್ತದೆ. ಜಾತ್ರೆ/ ಹಬ್ಬ/ ತೇರು/ ರಥ, ಇವೆಲ್ಲವೂ ಬಹುತೇಕ ಚಿತ್ರಗಳಲ್ಲಿ ಬಳಕೆಯಾಗಿದ್ದು ಕನ್ನಡದ ಜನಪದ ಸಂಸ್ಕೃತಿಯನ್ನು ಎತ್ತಿಹಿಡಿದಿವೆ.

**೩. ಕಾಮನಬಿಲ್ಲು : ವಿಶ್ಲೇಷಣಾತ್ಮಕ ಚಿಂತನೆ**

ಕಾಮನಬಿಲ್ಲು ಅಶ್ವಿನಿರವರ **"ಮೃಗತೃಷ್ಣಾ"** ಕಾದಂಬರಿ ಆಧಾರಿತ ಚಲನಚಿತ್ರ, ಡಾ.ರಾಜ್ ಅವರ ಚಿತ್ರಗಳಲ್ಲಿ ಹಳ್ಳಿಗಳಲ್ಲಿನ ಬದುಕನ್ನು ಸಂಪೂರ್ಣವಾಗಿ ತೆರೆಯ ಮೇಲೆ ತರುವ ಪ್ರಯತ್ನವನ್ನು ಮಾಡಲಾಗಿದೆ. ಕಾಮನಬಿಲ್ಲು ಚಿತ್ರವು ಸ್ವಾತಂತ್ರ್ಯ ಬಂದ ನಂತರ ನಮ್ಮ ಸಾಂವಿಧಾನಿಕ ಸಮಾಜದಲ್ಲಿ ಜಾತಿ ವ್ಯವಸ್ಥೆಯನ್ನು, ವರ್ಗವ್ಯವಸ್ಥೆಯನ್ನು, ಊಳಿಗಮಾನ್ಯ ವ್ಯವಸ್ಥೆಯು ಹಳ್ಳಿಗಳಲ್ಲಿ ಇನ್ನೂ ಸಹ ಗಾಢವಾಗಿ ಬೇರೂರಿರುವ ಚಿತ್ರಣವನ್ನು ತೆರೆದಿಡುತ್ತದೆ. ಈ ಸಿನೆಮಾವು ಒಂದು ಹಳ್ಳಿಯಲ್ಲಿ ನಡೆಯುವ ಜಾತಿ ಸಮಸ್ಯೆಗೆ ಸಂಬಂಧಿಸಿದ ಕಥೆಯನ್ನು ಕುರಿತುದಾಗಿದೆ. ಇಲ್ಲಿ ಬ್ರಾಹ್ಮಣರು, ಗೌಡರು, ಎಂಬ ಮೇಲ್ಜಾತಿ ಹೊಲೆಯ ಮಾದಿಗ, ಎನ್ನುವ ಕೀಳುಜಾತಿ ಮಧ್ಯೆ ಸಂಘರ್ಷ ಸದಾ ಕಾಲ ನಡೆಯುತ್ತಲೇ ಇರುತ್ತದೆ. ಚಿತ್ರಕಥೆ, ಆರಂಭವಾಗುವುದೇ ಜಾತಿ ಸಮಸ್ಯೆಯಿಂದ. ಸೂರಿ ಒಮ್ಮೆ ಹಳ್ಳಿಯ ಕೇರಿಯಲ್ಲಿ ಬರುತ್ತಿದ್ದಾಗ ಕೆಲಮಕ್ಕಳು ಮರದ ಕೆಳಗೆ ಆಡುತ್ತಿರುತ್ತಾರೆ.

"ಕುಂಟ ಕುಂಟ ಕೂರಿಗೆ
ನೆಂಟರ ಮನೆ ಹೋಳಿಗೆ
ನಾನು ಬರ್ತೀನಿ ತೇರಿಗೆ" ಎಂದು ಜಾನಪದ ಗೀತೆ ಹಾಡುತ್ತಾ ಆಟವಾಡುತ್ತಿರುತ್ತಾರೆ.

ಆಡುವ ಮಕ್ಕಳ ಮಧ್ಯೆ ಜಾತಿ ಪ್ರಶ್ನೆ ಇರುವುದಿಲ್ಲ. ಗೌಡರ, ಮಾದಿಗರ ಹುಡುಗರು ಜೊತೆ ಸೇರಿ ಆಡುತ್ತಿದ್ದಾರೆ. ಹೊಲೆಯರ ಹುಡುಗ ಕೆಂಚ, ಗೌಡರ ಹುಡುಗ ಕೆಂಪೇಗೌಡ ಶಾಲೆ ಮುಂದೆ ಆಡುತ್ತಿದ್ದಾಗ ಅಲ್ಲಿಗೆ ಬಂದ ಸೂರಿ ಮಕ್ಕಳ ಅನ್ಯೋನ್ಯತೆ ಕಂಡು ಸಂತಸ ಪಟ್ಟು ಮಕ್ಕಳು ದೇವರಿದ್ದ ಹಾಗೆ ಅವರಲ್ಲಿ ಬಗ್ಗಡವಿಲ್ಲ ಎಂದು ಮೆಚ್ಚಿ ಅವರೊಂದಿಗೆ ತಾನೂ ಸಹಾ ಕಬಡ್ಡಿ ಜನಪದ ಕ್ರೀಡೆ ಆಡಿ ನಲಿಯುತ್ತಾನೆ. ಅಲ್ಲೆ ಎತ್ತಿನ ಗಾಡಿಯೊಂದು ಬಿದ್ದಿದೆ. ಇತ್ತೀಚೆಗೆ ಟಾಸ್ ಹಾಕುವ ಹೆಡ್, ಟೈಲ್ ಎನ್ನುವ ಆಟ ಹಳ್ಳಿಯಲ್ಲಿ ರಾಜಾ ರಾಣಿ ಎನಿಸಿಕೊಳ್ಳುತ್ತದೆ. ಅಲ್ಲಿ ಅಕ್ಕ ಪಕ್ಕ ಕಡು ಬಡವರ ಗುಡಿಸಲು ಇವೆ. ಕಲಾತ್ಮಕವಾಗಿ ಪ್ರತಿಯೊಂದು ಸನ್ನಿವೇಶದಲ್ಲೂ ಆಧುನಿಕತೆ ಸೋಂಕದೆ ಹಳ್ಳಿಯ ಸೊಗಡನ್ನು ಎಲ್ಲಾ ಕಡೆ ಉಳಿಸಿಕೊಳ್ಳಲಾಗಿದೆ.

ತಾಯಿಯ ಕೈತುತ್ತು ತಿನ್ನುವ ಸೂರಿ ಈಗಲೂ ಹಳ್ಳಿ ಕಡೆ ತಾಯಿ ಮಕ್ಕಳಿಗೆ ಕೈ ತುತ್ತು ಕೊಡುತ್ತಾಳೆ ಎನ್ನುವ ನಂಬಿಕೆ ನೆನಪಿಗೆ ತರುತ್ತಾನೆ. ತುತ್ತು ತಿನ್ನುತ್ತ ಊರ ಮಕ್ಕಳಿಗೆ ಕೋಡುಬಳೆ ಮಾಡಿಕೊಡು ಎಂದು ಕೇಳುತ್ತ ಅವರನ್ನೆಲ್ಲ ಇಲ್ಲಿಗೆ ಕರೆತಂದರೆ ನೀನು ಸೇರಿಸುವುದಿಲ್ಲವಲ್ಲ ಎಂದು ನುಡಿಯುತ್ತಾನೆ. ಬ್ರಾಹ್ಮಣರ ಮನೆಗೆ ಬೇರೆ ಜಾತಿಯವರನ್ನು ಸೇರಿಸುವುದಿಲ್ಲ ಅವರು ಬಂದರೆ ಇವರ ಮಡಿ ಹಾಳಾಗುತ್ತದೆ. ಅಷ್ಟೆ ಅಲ್ಲ ಹೊಲೆಯ ಮಾದಿಗ ಮುಂತಾದ ಕೀಳು ಜಾತಿಯ ಜನ ಮೇಲು ಜಾತಿಯ ಜನರ ಮನೆಯೊಳಗೆ ಕಾಲಿಡಲು ಹೆದರುತ್ತಾರೆ. ಜಾತಿ ಇಲ್ಲ ಎಂದರೂ ಜಾತಿ ಇದೆ. ಜಾತಿ ವ್ಯವಸ್ಥೆಯಲ್ಲಿ ಖಂಡಿಸುವ ಹಲವಾರು ಸಿನೆಮಾಗಳ, ನಮ್ಮ ಚಿತ್ರರಂಗದಲ್ಲಿ ಬಂದು ಹೋಗಿವೆ. ಹೇಮಾವತಿ, ಗ್ರಹಣ, ಮುಂತಾದ ಚಿತ್ರಗಳಲ್ಲಿ ಜಾತಿ ವ್ಯವಸ್ಥೆಯನ್ನು ಖಂಡಿಸಿ ಜಾತಿ ಪದ್ಧತಿ ನಿರ್ಮೂಲನೆಗೆ ಬಹಳ ಶ್ರಮಿಸಿವೆ. ಕೇವಲ ಮನೋರಂಜನೆ, ಹಣ ಗಳಿಕೆ ಬಿಟ್ಟು, ನಿಜವಾಗಲೂ ಸಮಾಜ ನಿರ್ಮಾಣದಂತಹ ಉನ್ನತ ಚಿತ್ರಗಳು ನಮ್ಮಲ್ಲಿ ತೆರೆ ಕಂಡಿವೆ. ಚಿತ್ರಗಳು ಸಹಾ ಸಮಾಜಮುಖಿಯಾಗಿ ಕೆಲಸ ಮಾಡುತ್ತವೆ ಎನ್ನುವುದಕ್ಕೆ ಈ ಚಿತ್ರ ಉತ್ತಮ ಉದಾಹರಣೆಯಾಗಿದೆ.

ಗಿರಿಜಾಗೆ (ನಾಯಕಿ) ಹಳ್ಳಿ ಜೀವನ ಎಂದರೆ ತುಂಬಾ ಪ್ರೀತಿ. ತನ್ನ ವಿದ್ಯಾಭ್ಯಾಸದ ನಂತರ ಹಳ್ಳಿಗೆ ಹೋಗಿ ಕೃಷಿ ಮಾಡಬೇಕೆಂಬ ಆಸೆ. ಹಳ್ಳಿಯ ಜೀವನ ಬೇಡ ಎಂದು ತಾಯಿ ಹೇಳಿದರೂ ಕೇಳುವುದಿಲ್ಲ. ಗಿರಿಜಾಳ ತಾಯಿ ಹಳ್ಳಿಯಲ್ಲೆ ಹುಟ್ಟಿ ಬೆಳೆದವಳು. ಗಿರಿಜಾಳಿಗೆ ತಂದೆ ಬುದ್ಧಿ ಹೇಳಿ ಎಂದಾಗ ಅವಳ ತಂದೆ ಸಹಾ ಗಿರಿಜಾಳ ಪರವಹಿಸಿ ಮಾತನಾಡಿದಾಗ "ವಿವೇಕ ಹೇಳಿ ಎಂದರೆ ತೂಕಡಿಸಿದವನಿಗೆ ಹಾಸಿಗೆ ಹಾಸಿದಂಗೆ ನೀವು ಸಹಾ ಅವಳನ್ನೇ ಬೆಂಬಲಿಸುತ್ತೀರಲ್ಲ" ಎಂದು ಬೈದು ಸುಮ್ಮನಾಗುತ್ತಾಳೆ. ಅವಳಿಗೆ ತನ್ನ ಮಗಳು ಪಟ್ಟಣದಲ್ಲಿ ಓದಿ ಬೆಳೆದವಳು ಹಳ್ಳಿಗೆ ಹೋಗಿ ಏನು ಮಾಡಬೇಕು. ಹಳ್ಳಿಯಲ್ಲಿ ಏನಿದೆ, ಹಳ್ಳಿಯ ಬಗ್ಗೆ ತಾತ್ಸಾರ, ಅಲ್ಲದೆ ಅಲ್ಲೆ ಯಾವನಾದ್ರೂ ಹಳ್ಳಿ ಗಮಾರನನ್ನು ಕಟ್ಟಿಕೊಂಡು ಹಾಳಾಗಿ ಹೋಗು ಎಂದು ಶಪಿಸುತ್ತಾಳೆ. ಹಳ್ಳಿಯಲ್ಲಿ ಹುಟ್ಟಿ ಬೆಳೆದವಳಾದರೂ ಅವಳದು ಪಾಶ್ಚಾತ್ಯ ರೀತಿ. ಸೀರೆ ರವಿಕೆ (ತೋಳಿಲ್ಲದ) ಹಳ್ಳಿ ಬಗ್ಗೆ ಎಳ್ಳಷ್ಟು ಗೌರವವಿಲ್ಲ. ಪಟ್ಟಣದ ಸವಲತ್ತು ಕಂಡ ಮೇಲೆ ಹಳ್ಳಿ ನಮ್ಮ ಜನಕ್ಕೆ ಬೆಂಗಾಡಾಗಿ ಕಾಣುತ್ತದೆ. ಒಂದು ಸಿನೆಮಾನ , ಕ್ಲಬ್ಬು, ಹೋಟೆಲ್ಲು, ಏನು ಇಲ್ಲ ಎಂದು ಮೂದಲಿಸುತ್ತಾರೆ. ನಮಗೆ ಅನ್ನ ನೀಡುವ ರೈತ ಹಳ್ಳಿಯಲ್ಲಿದ್ದಾನೆ. ನಮಗೆ ಅನ್ನ ನೀಡುವ ಹೊಲ ಗದ್ದೆಗಳು ಹಳ್ಳಿಯಲ್ಲೆ ಇವೆ. ಅವು ಪಟ್ಟಣದಲ್ಲಿಲ್ಲ. ಪಟ್ಟಣದಲ್ಲಿರುವ ಸಿನೆಮಾ, ಹೋಟೆಲ್, ಕ್ಲಬ್‌ಗಳು ಅನ್ನ ಉತ್ಪಾದಿಸುವ ಭೂಮಿ ಅಲ್ಲ ಎನ್ನುವ ಕಟು ಸತ್ಯದ ಅರಿವು ನಮ್ಮಲ್ಲಿ ಹಲವರಿಗಿಲ್ಲ. ತಾಯಿಯ ಆಕ್ರೋಶದ ನಂತರವೂ ಗಿರಿಜಾ ಹಳ್ಳಿಗೆ ಬರಲು ನಿರ್ಧರಿಸುತ್ತಾಳೆ. ತಾಯಿಯಿಂದ ಕೋಡುಬಳೆ ಮಾಡಿಸಿಕೊಂಡು ಬಂದ ಸೂರಿಗೆ ಒಂದು ಆಘಾತ ಕಾದಿರುತ್ತದೆ. ಹೊಲೆಯ ಹಟ್ಟಿಗೆ "ಕೆಂಪಾ ಕೆಂಪಾ" ಎಂದು ಕೂಗುತ್ತಾ ಬಂದ ಸೂರಿಗೆ ಕೆಂಚನ ತಾಯಿ "ತಮಾಷೆ ನೋಡೋಕೆ ಬಂದ್ರಾ ಬುದ್ಧಿ" ಎಂದು ಅಳುತ್ತಾ ಸ್ವಾಗತಿಸುತ್ತಾಳೆ. ಮನೆ ಮುಂದೆ ಕುರಿ ಕಟ್ಟಿ ಹಾಕಿದ್ದಾರೆ. ಊರ ಹಿಂದೆ ಹೊಲೆಯರ ಅಟ್ಟಿ ಇರುತ್ತದೆ. ಅದು ಸಾಮಾನ್ಯವಾಗಿ ಗುಡಿಸಲುಗಳಿಂದ ಕೂಡಿದ ಅಷ್ಟೇನೂ ಸ್ವಚ್ಛವಿಲ್ಲದ ಸ್ಥಳ. ಅಲ್ಲಿ ಕುರಿ, ಕೋಳಿ, ಆಡು, ಮೇಕೆ ಕಾಣಬಹುದು. ಊರು ಎಂದ ಮೇಲೆ

ಹೊಲಗೇರಿ ಇದ್ದದ್ದೇ ಎಂದು ಕೆಲವರು ಹೇಳುವುದುಂಟು. ಹೊಲಗೇರಿ ಎಂದರೆ ಅಸ್ಪೃಶ್ಯರು ಎಂದು ಒಂದು ಅರ್ಥ. ಅಲ್ಲದೆ ಒಳ್ಳೆಯ ಜನರ ಮಧ್ಯೆ ಕೆಟ್ಟ ಜನರೂ ಸಹಾ ಇರುತ್ತಾರೆ ಎಂಬುದೂ ಸಹಾ ಇನ್ನೊಂದು ಅರ್ಥವಾಗಿದೆ.

ಊರಿನ ಕಿರಿಗೌಡರು ಕೂಡ ಜಾತಿವ್ಯವಸ್ಥೆಯನ್ನು ಸಮರ್ಥಿಸುವ ಮನೋಭಾವನೆಯನ್ನು ತಾಳಿದ್ದಾರೆ. "ಊರು ಹೊಲಗೇರಿ ಒಂದು ಮಾಡ್ತೀರಾ, ಬೋಳಿ ಮಕ್ಕಳಾ" ಎಂದು ಸೌದೆ ತೆಗೆದುಕೊಂಡು ಕೆಂಚನನ್ನು ಹೊಡೆದ ವಿಷಯ ಸೂರಿಗೆ ಕೆಂಚನ ತಾಯಿ ತಿಳಿಸುತ್ತಾಳೆ. ಕೆಂಚನ ಮೈ ತುಂಬಾ ಬಾಸುಂಡೆ ಕೆಂಪಗೆ ಕಾಣುತ್ತದೆ. ಕೆಂಚ ಜ್ವರದಿಂದ ನರಳುತ್ತಿದ್ದಾನೆ. ಕೆಂಚ, ಕೆಂಪೇಗೌಡ ಅಂದರೆ ಅಸ್ಪೃಶ್ಯರ ಹುಡುಗ ಗೌಡರ ಜಾತಿ ಹುಡುಗರೊಂದಿಗೆ ಆಟ ಆಡಿ ಜಾತಿ ಹಾಳು ಮಾಡಿದ ತಪ್ಪಿಗೆ ಕಿರಿಗೌಡ ಕೆಂಚನನ್ನು ಸಿಕ್ಕಾಪಟ್ಟೆ ಹೊಡೆದಿದ್ದಾನೆ. ಈ ಆಟದಲ್ಲಿ ಪಾಲ್ಗೊಂಡ ಸೂರಿಗೆ ಇದು ತಪ್ಪು ಎನಿಸಲಿಲ್ಲ. ಈಗಲೂ ಹಳ್ಳಿ ಕಡೆ ಜಾತಿ ಪದ್ಧತಿ ಬಲಿಷ್ಠವಾಗಿದೆ. ಮೇಲು ಜಾತಿಯವರು ಕೇರಿಯವರನ್ನು ಮನೆ ಒಳಗೆ ಸೇರಿಸುವುದಿಲ್ಲ. ನಮ್ಮಲ್ಲಿ ಹಸು, ಕರು, ದನ ಇವೆ. ಹಾಲು ಕರೆದು ಹಳ್ಳಿಗಳಲ್ಲಿ ಮಾರಾಟ ಮಾಡುತ್ತಿದ್ದೆವು. ಹೊಲೆಯರ ಹಟ್ಟಿಯಿಂದ ಒಂದು ಚಿಕ್ಕ ಹುಡುಗಿ ಹಾಲು ಕೊಳ್ಳಲು ಒಂದು ಮನೆಗೆ ಬಂದಿದ್ದಳು. ಮನೆ ಹೊರಗೆ ನಿಂತು ಅವ್ವ ಹಾಲು ಬೇಕು ಎಂದು ಕೂಗಿದಳು. ಅವಳ ಸ್ಟೀಲ್ ಚೆಂಬು ತೆಗೆದುಕೊಂಡು ಒಳಗೆ ಹೋಗಿ ನಮ್ಮ ಚಿಕ್ಕಮ್ಮನಿಗೆ ಕೊಟ್ಟೆ ಅದಕ್ಕೆ ಅವರು

"ಅವಳ ಪಾತ್ರೆನಾ ಯಾಕೆ ಒಳಗೆ ತಂದೆ" ಗದರುತ್ತ ಅದನ್ನು ಮುಟ್ಟದೆ ಹೊರಗೆ ಕಳುಹಿಸಿದರು. ಅವರೇ ಹೊರ ಬಂದು ತಮ್ಮ ಚೆಂಬಿನಿಂದ ಅವಳ ಚೆಂಬಿಗೆ ಹಾಲು ಸುರಿದು ನಾಕಾಣೆ ತೆಗೆದುಕೊಂಡರು. ಅವರ ಪಾತ್ರೆ ನಮ್ಮ ಮನೆಯ ಒಳಗೆ ಬರಬಾರದಂತೆ ಅವರ ಹಣ ಬರಬಹುದೇ, ಹಣಕ್ಕೇನು ಜಾತಿ ಇಲ್ಲವೇ?

ಕೀಳೂ ಜಾತಿಯವರಿಂದ ಚಪ್ಪಲಿ ಹೊಲೆಸಿಕೊಳ್ಳುವ, ಹೊಲ ಊಳಿಸಿಕೊಳ್ಳುವ, ಕಳೆ ಕೀಳಿಸುವುದು, ಧಾನ್ಯ ತಂದು ಮೂಟೆಯಲ್ಲಿ ಮನೆಯನ್ನು ತುಂಬಿಸಿಕೊಳ್ಳುವುದು, ಬಾವಿ ಅಗೆಸುವುದು, ನೀರು



ಹಾಯಿಸುವುದು, ಎಲ್ಲವೂ ಕೀಳು ಜಾತಿಯವರಿಂದ, ಅವರಿಂದ ಉತ್ತು ಬಿತ್ತು ಬಂದ ಬೆಳೆಯನ್ನು ಮನೆಯಲ್ಲಿ ಲಕ್ಷ್ಮಿ ಎಂದು ತುಂಬಿಸಿಕೊಳ್ಳುವ ನಮ್ಮ ಜನ ದುಡಿದ ಕೈಕಾಲುಗಳು, ದೇಹ ಮನಸ್ಸುಗಳಿಗೆ ಜಾತಿಯ ಲೇಪನ ಏಕೆ ಹಚ್ಚುತ್ತಾರೆ. ದನ ಮೇಯಿಸಲು ಹಾಲು ಕರೆಯಲು ಅವರು ಬೇಕು. ಕರೆದ ಹಾಲು ಮನೆಯೊಳಗೆ ಬರಬಹುದು. ಹಾಲು

ಕರೆದವರ ಮನೆಯೊಳಗೆ ಏಕೆ ಬರಬಾರದು. ಮಲ ಹೊರಲು ಇವರು ಬೇಕು. ಸತ್ತಾಗ ಗುಂಡಿ ತೆಗೆದು ಹೆಣ ಹೂಳಲು ಇವರು ಬೇಕು ಎಲ್ಲ ಕಾರ್ಯಕ್ಕೂ ದುಡಿಮೆಗೆ ಇವರು ಬೇಕು, ಆದರೂ ಮನೆಯೊಳಗೆ ಬಿಟ್ಟುಕೊಳ್ಳದ ಜಾತಿ ಪದ್ಧತಿ ನಮ್ಮ ಹಳ್ಳೀಗರಲ್ಲಿ ತುಂಬಿದೆ. ಇಂಥಹದೇ ಘಟನೆ ಕೇತನಪಳ್ಳಿಯಲ್ಲಿ ನಡೆಯುತ್ತದೆ. ಕೆಂಚನಿಗೆ ಏಕೆ ಹೊಡೆದಿದ್ದ ಎಂದಾಗ ಅವನು ಊರ ಹೊಲಗೇರಿ ಒಂದೇ ಮಾಡುತ್ತಿದ್ದ. ಊರು ಬೇರೆ, ಹೊಲಗೇರಿ ಬೇರೆ ಎಂಬ ಮಾತನ್ನು ಕಿರಿಗೌಡ ಆಡುತ್ತಾನೆ. ಮಾತಿಗೆ ಮಾತು ಬೆಳೆದಾಗ ಗೌಡ ಸೂರಿಯನ್ನು "ನಾಲ್ಕು ಅಕ್ಷರ ಕಲಿತಾಕ್ಷಣ ಮಾದಿಗನೂ ಒಂದೇ ಮಾದಿಗರಾಯನೂ ಒಂದೇನಾ" ಎಂದು ಮೂದಲಿಸುತ್ತಾನೆ. ಅದಕ್ಕೆ ಸೂರಿ "ಕತ್ತೆ ಕಿರುಚಿದರೇನೇ ಅದು ಕತ್ತೆ ಅಂತಾ ಗೊತ್ತಾಗುತ್ತಾ, ಅದರ ಆಕಾರ ನೋಡಿದರೆ ಗೊತ್ತಾಗಲ್ವಾ" ಎಂದು ಪ್ರತ್ಯುತ್ತರ ನೀಡುತ್ತಾನೆ. ಜಾತಿ ಬಿಡದ ಕಿರಿಗೌಡ ಬ್ರಾಹ್ಮಣ ಜಾತಿ ಬಗ್ಗೆ ಅಸಡ್ಡೆ ಮಾತನಾಡುತ್ತಾನೆ. "ಹಾರೂವರ ಹೆಚ್ಚಿದರೆ ಹಳ್ಳಿ ಹಾಳು, ಕೇರೆಯವರ ಹೆಚ್ಚಿದರೆ ಕೆರೆ ಹಾಳು" ಮಂತ್ರ ಪೂಜೆ ಅಂತಾ ಮಾಡಿಕೊಂಡಿರೋದನ್ನು ಬಿಟ್ಟು ಈ ಗೌಡರ ವಿಚಾರಕ್ಕೆ ಬರಬೇಡ ಎಂದು ಕೆಂಡ ಕಾರುತ್ತಾನೆ. ಸೂರಿಗೆ ಜಾತಿ ಭೇದ ಮಾಡುವುದು ಒಂದಿಷ್ಟು ಇಷ್ಟವಿಲ್ಲ. ಜಾತಿಯ ಕೆಂಡ ಕಾರುವ ಕಿರಿಗೌಡನಿಗೆ ಬುದ್ಧಿ ಕಲಿಸಲು ನಿಶ್ಚಯಿಸುತ್ತಾನೆ.

ಸೂರಿಯ ಸ್ನೇಹಿತ ಚಂದ್ರು ಇನ್ಸ್‌ಪೆಕ್ಟರ್ ವೇಷದಲ್ಲಿ ಬಂದು ಕಿರಿಗೌಡನಿಗೆ ಬುದ್ಧಿ ಕಲಿಸಿ ಹೊಲೆಯರಿಗೆ ೧೦-೧೫ ಸಾವಿರ ಖರ್ಚು ಮಾಡಿ ಮನೆ ಕಟ್ಟಿಕೊಡುವಂತೆ ಮಾಡುತ್ತಾನೆ. ಈ ವಿಷಯ ಹಿರಿಗೌಡನಿಗೆ ತಿಳಿಯುತ್ತದೆ. ಹಿರಿಗೌಡರ ಪಾತ್ರದಲ್ಲಿ ಬಾಲಕೃಷ್ಣ ಅವರದ್ದು ಪ್ರೌಢ ಅಭಿನಯ. ಹಿರಿಗೌಡ ಸಹಾ ಕಿವಿಯಲ್ಲಿ ಓಲೆ, ತಲೆಗಂಟು, ಕೈಗೆ ಉಂಗುರ, ಹಣೆಗೆ ಕಿವಿಗೆ ವಿಭೂತಿ, ಕೈಯಲ್ಲಿ ಛತ್ರಿ, ಕಾಲಿಗೆ ಚಪ್ಪಲಿ,.. .. ನೋಡಿದಾಕ್ಷಣ ಕೈ ಮುಗಿಯಬೇಕೆಂಬ ಮನಸ್ಸಾಗುತ್ತದೆ. ಊರ ಹೊರಗಿನ ಕೊಳಚೆ ನೀರಿನ ದಡದಲ್ಲಿ ಮಾಚ, ಕೆಂಪ, ಸಿದ್ಧ ಮುಂತಾದ ಬಡಜನರು ದನ ತೊಳೆಯುತ್ತಿದ್ದಾರೆ. ಹೆಂಗಸರು ಬಟ್ಟೆ ಒಗೆಯುತ್ತಿದ್ದಾರೆ. ಕೆಲವರು ಅಲ್ಲಿಂದಲೇ ಕುಡಿಯಲು ನೀರು ತುಂಬಿಕೊಳ್ಳುತ್ತಿದ್ದಾರೆ. ಸೂರಿಗೂ ಹಿರಿಗೌಡನಿಗೂ ಮೊದಲಿಂದಲೂ ಗಳಸ್ಯ ಕಂಠಸ್ಯ. ಬಹಳ ಅನ್ಯೋನ್ಯ. ಹಿರಿಗೌಡ ಕಿರಿಗೌಡನ ದಡ್ಡತನಕ್ಕೆ ನಗುತ್ತ ಸೂರಿಯ ಬುದ್ಧಿವಂತಿಕೆಯನ್ನು ಮೆಚ್ಚಿಕೊಳ್ಳುತ್ತಾನೆ. ಸೂರಿ ಇದೇ ಸೂಕ್ತ ಸಮಯ ಎಂದು ಸಂಧ್ಯಾವಂದನೆಯ ಆಟ ಆಡಿ, ಗೌಡರ ಮನ ಒಲಿಸಿ ಸಿಹಿ ನೀರಿನ ಬಾವಿಯನ್ನು ಬಡಜನರಿಗೆ ಬಿಡಿಸಿಕೊಡುತ್ತಾನೆ.



ನಮ್ಮ ಜಾನಪದ ಕಥೆಗಳಲ್ಲಿ ಊರ ಹಿತಕ್ಕಾಗಿ ಊರ ಹಿರೀಕ ಕೆರೆ ಕಟ್ಟೆ ಕಟ್ಟಿಸಿದ ಉದಾಹರಣೆಗಳಿವೆ. ತಾನು ಅಗೆಸಿದ ಬಾವಿಯನ್ನು ಅಥವಾ ತನ್ನ ತೋಟದ ಮನೆ ಬಾವಿಯನ್ನು ಸಾರ್ವಜನಿಕರಿಗಾಗಿ ಊರ ಜನಕ್ಕಾಗಿ ಬಡ ಬಗ್ಗರಿಗಾಗಿ ಬಿಟ್ಟುಕೊಟ್ಟ ಉದಾಹರಣೆಗಳಿವೆ. ಊರ ಗೌಡ ಕೆರೆ ಕಟ್ಟೆ ಕಟ್ಟಿಸುವಾಗ

ನರಬಲಿ ಕೊಟ್ಟ ಉದಾಹರಣೆಗಳಿವೆ. ಬೆಂಗಳೂರು ಕಟ್ಟಿಸಿದ ಕೆಂಪೇಗೌಡನ ಸೊಸೆ ಕೆರೆಗಾಗಿ ಹಾರ (ಆಹಾರ) ವಾದ ಕಥೆಗಳನ್ನು ಇತಿಹಾಸ ಹೇಳುತ್ತದೆ. ಕುಡಿಯುವ ನೀರಿಗಾಗಿ ದಲಿತರಿಗೆ, ಸವರ್ಣೀಯರಿಗೆ





ಆಗಿರುವ ಜಗಳ ಚರ್ಚೆ ಹೋರಾಟ, ಅಪಮಾನ ದು:ಖ ಸಾವು ನೋವು ಬಹುಶ: ಯಾವ ಕಾರಣಕ್ಕೂ ಆಗಿಲ್ಲ. ಅಷ್ಟೇ ಏಕೆ ಕಾವೇರಿ ನೀರಿಗಾಗಿ ಈಗಲೂ ಕರ್ನಾಟಕ ಸರ್ಕಾರ, ತಮಿಳುನಾಡು ಸರ್ಕಾರಗಳು ಕಿತ್ತಾಡುತ್ತಿರುವುದು ಪ್ರಧಾನ ಮಂತ್ರಿಗಳವರೆಗೂ ದೂರು ಹೋಗಿರುವುದು ಕಣ್ಣ ಮುಂದೆ ಇರುವ ಸತ್ಯ. ಕಳಸಾ ಬಂಡೂರಿ ಕುಡಿಯುವ ನೀರಿಗಾಗಿ ಕರ್ನಾಟಕ, ಮಹಾರಾಷ್ಟ್ರ, ಗೋವಾ ಸರ್ಕಾರಗಳು ಈಗಲೂ ಒಮ್ಮತಕ್ಕೆ ಬರಲಾಗಲಿಲ್ಲ. ರೈತರು ಕುಡಿಯುವ ನೀರಿಗಾಗಿ ಈಗಲೂ ಹೋರಾಟ ನಡೆಸಿದ್ದಾರೆ. ನಗರಗಳಲ್ಲಿಯೂ ನಲ್ಲಿಯ ಮುಂದೆ ನಡೆದಷ್ಟು ಜಗಳ ಚರ್ಚೆ ಬೇರೆಲ್ಲಿಯೂ ನಡೆದಿಲ್ಲ. ನೀರು ನಮ್ಮ ಜೀವನದಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತದೆ.

ಕಾಡಿನಲ್ಲಿ ಬೇಟೆಗಾಗಿ ಬಂದ ರಾಜಕುಮಾರ ದಟ್ಟಡವಿಯಲ್ಲಿ ಕಂಗೆಟ್ಟ ಬಾಯಾರಿದಾಗ ಕಾಡಿನ ಗಿರಿಜನರ ಕನ್ಯೆ ನೀರುಕೊಟ್ಟು ಕಾಪಾಡಿದ ಉದಾಹರಣೆ ಕೆಲವು ಜಾನಪದ ಗೀತೆಗಳಲ್ಲಿ ಕಂಡು ಬರುತ್ತದೆ. ಇನ್ನು ಮಲೆ ಮಹದೇಶ್ವರ ಸಂಕಮ್ಮನ ಸಾಲುಗಳು ಇದಕ್ಕೆ ಉತ್ತಮ ಉದಾಹರಣೆ. ಕುಡಿಯುವ ನೀರಿಗಾಗಿ ನಮ್ಮ ಹೆಣ್ಣು ಮಕ್ಕಳು ಮೈಲುಗಟ್ಟಲೆ ಉರಿಬಿಸಿಲಿನಲ್ಲಿ ಕೊಡ ಹೊತ್ತು ತಲೆ ಮೇಲೆ ಒಂದು ಗಡಿಗೆ, ಕಂಕುಳಲ್ಲಿ ಒಂದು ಗಡಿಗೆ ಹೊತ್ತುಕೊಂಡು ಬಂದ ಉದಾಹರಣೆ ಸಿಗುತ್ತವೆ. ದಾರಿಯಲ್ಲಿ ಪ್ರವಾಸಿಗರಿಗಾಗಿ ಅಶೋಕ ಚಕ್ರವರ್ತಿ ಅರವಟ್ಟಿಗೆಗಳನ್ನು ಸ್ಥಾಪಿಸಿದ್ದು ಈಗ ಇತಿಹಾಸ. ಈಗಲೂ ಜೈನಧರ್ಮದಲ್ಲಿ ಮನೆಗೆ ಬಂದ ಅತಿಥಿಗಳಿಗೆ ಕುಡಿಯುವ ನೀರು ಕೊಟ್ಟು ಮೊದಲು ಉಪಚರಿಸುತ್ತಾರೆ. ಈಗಲೋ ಆಗಲೋ ಎನ್ನುವ ವೃದ್ಧರಿಗೆ ಬಾಯಿಗೆ ಗಂಗಾಜಲ ಹಾಕಿ ಸ್ವರ್ಗ ತಲುಪಲಿ ಎನ್ನುವ ನಂಬಿಕೆ ನಮ್ಮ ಜನಪದರಲ್ಲಿ ಇದೆ. ಸಾಯೋಕಾಲಕ್ಕೆ ಬಾಯಿಗೆ ತೊಟ್ಟು ನೀರು ಬಿಡೋಕೋ ಒಬ್ಬ ಗಂಡು ಮಗ ಇರಲಿ ಎಂದು ಬಯಸುವ ತಂದೆ ತಾಯಿಯಂದಿರು ಇದ್ದಾರೆ. ಸಿರಿವಂತರ ಮನೆಗೆ ಹೋದರೆ ಕುಡಿಯಲು ಒಂದು ತೊಟ್ಟು ನೀರು ಕೊಡಲಿಲ್ಲ ಎಂದು ಹಲಬುವ ಬಡವನಿದ್ದಾನೆ.

ನಮ್ಮ ಜನಪದ ಮಹಾಕಾವ್ಯಗಳಲ್ಲಿ ಕಥೆಗಳಲ್ಲಿ, ಗೀತೆಗಳಲ್ಲಿ, ಕುಡಿಯುವ ನೀರಿನ ಬಗ್ಗೆ ಬಹಳಷ್ಟು ಚರ್ಚೆ ಪ್ರಸ್ತಾಪಗಳಿವೆ. ಸೂರಿ ಓರಿಗೌಡರ ಸಿಹಿನೀರ ಬಾವಿಯನ್ನು ದಲಿತರಿಗೆ ಕೊಡಿಸಿದ ವಿಷಯ ಕಿರಿಗೌಡನಿಗೆ ತಿಳಿದು ತಾನು ಹೆಡ್ಡನಾದ ಕಥೆಯೂ ಸಹ ತಿಳಿದು ಕೆರಳಿದ ಕಿರಿಗೌಡ ಸೂರಪ್ಪನ ತಂದೆ

ಬಳಿ ಬಂದು ಸಿಕ್ಕಾಪಟ್ಟೆ ಎಗರಾಡುತ್ತಾನೆ. "ನನ್ನ ಮುಂದೆ ಚನ್ನ ಹಾಕಿಕೊಂಡು ತಿರುಗುತ್ತಿದ್ದವನು ನನಗೆ ಬುದ್ಧಿ ಕಲಿಸೋದ" ಎಂದು ಕಿರಿಚಾಡಿ ಜನ ನೋಡುವ ಹಾಗೆ ಮಾಡುತ್ತಾನೆ. ಚಿತ್ರದ ಕೆಲ ಸಂಭಾಷಣೆಯಲ್ಲಿ ಉದ್ದೇಶಪೂರ್ವಕವಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ. ಅವು ಜನಪ್ರಿಯ ಡೈಲಾಗ್‌ಗಳು ಆಗಿರದೆ ಗಾದೆ, ನಾಣ್ಣುಡಿ, ಒಗಟುಗಳಾಗಿವೆ. ಜನಪದರು ಬಳಸುವ ಅದೇ ಗಾದೆ ಮಾತುಗಳನ್ನು ಸಿನೆಮಾದಲ್ಲಿ ಬಳಸಿ ಜನಪದ ಭಾಷೆಗೆ ಸಿನಿಮಾ ಭಾಷೆಯನ್ನು ಹೊಂದಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಮೂಲಕಥೆಗೂ ಸಿನಿಮಾ ಕಥೆಗೂ ಬಹಳಷ್ಟು ಅಂತರವಿದೆ. ಸೂರಪ್ಪನ ತಂದೆ ಜೋಯಿಸರು "ಮನೆ ದೇವರಿಗೆ ಮಟ್ಟ ಕಟ್ಟಿ ಬೆಟ್ಟದ ದೇವರಿಗೆ ಹಿಟ್ಟು ಹೊತ್ತರಂತೆ" ಎಂದು ಹೀಯಾಳಿಸುತ್ತಾನೆ. ಮನೆಯಲ್ಲಿ ಬಡತನ ದಾರಿದ್ರ್ಯ ತುಂಬಿ ತುಳುಕುತ್ತಿದೆ. ಊರವರನ್ನು ಸರಿಪಡಿಸುವ ಮೊದಲು ನಿನ್ನ ಮನೆಯನ್ನು ನೀನು ಸರಿಪಡಿಸಿಕೊ ಎಂದು ಬುದ್ಧಿ ಮಾತು ಹೇಳುತ್ತಾರೆ. "ಊರಿಗೆ ಮಾಡಿ ಹಿರಿಗೌಡ ಎನಿಸಿಕೊಳ್ಳುವ ಬದಲು ಮನೆಗೆ ಮಾಡಿ ಕಿರಿಗೌಡ ಎನಿಸಿಕೊಳ್ಳುವ ಹಾಗೆ".

ಗಿರಿಜಾ ಹಾಗೂ ಗೌಡರ ಮನೆಯಾಳು ಹರಿಯುವ ನದಿಯಲ್ಲಿ ಎತ್ತಿನ ಗಾಡಿ ಚಕ್ರ ಸಿಕ್ಕಿಹಾಕಿಕೊಂಡು ಅದನ್ನು ಎತ್ತಲಾರದೆ ಒದ್ದಾಡುತ್ತಿದ್ದಾಗ ಸೂರಿ ಬಂದು ಚಕ್ರ ತಳ್ಳಿ ಗಾಡಿ ಮುಂದೆ ಹೋಗಲು ಅನುವು ಮಾಡಿಕೊಡುತ್ತಾನೆ. ಇಲ್ಲಿಯೂ ಸಹಾ ಹರಿಯುವ ಹೊಳೆಯ ಮಧ್ಯೆ ಎತ್ತಿನಗಾಡಿ ಮುಂತಾದ ಜಾನಪದ ಪರಿಕರಗಳನ್ನು ಬಳಸಲಾಗಿದೆ. ಗೌಡನ ಮನೆ ಹಳ್ಳಿ ಮನೆ ಮರದ ಕಂಬಗಳಿಂದ ಮಾಡಿದ ಮಾಳಿಗೆ. ಮನೆ ಮುಂದೆ ಮೊಮ್ಮಗಳು ಬಂದಾಗ ತಾತನಿಗೆ ಖುಷಿ ಸಾಯೋ ಕಾಲದಲ್ಲಿ ನೀನಾದರೂ ಬಂದ್ಯಲ್ಲಾ ಈ ಮುದುಕನ್ನ ನೋಡಿಕೊಳ್ಳಲು ಎಂದು ತಾತ ಸಂತಸಪಡುತ್ತಾನೆ. ಇನ್ನು ಮೊಮ್ಮಕ್ಕಳಿಗೆ ಅಜ್ಜ ಅಜ್ಜಿಯ ಕಥೆ ಎಂದರೆ ಬಹಳ ಪ್ರೀತಿ. ಇವರ ಸಂಬಂಧ ಸಹಾ ಬಹಳ ಅನ್ಯೋನ್ಯ. ಅಜ್ಜನೊಂದಿಗೆ ಸಮಯ ಕಳೆಯುವುದು ಪ್ರತಿ ಮೊಮ್ಮಕ್ಕಳಿಗೂ ಬಹಳ ಇಷ್ಟ. ಮಕ್ಕಳು ಸಮಯ ಕೊಡದೇ ಇದ್ದರೂ ಮೊಮ್ಮಕ್ಕಳು ಈ ವೃದ್ಧರಿಗೆ ಸಮಯ ಕೊಡುತ್ತಾರೆ. ಅಜ್ಜಿ ತಾತ ಎಂದು ಪ್ರಾಣ ಬಿಡುವ ಮೊಮ್ಮಕ್ಕಳು ಸಹಾ ಉಂಟು.

ಚಂದ್ರ ಸೂರಿಯನ್ನು ಹುಡುಕಿಕೊಂಡು ಬೆಟ್ಟದ ತಪ್ಪಲಿಗೆ ಬಂದು ಮನೆಯಲ್ಲಿ ನಡೆದ ಘಟನೆ ಕೇಳಿ ನೊಂದುಕೊಳ್ಳುತ್ತಾನೆ. ಊರವರ ಕಷ್ಟ ನೋಡಿದ ನನ್ನ ಕಣ್ಣಿಗೆ ನನ್ನ ತಾಯಿಯ ಹರಿದ ಸೀರೆ ಕಾಣಲಿಲ್ಲ ಅವಳ ಮಮತೆ ತುಂಬಿದ ಕಣ್ಣುಗಳನ್ನು ನೋಡಿದೆ. ಬಡತನ ನೋಡಲಿಲ್ಲವಲ್ಲ, ಇಷ್ಟು ದಿನ ವ್ಯರ್ಥವಾಗಿ ಸಮಯ ಕಳೆದೆ ಎಂದು ಕಣ್ಣೀರಿಡುತ್ತಾನೆ. ಈ ದೃಶ್ಯದಲ್ಲಿಯೂ ರಾಜಣ್ಣನವರ ಅಭಿನಯ ಕಣ್ಣಿಗೆ ಕಟ್ಟಿದಂತಿದೆ. ಅಸಹಾಯಕತೆ ಸಿಟ್ಟು ದು:ಖ ಬಡತನ ಎಲ್ಲಾ ಒಟ್ಟಾಗಿ ಉಕ್ಕಿ ಬಂದಾಗ ಅವರ ಅಭಿನಯ ಅದ್ಭುತ. ಎಂಥಹ ಪ್ರೌಢ ಅಭಿನಯ ನೀಡಿದ್ದಾರೆ ಇದಕ್ಕೆ ಪೂರಕ ಎನ್ನುವಂತೆ ರಾಷ್ಟ್ರಪ್ರಶಸ್ತಿ ವಿಜೇತ ಅನಂತನಾಗ್ ಸಹಾ ಸೂರಿಯ ಸ್ನೇಹಿತನಾಗಿ ಸಹಜ ಅಭಿನಯ ನೀಡಿದ್ದಾರೆ. ಚಂದ್ರು ನಿನ್ನ ಜೀವನಕ್ಕೇನಾದರೂ ಮಾಡು ಎಂದಾಗ ಪಶುವೈದ್ಯ, ಪೌರೋಹಿತ್ಯ ಎರಡೇ ನನಗೆ ಗೊತ್ತಿರುವುದು ಇದನ್ನು ವ್ಯಾಪಾರಕ್ಕೆ ಬಳಸುವುದೇ ಸಾಧ್ಯವಿಲ್ಲ ಎಂದು ತನ್ನ ವೃತ್ತಿ ಧರ್ಮವನ್ನು ಪ್ರಕಟಿಸುತ್ತಾನೆ. ಆಗ ಚಂದ್ರು ವ್ಯವಸಾಯ ಮಾಡು ಎಂದು ಪ್ರೇರೇಪಿಸುತ್ತಾನೆ.

ಚಂದ್ರುವಿನ ಸಲಹೆಯಂತೆ ಸೂರಿ ಕೃಷಿ ಮಾಡಲು ನಿರ್ಧರಿಸುತ್ತಾನೆ. ಕಿರಿಗೌಡರ ಮನೆಯಲ್ಲಿ ಇದ್ದ ಭೂಮಿ ಬಿಡಿಸಿಕೊಳ್ಳುತ್ತಾನೆ. ಚಂದ್ರು ಕೃಷಿ ಮಾಡುತ್ತೇನೆ ಎಂದಾಗ "ಇಮಾಮ್ ಸಾಬಿಗೂ ಗೋಕುಲಾಷ್ಟಮಿಗೂ ಏನು ಸಂಬಂಧ" ಎಂದು ರೇಗಿಸುತ್ತಾನೆ. "ಏನು ಉಂಚಾಯಿಸಿ ಮಾತಾಡ್ತ ಇದೀಯ" ಎಂದು ಗ್ರಾಮೀಣ ಭಾಷೆ ಬಳಸುತ್ತಾನೆ. "ಹಾರುವಯ್ಯನ ಶೂದ್ರನನ್ನಾಗಿ ಮಾಡಿ ಜಾತಿ ಕೆಡಿಸಲು ಹೊರಟದೀಯ" ಎಂದು ಬುದ್ಧಿ ಮಾತು ಹೇಳುವುದಲ್ಲದೆ "ನಾವು ಗೌಡರು ನೀನು ಬ್ರಾಹ್ಮಣರ ಜೊತೆ ಸೇರಿದ್ದೀಯಾ ಬಿಟ್ಟು ಬಿಡು" ಎಂದು ಕಿವಿಮಾತು ಹೇಳುತ್ತಾನೆ. ಅದಕ್ಕೆ ಚಂದ್ರು "ನಾನು ನೀನು ಕುರಿ ಕಡಿದಾಗ ಮಾತ್ರ ಒಂದು ಬೇರೆ ಸಮಯದಲ್ಲಿ ಅಲ್ಲ" ಎಂಬ ಹಳ್ಳಿ ಸಾಮರಸ್ಯ ನುಡಿಯುತ್ತಾನೆ. "ಹೌದು ಗೌಡರುಗಳು ಕುರಿ ಕಡಿದಾಗ ಬಂದಾಗ ಬಂದು ಮಾಂಸ ತೆಗೆದುಕೊಂಡು ಹೋಗುತ್ತಾರೆ" ಇದು ಸಹ ಜನಪದರಲ್ಲಿ ಕಂಡುಬರುವ ಸಾಮಾನ್ಯ ಸಂಗತಿ. ಕಿರಿಗೌಡನಿಂದ ಜಮೀನು ಪತ್ರ ತೆಗೆದುಕೊಂಡು ಹೋದ ಸೂರಿಯನ್ನು ಕಂಡು "ಏನು ಮಂಟು ಹಾಕ್ತಿಯಾ ನೋಡುವಾ" ಎಂದು ಗೌಡ ಸವಾಲು ಹಾಕುತ್ತಾನೆ. "ಕುಲಕ್ಕೆ ಮೃತ್ಯು ಕೊಡಲಿಗೆ ಕಾವು" ನಮ್ಮ ಗೌಡರ ಕುಲಕ್ಕೆ ಸಾವು ತರುವಂಥಹ ಇಂತಹ ಚಂದ್ರು ನನ್ನ ಪಕ್ಷ ಸೇರಲಿಲ್ಲ ಎನ್ನುವ ಬೇಜಾರು ಕಿರಿಗೌಡನಿಗೆ.

ಇಡೀ ಸಿನೆಮಾದಲ್ಲಿ ಕಥೆಯ ತಿರುವು ಪಡೆದುಕೊಳ್ಳುವುದು ಜಾತಿ ವ್ಯವಸ್ಥೆಯಿಂದ. ಬ್ರಾಹ್ಮಣರು ತಮ್ಮ ಮನೆಯೊಳಗೆ ಇತರ ಜಾತಿಯವನ್ನು ಬಿಟ್ಟುಕೊಳ್ಳುವುದಿಲ್ಲ. ಗೌಡರ ಜಾತಿಯವರಿಗೆ ಇತರ ಜಾತಿಯವರನ್ನು ಕಂಡರೆ ಆಗುವುದಿಲ್ಲ. ಇಂಥದ್ದೆಲ್ಲಾ ಸದಾ ಕಾಲ ನಡೆದೇ ಇರುತ್ತದೆ. ಗೌಡನಾಗಿ ಜಮೀನು ಉಳುವ ಹಕ್ಕು ನಮ್ಮದು ಒಬ್ಬ ಬ್ರಾಹ್ಮಣ, ಹಾರುವವನು ಏನು ತಾನೆ ಮಾಡುತ್ತಾನೆ. ಪೂಜೆ ಪುನಸ್ಕಾರ ಮಾಡುತ್ತಾ ತೀರ್ಥ ಪ್ರಸಾದ ಕೊಟ್ಟುಕೊಂಡು ಇರುವುದನ್ನು ಬಿಟ್ಟು ಆರಂಭ ಮಾಡೋದು ಇವನಿಂದ ಸಾಧ್ಯವೇ ಎನ್ನುವುದು ಕಿರಿಗೌಡನ ವಿಚಾರ. ಹುಟ್ಟನಿಂದಲೇ ನಾವು ಮಕ್ಕಳನ್ನು ನೀನು ಹೆಣ್ಣು, ನಾನು ಗಂಡು, ನೀನು ಬ್ರಾಹ್ಮಣ, ನೀನು ಕ್ಷತ್ರಿಯ, ನಾನು ಹೇಗಿರಬೇಕು, ನೀನು ಹಾಗಿರಬೇಕು, ಇದು ನಿನ್ನ ವೃತ್ತಿ ಧರ್ಮ ಎಂದು ಒಂದು ಕಾಂಪೌಂಡಿನಲ್ಲಿ ಬೆಳೆಸುತ್ತೇವೆ. ವಿಶ್ವಧರ್ಮ ಮಾನವ ಧರ್ಮವನ್ನು ಎಂದೂ ಯಾವ ಮಕ್ಕಳಲ್ಲೂ ಬೆಳೆಸುವುದಿಲ್ಲ. ಮಕ್ಕಳು ಬೆಳೆದು ದೊಡ್ಡವರಾದ ಮೇಲೆ ಇದೇ ಧರ್ಮವನ್ನು ಪಾಲಿಸುತ್ತಾರೆ.



ಗಿರಿಜಾಳ ಮನೆಯಲ್ಲಿ ತುಂಗೆ ಎನ್ನುವ ಹಸುವಿಗೆ ಹೊಟ್ಟೆ ಉಬ್ಬರ ಬಂದು ಅನಾರೋಗ್ಯಕ್ಕೆ ಈಡಾಗುತ್ತದೆ. ಗಿರಿಜ ಪೇಟೆಯಿಂದ ಪಶುವೈದ್ಯರನ್ನು ಕರೆತರಲು ಹೇಳಿಕಳುಹಿಸುತ್ತಾಳೆ. ಆದರೆ ಗಂಗೆ ಸೂರಿಯನ್ನು ಕರೆತರುತ್ತಾಳೆ. ಇಲ್ಲಿ ಸೂರಿ ಗಿಡಮೂಲಿಕೆಗಳಿಂದ ಪಶುಗಳಿಗೆ ಔಷಧ ನೀಡುವ ನಾಟಿ ಪದ್ಧತಿ ಅನುಸರಿಸುವ ವೈದ್ಯ.

ಹಸುವಿಗೆ ಖಾಯಿಲೆ ಆದ ವಿಷಯ ತಿಳಿದ ಸೂರಿ ಗಿರಿಜಾಳ ಮನೆಗೆ ವೈದ್ಯ ಮಾಡಲು ಬಂದಾಗ ಗಿರಿಜ ತಡೆಯುತ್ತಾಳೆ. ಅವಳಿಗೆ ನಾಟಿ ವೈದ್ಯರಲ್ಲಿ ನಂಬಿಕೆ ಇರುವುದಿಲ್ಲ. ಸೂರಿಯ ಔಷಧ ಅವಳಿಗೆ ಹಿಡಿಸುವುದಿಲ್ಲ. ಏನ್ರಿ ಮಾಡ್ತ ಇದೀರಿ ಎಂದು ರೇಗಾಡುತ್ತಾಳೆ. ಸೂರಿ "ಒಳ್ಳೆ ಉರಿಸಿಂಗಿ ಆಡಿದ ಹಾಗೆ ಆಡ್ತಾ ಇದೀರಿ" ಎಂದು ಅವಳನ್ನು ದೂರ ಇಟ್ಟು ಸೊಪ್ಪಿನ ರಸ ಕುಡಿಸಿ ಹಸುವಿನ ಖಾಯಿಲೆ ಗುಣಪಡಿಸುತ್ತಾನೆ. ಔಷಧ ಕುಡಿದ ಸ್ವಲ್ಪ ಹೊತ್ತಿನಲ್ಲಿ ಹಸು ಎದ್ದು ನಿಲ್ಲುತ್ತದೆ. ಮನೆ ಕೆಲಸದವ ಅಂಗಳಪ್ಪ ಇತರರು ಎಲ್ಲರೂ ಸಂತಸಪಡುತ್ತಾರೆ. ಕೆಲಸದವನಾಗಿ ಶನಿಮಹದೇವಪ್ಪ ಅತ್ಯುತ್ತಮ ಸಹಜ ಅಭಿನಯ ನೀಡಿದ್ದಾರೆ. ಗಿರಿಜಾಳಿಗೆ ಸೋಜಿಗವೆನಿಸುತ್ತದೆ.



ಈಗಲೂ ಹಳ್ಳಿ ಕಡೆ ಜಾನಪದ ಔಷಧ ಜನಪದ ವೈದ್ಯರಿದ್ದಾರೆ. ಓದು ಬರಹ ಗೊತ್ತಿಲ್ಲದೇ ಹೋದರೂ ನಾಡಿ ಮಿಡಿತದಿಂದ ರೋಗದ ಜಾಡನ್ನು ಕಂಡು ಹಿಡಿದು ಗುಣಪಡಿಸುವ ಹಲವು ಜಾನಪದ ವೈದ್ಯರು ನಮ್ಮಲ್ಲಿ ಇದ್ದಾರೆ. ಇಂಥಹ ಒಂದು ಜಾನಪದ ವೈದ್ಯ ಪದ್ಧತಿಯನ್ನು ಸಿನೆಮಾದಲ್ಲಿ ಬಳಸಲಾಗಿದೆ.

ಹಳ್ಳಿಯ ಹಾದಿ, ತೆಂಗಿನ ತೋಟ, ಗದ್ದೆ, ಜಮೀನಿನ ನಡುವೆ ನಡೆದು ಬಂದ ಗಿರಿಜಾ ಹಳ್ಳಿಯ ಸೊಬಗಿಗೆ ಬೆರಗಾಗುತ್ತಾಳೆ. ಪಟ್ಟಣದಲ್ಲಿ ಕಲಿತುಬಂದವಳಾಧರೂ ಹಳ್ಳಿ ಬಗ್ಗೆ ಅವಳಿಗೆ ಪ್ರೇಮ. ದೇವಸ್ಥಾನದಲ್ಲೂ ಸೂರಿ ಪೌರೋಹಿತ್ಯ ಮಾಡುತ್ತಿರುತ್ತಾನೆ. ಮಣ್ಣು ಪರೀಕ್ಷೆಗೆಂದು ಗಿರಿಜ ಆತನ ಸ್ನೇಹಿತನ ಜೊತೆಗೆ ಹೋದಾಗ ಅವಳ ಸ್ನೇಹಿತ ಅವಳೊಂದಿಗೆ ಅಸಭ್ಯವಾಗಿ ವರ್ತಿಸುತ್ತಾನೆ. ಹಿರಿಗೌಡನ "ಅವನು ಗೃಹಸ್ಥನಂತೆ ಕಾಣ್ತಾ ಇಲ್ಲಾ" ಎಂದು ಗ್ರಾಮೀಣ ಶೈಲಿಯಲ್ಲಿ ನುಡಿದು ಎಚ್ಚರಿಸುತ್ತಾನೆ. ಆದರೂ ಹಿರಿಯರ ಮಾತನ್ನು ಕೇಳದ ಗಿರಿಜಾಗೆ ನಂತರ ಪಶ್ಚಾತ್ತಾಪ ಆಗುತ್ತದೆ. ಅದಕ್ಕೆ ದೊಡ್ಡವರು ಹೇಳಿದರೆ ಕೇಳಬೇಕು ಎನ್ನುವುದು. ಅಲ್ಲಿಗೆ ಸರಿಯಾಗಿ ಸೂರಿ ಬಂದು ಗಿರಿಜಾಳನ್ನು ರಕ್ಷಿಸಿ ಮನೆಗೆ ತಂದುಬಿಡುತ್ತಾನೆ. ಜಾತಿ ಮೀರಿದ ಪ್ರೀತಿ ಅಲ್ಲಿಂದ ಆರಂಭ ಆಗುತ್ತದೆ. ಪ್ರಾಚೀನ ಶೈಲಿಯೊಂದಿಗೆ ಆಧುನಿಕತೆ ಬೆರೆಯಬೇಕು. ಎಂದು ಹೊಸ ಸಂದೇಶ ಸಹಾ ಸಿನೆಮಾದಲ್ಲಿ ಇದೇ ಸೂರಿ ಚಂದ್ರು ಮಣ್ಣು ಪರೀಕ್ಷೆ ಮಾಡಿಸುತ್ತಾರೆ. ಕೃಷಿ ವಿಜ್ಞಾನಿಗಳು ಭೂಮಿ ಪರಿಶೀಲಿಸುತ್ತಾರೆ.



ಸೂರಿಯ ತಂದೆ ಭೂಮಿ ಪೂಜೆ ನೆರವೇರಿಸುತ್ತಾರೆ. ಅವರು ಸೂರ್ಯನನ್ನು ನೋಡಿ ಹೊಲ ಉಳಲು ಆದೇಶ ನೀಡುತ್ತಾರೆ. ನಮ್ಮ ಹಿರೀಕರಿಗೆ ಸೂರ್ಯನೇ ದೇವರು. ಗಡಿಯಾರ ಎಲ್ಲಾ, ಸೂರ್ಯೋದಯ, ಸೂರ್ಯಾಸ್ತ ಜನಪದರಲ್ಲಿ ಅತ್ಯಂತ ಮುಖ್ಯ. ಹುಟ್ಟು ಮೂಡೋ ಹೊತ್ತು ಹುಟ್ಟು ಮುಳುಗಿತು ಎಂದು

ಗ್ರಾಮೀಣ ಭಾಷೆಯಲ್ಲಿ ನುಡಿಯುತ್ತಾರೆ. ಇದೇ ಸಂದರ್ಭದಲ್ಲಿ ರಾಷ್ಟ್ರಕವಿ ಕುವೆಂಪುರವರ ರೈತ ಗೀತೆಯನ್ನು ಅತ್ಯಂತ ಸಮರ್ಪಕವಾಗಿ ಬಳಸಿಕೊಳ್ಳಲಾಗಿದೆ.





ಇಡೀ ಹಾಡಿನಲ್ಲಿ ಉತ್ತು ಬಿತ್ತು ಗೊಬ್ಬರ ಹಾಕಿ ಕಟಾವು ಮಾಡುವವರೆಗೂ ಕೃಷಿ ಚಟುವಟಿಕೆಯನ್ನು ಚಿತ್ರಿಸಲಾಗಿದೆ.

"ನೇಗಿಲ ಹಿಡಿದ ಹೊಲದಲಿ ಹಾಯುತಾ
ಉಳುವ ಯೋಗಿಯಾ ನೋಡಲ್ಲಿ,"
"ನೇಗಿಲ ಕುಲದಲಿ ಅಡಗಿದೆ ಕರ್ಮ, ನೇಗಿಲ ಮೇಲೆ ನಿಂತಿದೆ ಧರ್ಮ"
"ಮುತ್ತಿಗೆ ಹಾಕಲಿ ಸೈನಿಕರೆಲ್ಲಾ ಬಿತ್ತು ಉಳವುದನ ಬಿಡುವುದೇ ಇಲ್ಲ.. .. .."





ಕುವೆಂಪು ಅವರು ಈ ಗೀತೆಯಲ್ಲಿ ಇಡೀ ದೇಶವು ನಿಂತಿರುವುದು ರೈತನ ಶ್ರಮದಿಂದ ಎಂಬ ನಿಲುವನ್ನು ತಾಳುತ್ತಾರೆ. ರೈತನು ತಾನು ಬೆಳೆದು ಇಡೀ ಮಾನವ ಕುಲಕ್ಕೆ ಅನ್ನವನ್ನು ನೀಡುವ ಮೂಲಕ ಎಲ್ಲರಿಗೂ ಮಾದರಿಯೆನಿಸಿದ್ದಾನೆ. ಆದ್ದರಿಂದ ಕುವೆಂಪು ಅವರು ರೈತನನ್ನು ನೇಗಿಲ ಯೋಗಿ ಎಂದು ಬಣ್ಣಿಸಲಾಗಿದೆ.

ಇಲ್ಲಿ ಸೈನಿಕ ಹಾಗೂ ರೈತರ ನಡುವಿನ ಯುದ್ಧದ ದೃಶ್ಯವನ್ನು ಚಿತ್ರಿಸಲಾಗಿದೆ. ಉಳುವುದೇ ರೈತನ ಧರ್ಮ. ಅನ್ನ ನೀಡುತ್ತಾಳೆ. ಭೂಮಿತಾಯಿ ಜೂನ್-ಜುಲೈ ೨೦೧೫ರ ಮಧ್ಯೆ ನೂರಾರು ರೈತರು ಸಾಲದ ಹೊರೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಮಡಿದ್ದಾರೆ. ರೈತರಿಗೆ ತಮ್ಮ ಮೇಲಿನ ಆತ್ಮವಿಶ್ವಾಸ ಕಡಿಮೆಯಾಗುತ್ತಿದೆ. ಸಾಲಕ್ಕೆ ಸರ್ಕಾರ ಎಷ್ಟರ ಮಟ್ಟಿಗೆ ಹೊಣೆ. ನಮ್ಮ ತಪ್ಪುಗಳಿಗೆ ನಾವೇ ಕಾರಣ. ದೇವರನ್ನು ಕೆಲವರು ಹೊಣೆಗಾರರನ್ನಾಗಿ ಮಾಡುತ್ತಾರೆ. ನಮ್ಮ ಜೀವನವನ್ನು ನಾವೇ ತಾನೇ ರೂಪಿಸಿಕೊಳ್ಳಬೇಕು. ಸಾಲದ ಹೊರೆ ಯಾವ ರೈತನಿಗಿಲ್ಲ. ಹಾಗೆಂದು ಎಲ್ಲ ರೈತರು ಆತ್ಮಹತ್ಯೆ

ಮಾಡಿಕೊಂಡರೆ ಹೇಗೆ? ಯಶಸ್ವಿಯಾಗಿ ಕೃಷಿ ಮಾಡಿದ ಮಾದರಿ ರೈತರು ಸಹಾ ನಮ್ಮಲ್ಲಿ ಇದ್ದಾರೆ. ೨೦೧೫ ರ ಅಕ್ಟೋಬರ್ ದಸರಾ ಹಬ್ಬದ ಉದ್ಘಾಟನೆಯನ್ನು ದಲಿತ ಮಾದರಿ ರೈತನಿಂದ ಮಾಡಿಸಲಾಯಿತು. ಇದೊಂದು ಸಾಧನೆ ಅಲ್ಲದೆ ಮತ್ತೇನು. ಸರ್ಕಾರ ನೀಡಿದ ಬರಡು ಭೂಮಿಯನ್ನು ಉತ್ತು ಬಿತ್ತು ಬಂಗಾರದ ಬೆಲೆ ತೆಗೆದ ರೈತ ಈಗ ನಾಡಿಗೇ ಮಾದರಿ ಎನಿಸಿಕೊಂಡಿದ್ದಾನೆ. ನಾಡ ಹಬ್ಬ ದಸರಾದ ಉದ್ಘಾಟನೆ ದೇಶದ ಬೆನ್ನೆಲೆಬು ಎನಿಸಿಕೊಂಡ ರೈತನಿಂದ ಇಂತಹ ಗೌರವ ಯಾರಿಗುಂಟು ? ಯಾರಿಗಿಲ್ಲ? ಕಿರಿಗೌಡನಿಂದ ವಾಪಸ್ಸು ಪಡೆದ ಜಮೀನಿನಲ್ಲಿ ಸೂರಿ ಮೈಮುರಿದು ದುಡಿದು ಒಳ್ಳೆಯ ಬೆಳೆ ತೆಗೆಯುತ್ತಾನೆ. ಅತ್ಯುತ್ತಮ ಬೆಳೆ ತೆಗೆದ ಮಾದರಿ ರೈತ ಎಂದು ಕೃಷಿ ತಜ್ಞರು ಹೊಲದ ಮಧ್ಯೆ ಕ್ಷೇತ್ರೋತ್ಸವ ಕಾರ್ಯಕ್ರಮ ಮಾಡಿ ಸೂರಿಯನ್ನು ಗೌರವಿಸುತ್ತಾರೆ. ಅದಕ್ಕೆ ಅವನು ಈ ಗೌರವ ನನ್ನ ಸ್ನೇಹಿತ ಚಂದ್ರುಗೆ ಸಲ್ಲಬೇಕು ಎಂದು ಇಬ್ಬರೂ ಅಪ್ಪಟ ಸ್ನೇಹಿತರು ಎಂದು ಇಡೀ ಊರಿಗೆ ತಿಳಿಸುತ್ತಾರೆ.



ರಾಜಣ್ಣನವರ ಚಿತ್ರಗಳಲ್ಲಿ ಕೃಷಿ ವಿಚಾರಗಳು ಬಹಳಷ್ಟು ಬಂದು ಹೋಗಿವೆ. ಚಂದವಳ್ಳಿಯ ತೋಟ, ಬಂಗಾರದ ಮನುಷ್ಯ, ಮಲ್ಲಮ್ಮನ ಪವಾಡ, ಮುಂತಾದ ಸಿನೆಮಾಗಳಲ್ಲಿ ಕೃಷಿ ಮಾಡಿ ಗೆದ್ದ ರೈತನ ಪಾತ್ರವನ್ನು ರಾಜಣ್ಣನವರು ಮಾಡಿ, ರೈತರ ಮನ ಗೆದ್ದಿದ್ದಾರೆ. ಪ್ರತಿ ಸಿನೆಮಾದಲ್ಲಿಯೂ ಭೂಮಿ ತಾಯಿಯನ್ನು ನಂಬಿದವರು ಕೆಡುವುದಿಲ್ಲ. ರೈತ ಅನ್ನದ ಸಮಸ್ಯೆಯನ್ನು ನೀಗುತ್ತಾನೆ ಎಂದು ಸಕಾರಾತ್ಮಕ ಪ್ರತಿಕ್ರಿಯೆ ನೀಡಿದ್ದಾರೆ. ಎಲ್ಲಿಯೂ ಸಾಲ ಮಾಡಿ ಆತ್ಮಹತ್ಯೆ ಮಡಿಕೊಳ್ಳುವ ಒಂದು ಪ್ರಯತ್ನವನ್ನೂ ಮಾಡಿಲ್ಲ. ಹಳ್ಳಿಯಲ್ಲಿ ವಾಸಿಸುವ ನಮ್ಮ ಜನಪದರ ನಂಬಿಕೆಯನ್ನು ಮತ್ತಷ್ಟು ಹೆಚ್ಚಿಸಿದ್ದಾರೆ. ಅದಕ್ಕೆ ಅವರನ್ನು ಬರಗೂರು ರಾಮಚಂದ್ರಪ್ಪ ದೇಸಿ ನಾಯಕ ಜನಪದರ ನಾಯಕ ಎಂದು ಕರೆದಿದ್ದಾರೆ. ರಾಜಕುಮಾರ್ ಎಂದು ಹೆಸರಿದ್ದರೂ ರಾಜನಂತೆ ಮೆರೆಯದ ಕುಮಾರನಂತೆ ತಗ್ಗಿ ಬಗ್ಗಿ ನಡೆದುಕೊಂಡಿದ್ದೇ ಅವರ ಜೀವನದ ಯಶಸ್ಸಿನ ರಹಸ್ಯ. ಇನ್ನು ಸೂರಿ ಅದೇ ಸಮಯದಲ್ಲಿ ಗಿರಿಜಾಳನ್ನು ಸಹಾ ಗೌರವಿಸಲು ಹೇಳುವುದು ಹೆಣ್ಣು ಮಕ್ಕಳಿಗೆ ನೀಡುವ ಗೌರವದ ದ್ಯೋತಕವಾಗಿದೆ. ಆರು ತಿಂಗಳ ಹಿಂದೆ ನಿರುದ್ಯೋಗಿ ಈಗ ಕೃಷಿಕ ಎಂದು ತನ್ನನ್ನು ತಾನು ರೈತ ಎಂದು ಗುರುತಿಸಿಕೊಳ್ಳುವ ಸೂರಿಯ ಮೇಲೆ ಗಿರಿಜಾಳಿಗೆ ಪ್ರೀತಿ ಹುಟ್ಟುತ್ತದೆ.

ಈ ಚಿತ್ರದ ದೊಡ್ಡ ವಿಶೇಷತೆ ಎಂದರೆ ಸಂಗೀತಕ್ಕೆ ನೀಡಿರುವ ಪ್ರಾಧ್ಯಾನ್ಯತೆ. ಸಂಗೀತದ ಇಡೀ ಸೌಂದರ್ಯವನ್ನು ನಿರೂಪಿಸಿರುವುದು ಇಲ್ಲಿನ ಮತ್ತೊಂದು ವಿಶೇಷತೆಯಾಗಿದೆ. ಸಾಹಿತ್ಯವು ಸಂಗೀತಕ್ಕೆ ಹೆಚ್ಚು ಪೂರಕವಾಗಿದ್ದು ಹಳ್ಳಿಯ ವಸ್ತುವನ್ನೇ ಕೇಂದ್ರವಾಗಿಟ್ಟುಕೊಂಡು ಹಾಡುಗಳನ್ನು ರೂಪಿಸಲಾಗಿದೆ. ಉದಾಹರಣೆಗೆ "ಕಣ್ಣು ಕಣ್ಣು ಕಲೆತಾಗ. ಮನವು ಉಯ್ಯಾಲೆಯಾಗಿದೆ. ತೂಗಿ ಹೃದಯ ಜಿಡಲಾರೆ

ಎಂದಿದೆ ಕೂಗಿ" ಅಷ್ಟೇ ಅಲ್ಲದೇ ಹಾಡಿನ ಚಿತ್ರೀಕರಣವನ್ನು ನಮ್ಮ ಕರ್ನಾಟಕದ ಸಾಂಸ್ಕೃತಿಕ ಪರಿಸರದಲ್ಲೇ ಹಳ್ಳಿಯ ತೋಟ ಗದ್ದೆಗಳಲ್ಲಿ, ಬೆಟ್ಟ ಗುಡ್ಡಗಳ ನಡುವೆ ಮಾಡಿರುವುದು ದೇಸಿತನಕ್ಕೆ ಒತ್ತು ಕೊಡಲಾಗಿದೆ.

ನಮ್ಮ ಇತ್ತೀಚಿನ ಚಿತ್ರಗಳಲ್ಲಿ ನಾಯಕ-ನಾಯಕಿಯರು ಹಾಡು ಎಂದ ತಕ್ಷಣ ಕಥೆಗೆ ಪೂರಕವಾಗಿಲ್ಲದಿದ್ದರೂ ವಿದೇಶಕ್ಕೆ ಹಾರುವ ನಿರ್ದೇಶಕರ ದೇಸಿತನಕ್ಕೆ ಏನು ಹೇಳಬೇಕು. ಅದು ದೇಸಿತನವಲ್ಲ. ವಿದೇಸಿತನ. ಹಾಡಿನಲ್ಲಿ ಚಿತ್ರ ವಿಚಿತ್ರ ಅರೆ ಬರೆ ಬಟ್ಟೆ ತೊಟ್ಟ ನಾಯಕ ನಾಯಕಿ ವಿಚಿತ್ರ ನೃತ್ಯ ಕಳಪೆ ಸಾಹಿತ್ಯ, ಅಶ್ಲೀಲ ಸಾಹಿತ್ಯ ಒಂದೇ ಎರಡೇ ಅದಕ್ಕೆ ನಮ್ಮ ಕನ್ನಡ ಚಿತ್ರಗಳು ಇಂದು ಮುಗ್ಗರಿಸಿ ಬೀಳುತ್ತವೆ. ನಿರ್ದೇಶಕರು ಹಿಂದಿನ ಸಿನಿಮಾ ನೋಡಿ ಏನನ್ನು ಕಲಿತಿದ್ದಾರೆ ಎಂಬ ಸಂದೇಹ ಮೂಡುತ್ತದೆ. ನಾಯಕ ನಾಯಕಿ ಪ್ರೇಮ ಸಲ್ಲಾಪ ಮಾಡುತ್ತಿದ್ದರೂ ಒಂದು ಮಿತಿಯಲ್ಲಿ ಅವರ ಹಾವ ಭಾವ ಇರುತ್ತದೆ. ಎಲ್ಲಾ ವಯಸ್ಸಿನವರೂ ನೋಡಬಹುದಾದ ಚಿತ್ರಗಳು ರಾಜಣ್ಣನವರ ಚಿತ್ರಗಳು. ಕೇವಲ ಮನೋರಂಜನೆ ಚಿತ್ರದ ಉದ್ದೇಶವಲ್ಲ ಪ್ರತಿ ಸಿನೆಮಾದಲ್ಲೂ ಒಂದಲ್ಲ ಒಂದು ಸಂದೇಶ ಇರುತ್ತದೆ. ಇವು ಕ್ಲಾಸ್ ಕಮ್ ಮಾಸ್ ಸಿನೆಮಾಗಳು. ಹಾಡಿನ ಸನ್ನಿವೇಶ ಒಂದರಲ್ಲಿ ಗಿರಿಜಾ ಹಳ್ಳಿ ಹೆಣ್ಣು ಮಗಳಂತೆ ಕಾಸಿನಗಲ ಬೊಟ್ಟು ಇಟ್ಟು ಚೌಕುಳಿ ಸೀರೆ ಉಟ್ಟು ತಲೆ ಮೇಲೆ ಬುತ್ತಿ ತರುವ ಪ್ರಸಂಗವಿದೆ. ಗಂಡನಿಗೆ ಮಧ್ಯಾಹ್ನಕ್ಕೆ ಬುಟ್ಟಿಯಲ್ಲಿ ಊಟ ತರುವ ಪದ್ಧತಿಯೂ ತೀರಾ ಹಳೆಯದು. ನಡು ಬಿಸಿಲೆನ್ನದೆ ದುಡಿಯುವ ಗಂಡ, ಆ ಬಿಸಿಲನ್ನು ಲೆಕ್ಕಿಸದೆ ತಲೆ ಮೇಲೆ ಸೆರಗಿನ ಸಿಂಬೆ ಅದರ ಮೇಲೆ ಬುಟ್ಟಿ ಅದರಲ್ಲಿ ಹಿಟ್ಟು, ಉಪ್ಪುಸಾರು, ಸೊಪ್ಪು ಕಾಳು, ಉಪ್ಪಿನೆಸರ ಖಾರ, ಅನ್ನ ಇದ್ದರೆ ಉಂಟು ಇಲ್ಲದಿದ್ದರೆ ಇಲ್ಲ. ಇದೇ ರೈತರ ಮೃಷ್ಟಾನ್ನ ಅಲ್ಲೆ ಕಾಲುವೆಯಲ್ಲಿ ಹರಿಯುವ ನೀರನ್ನು ಚೆಂಬಲ್ಲಿ ಮೊಗೆದು ಕುಡಿದು ನೆಮ್ಮದಿಯಿಂದ ತೇಗುವ ರೈತ ಇನ್ನೇನು ಯೋಚಿಸುವುದಿಲ್ಲ. ಗಂಡ ಉಂಡ ನಂತರ ಬಿಟ್ಟ ತಟ್ಟೆಯಲ್ಲಿಯೇ ಹೆಂಡತಿ ಸಹಾ ಉಣ್ಣುತ್ತಾಳೆ. ಇಂತಹ ಅಪರೂಪದ ದೃಶ್ಯಗಳು ರಾಜಣ್ಣನವರ ಸಿನೆಮಾದಲ್ಲಿ ಕಂಡು ಬರುತ್ತವೆ.





ಈ ಚಿತ್ರದಲ್ಲಿ ರಾಜ್ ಅವರ ಮೌಲ್ಯಗಳನ್ನು ಗುರುತಿಸುತ್ತಾ ಜೊತೆಗೆ ಜನಪದ ಅಂಶಗಳು. ಜನಪದರ ಮೌಲ್ಯಗಳು ಕುರಿತು ತಾತ್ವಿಕವಾದ ವಿಮರ್ಶೆಯನ್ನು ಮಾಡಲಾಗಿದೆ. ಅಲ್ಲದೇ ಜನಪದದ ಅಥವಾ ಜನಪದರ ಮೌಲ್ಯಗಳು ಎತ್ತರಕ್ಕೆ ನಿಲ್ಲುವ ತತ್ವಗಳನ್ನು ತೋರಿಸಲಾಗಿದೆ. ಹಳ್ಳಿ. ಹಾಡು. ಭಾಷೆ. ಸಂಸ್ಕೃತಿ. ಕೃಷಿ ಜಾತ್ರೆ. ತೇರು. ರಥ ಇವೆಲ್ಲವುಗಳಲ್ಲಿ ಅಡಗಿದೆ ಎಂದು ಹೇಳಬಹುದು.

## ೪. ಸರ್ವಮಂಗಳಾ : ವಿಶ್ಲೇಷಣಾತ್ಮಕ ಚಿಂತನೆ



ಚದುರಂಗರವರು ಕನ್ನಡ ಸಾಹಿತ್ಯದ ಕಾದಂಬರಿಕಾರರು. ಇವರ ಜನಪ್ರಿಯ ಕಾದಂಬರಿ "ಸರ್ವಮಂಗಳ", ಈ ಕಾದಂಬರಿಯನ್ನು ಚದುರಂಗರವರು ತಮ್ಮ ನಿರ್ದೇಶನಕ ಮೂಲಕ ಬೆಳ್ಳಿ ತೆರೆಗೆ ಪರಿಚಯಿಸಿದರು. ಉತ್ತಮವಾಗಿ ಬೆಳ್ಳಿತೆರೆಯಲ್ಲಿ ಮೂಡಿಬಂದು ಸಹೃದಯದಿಂದ ಜನಪ್ರಿಯತೆ ಪಡೆದುಕೊಂಡಿತು. ಸರ್ವಮಂಗಳ ಚಲನಚಿತ್ರವು ರಾಷ್ಟ್ರಪ್ರಶಸ್ತಿಯನ್ನು ತನ್ನ ಮುಡಿಗೇರಿಸಿಕೊಂಡಿತು.

ಸ್ವಾತಂತ್ರ್ಯ ಪೂರ್ವದಲ್ಲಿ ನಡೆಯುವ ಚಿತ್ರಕಥೆಯಲ್ಲಿ ಬ್ರಿಟಿಷರ ದಬ್ಬಾಳಿಕೆ, ಯುವಪೀಳಿಗೆ, ಬ್ರಿಟಿಷರನ್ನು ಹೊರದಬ್ಬಲು ನಡೆಸುವ ಹೋರಾಟ ಅದರಲ್ಲಿ ಹೋರಾಟ ಸಂಘರ್ಷಕ್ಕಿಳಿದು ಇಡೀ ಜೀವನದ ಸುಖ – ಸಂತೋಷ ಕಳೆದುಕೊಂಡು ಟಿ.ಬಿ. ಕಾಯಿಲೆಗೆ ತುತ್ತಾದ ನಟರಾಜ ಎಂಬ ಯುವಕನ ಕಥೆ ಕೇಂದ್ರಿತವಾಗಿದೆ. ನಟರಾಜನ ಅಕ್ಕನ ಮಗಳಾದ ಸರ್ವಮಂಗಳೆ ತನ್ನ ಮಾವನನ್ನೆ ಮದುವೆ ಆಗುವೆ ಎಂದು ಬಾಲ್ಯದಿಂದಲೂ ಕನಸು ಕಂಡು ಅದು ನೆರವೇರದೆ ಒಲ್ಲದ ಮನಸ್ಸಿನಿಂದ ಬೇರೆ ಕಡೆ ಮದುವೆ ಆಗಿ ಅಲ್ಲಿಯೂ ಸುಖ ಕಾಣದೆ ಇಡೀ ಜೀವನವನ್ನು ನಟರಾಜನ ನೆನಪಿನಲ್ಲಿ ಕಳೆದು ಕೊನೆಗೆ ನಟರಾಜನನ್ನೆ ಸೇರುವ ದುಃಖಾಂತ ಕಥೆಯಿದು. ಆ ಕಾಲಕ್ಕೆ ಅತ್ಯುತ್ತಮ ಚಿತ್ರವೆಂದು ರಾಷ್ಟ್ರಪ್ರಶಸ್ತಿ ಪಡೆದ ಚಿತ್ರ.



ಚಿತ್ರ ಆರಂಭದಿಂದಲೂ ಅಂತ್ಯದವರೆವಿಗೂ ಇಡೀ ಕಥೆ ಹಳ್ಳಿಯ ವಾತಾವರಣದಲ್ಲಿ ನಡೆಯುತ್ತದೆ. ಮನೆಯ ವಾತಾವರಣ ಬಂದಾಗ ಸ್ಟುಡಿಯೋದಲ್ಲಿ, ಹೊರಗಿನ ದೃಶ್ಯ ಎಂದಾಗ ಮೈಸೂರಿನ ಚಾಮುಂಡಿ ಬೆಟ್ಟದಲ್ಲಿ ನಗರದ ಚಾಮರಾಜೇಂದ್ರ ಸರ್ಕಲ್‌ನಲ್ಲಿ ಹಾಗೂ ಮೈಸೂರಿನ ಹೊರಾಂಗಣ ದೃಶ್ಯ ಚಿತ್ರೀಕರಿಸಲಾಗಿದೆ. ಚಿತ್ರದಲ್ಲಿ ಬರುವ ಪಾತ್ರಧಾರಿಗಳು ಗ್ರಾಮೀಣ ಭಾಷೆಯಲ್ಲಿ ಗಾದೆ ನುಡಿಗಟ್ಟುಗಳನ್ನು ಸಮರ್ಪಕವಾಗಿ ಬಳಸಿಕೊಂಡಿದ್ದಾರೆ. ಹಳ್ಳಿಯವರಂತೆ ಕಾಣುವ ಹಾಗೆ ಸಿಂಗರಿಸಿಕೊಂಡಿದ್ದಾರೆ. ಜಾನಪದ ಗೀತೆಯನ್ನು ಬಳಸಲಾಗಿದೆ. ಒಳಾಂಗಣ ಚಿತ್ರೀಕರಣದಲ್ಲಿ ಜಾನಪದ ವಿಚಾರಗಳನ್ನು ದನ, ಎತ್ತು, ಹಸು, ಕರು, ಕುರಿ ಮುಂತಾದ ಸಾಕುಪ್ರಾಣಿಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಬಳಸಲಾಗಿದೆ.

ನಟರಾಜ ಪಾರ್ವತಿಯ ತಮ್ಮ, ಅಪ್ಪ ಅಮ್ಮ ಇಲ್ಲದ ನಟರಾಜನನ್ನು ಅಕ್ಕ ಭಾವ ಸಾಕಿ ಬೆಳೆಸುತ್ತಾರೆ. ಸಾಕಷ್ಟು ಆಸ್ತಿಪಾಸ್ತಿಗಳು ನಟರಾಜನ ತಂದೆಯಿಂದ ಅಳಿಯನಿಗೆ ಸಿಕ್ಕಿದೆ. ಆದರೂ ಪಾರ್ವತಿಯ ಗಂಡ ಜಿಪುಣ. ತನ್ನ ಭಾವ ಮೈದುನನಿಗೆ ಹಣ ಖರ್ಚು ಮಾಡಲು ಸಾಧ್ಯವಿಲ್ಲ. ಆದರೆ ಅವನ ತಾಯಿಗೆ ನಟರಾಜ ಮೇಲೆ ಬಹಳ



ಪ್ರೀತಿ. ಚಿಕ್ಕಂದಿನಿಂದಲೂ ನಟರಾಜ ಸರ್ವಮಂಗಳ ಒಟ್ಟಾಗಿ ಅಜ್ಜಿಯ ಪ್ರೀತಿ ಆರೈಕೆಯಲ್ಲಿ ಬೆಳೆದವರು. ಇವರಿಬ್ಬರೂ ಬಾಲ್ಯದಲ್ಲೇ ಗಂಡ ಹೆಂಡತಿ ಎನ್ನುವ ಭಾವನೆ ಎಲ್ಲರೂ ಮೂಡಿಸುತ್ತಾರೆ. ಮಂಗಳ ನಟರಾಜನನ್ನು ಬಿಟ್ಟು ಇರಲಾರಳು. ಅವನೊಂದಿಗೆ ಊಟ, ಆಟ, ಸುತ್ತಾಟ, ರಾತ್ರಿ ಕೂಡ ಆ ಪುಟ್ಟ ಮಂಗಳ ಅವನೊಂದಿಗೆ ನಿದ್ರಿಸುತ್ತಾಳೆ. ನಮ್ಮ ಹಳ್ಳಿಯಲ್ಲಿ ಒಂದು ನಂಬಿಕೆ ಈಗಲೂ ಇದೆ. ತನ್ನ ಮಗಳನ್ನು ತವರು ಮನೆಗೆ ಅಂದರೆ ತಮ್ಮನಿಗೆ ತಂದುಕೊಳ್ಳುವುದು ಅಥವಾ ಅಣ್ಣನ / ತಮ್ಮನ ಮಗಳನ್ನು ತನ್ನ ಮಗನಿಗೆ ತಂದುಕೊಂಡು ಸೊಸೆಯಾಗಿ ಮನೆ ತುಂಬಿಸಿ ಕೊಳ್ಳುವುದು. ಇದರಿಂದ ತವರು ಮನೆ ಬೆಳೆಯುತ್ತದೆ. ತಾಯಿ ಮನೆ ಒಡವೆ, ಆಸ್ತಿ ಪಾಸ್ತಿ ಬೇರೆಯವರ ಪಾಲಾಗದೆ ನಮ್ಮಲ್ಲೆ ಉಳಿಯುತ್ತದೆ. ತವರಿಗೆ ಹೋದಾಗ ನಮ್ಮ ಊರು, ತಮ್ಮವರು ಅಂತಾ ಭಾವಿಸುತ್ತಾರೆ. ಒಳ್ಳೆ ಸೊಸೆ ತಂದಿದೀಯ, ಒಳ್ಳೆ ಹೆಣ್ಣು ಮಕ್ಕಳನ್ನು ನಮ್ಮ ಮನೆಗೆ ಸೊಸೆಯಾಗಿ ಕಳುಹಿಸಿದೀಯ ಎನ್ನುವ ಹೆಸರು ನಮ್ಮ ಮನೆಯ ಹೆಣ್ಣು ಮಕ್ಕಳಿಗೆ ಸಲ್ಲುತ್ತದೆ. ಇದೇ ಕಾರಣಕ್ಕೆ ತಾಯಿ ಕಡೆ ಸಂಬಂಧ ಹೆಚ್ಚು ಬೆಳೆಯುತ್ತಾ ಹೋಗುತ್ತದೆ. ತಂದೆತಾಯಿ ತೀರಿಹೋದ ಒಂಟಿ ತಮ್ಮನನ್ನು ಅಕ್ಕ ತನ್ನ ಮನೆಯಲ್ಲೆ ಸಾಕಿಕೊಳ್ಳುತ್ತಾಳೆ. ಮಗಳನ್ನು ಕೊಟ್ಟು ಮದುವೆ ಮಾಡುತ್ತಾಳೆ. ಹೊಸ ಸಂಬಂಧ ಅಂತಾ ಬಂದಾಗ ಹುಡುಗ ಹೇಗೋ ಏನೋ "ಗಿಣಿ ಹಂಗೆ ಸಾಕಿ ಗಿಡುಗನ ಕೈಗೆ ಕೊಟ್ಟ ಹಾಗೆ" ಆಗಬಾರದು ಎಂದು ತನ್ನ ಮಗಳನ್ನು ಬಾಲ್ಯದಿಂದ ಕಂಡ ಅವಳೊಂದಿಗೆ ಆಡಿ ಬೆಳೆದ ತಮ್ಮ ಅಳಿಯನಾಗುತ್ತಾನೆ. ಅಳಿಯನೂ ಸಹಾ ಮಗಳನ್ನು ಚೆನ್ನಾಗಿ ನೋಡಿಕೊಳ್ಳುತ್ತಾನೆ. ಈ ಎಲ್ಲಾ ಕರಳುಬಳ್ಳಿ ಸಂಬಂಧವನ್ನು ಸರ್ವಮಂಗಳ ಸಿನೆಮಾದಲ್ಲಿ ನೋಡಬಹುದು. ಸಿನೆಮಾದ ಆರಂಭದಿಂದಲೇ ನಟರಾಜ ಮಂಗಳ ಗಂಡ ಹೆಂಡತಿ ಎನ್ನುವ ಭಾವನೆ ನಿರ್ಮಾಣ ಮಾಡಲಾಗುತ್ತದೆ. ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿರುತ್ತಾರೆ. ಇಂಥಹ ಬಾಲ್ಯದ ಪ್ರೀತಿಯನ್ನು ಬೇರೆ ಮಾಡಿದಾಗ ಅವರಿಗೆ ಆಗುವ ನೋವು ಎಂಥಹದು. ಬೇರೆಯಾದರೂ ಸುಖವಿಲ್ಲ. ಜೀವನ ಪೂರ್ತಿ ಕಣ್ಣೀರಿನಲ್ಲಿ ಕಳೆಯುವಂತೆ ಆಗುತ್ತದೆ. ಇಂಥಹ ತಪ್ಪು ಕೆಲಸ ದೊಡ್ಡವರು ಮಾಡಬಾರದು ಎಂಬ ಸಂದೇಶ ಸಹ ಸಿನೆಮಾದಲ್ಲಿ ಇದೆ.

ಚಿತ್ರದ ಆರಂಭದಲ್ಲಿ ಹಳ್ಳಿಯ ವಾತಾವರಣ ನಿರ್ಮಾಣ ಮಾಡಲಾಗಿದೆ. ಎತ್ತಿನಗಾಡಿ, ಬಾವಿಯಲ್ಲಿ ನೀರು ಸೇದುವ ಮಹಿಳೆಯರು, ನೀರು ಹೊತ್ತುಕೊಂಡು ಹೋಗುವ ಮಂದಿ, ಒಣ ಹುಲ್ಲಿನ ಮೇದೆ, ಪಕ್ಕದಲ್ಲಿ ಹೊಲ ಗುಂಡುಕಲ್ಲು ಎಳೆಯಲು ಎತ್ತುಗಳು ಕುರಿ ಮಂದೆ, ಆಡು ಮೇಕೆ ಕಟ್ಟಿ ಹಾಕಲಾಗಿದೆ. ೧೯೩೦ ಆಸುಪಾಸಿನ ಸಮಯ. ಮಂಗಳ ಇನ್ನು ಚಿಕ್ಕವಳು, ಚೆನ್ನಾಗಿ ಮಾತನಾಡಲು ಬರುವುದಿಲ್ಲ. ನಟರಾಜನನ್ನು ನಟಾಜ, ನಟಾಜ ಎಂದು ಕೂಗುತ್ತಾಳೆ. ಸರ್ವಮಂಗಳೆ ನನ್ನ ಸರ್ವಮಂಗಳೆ ಎಂದು ಕರೆಯುತ್ತಾನೆ ನಟರಾಜ. ಇಬ್ಬರದು ಆಡುವ ವಯಸ್ಸು . ಕಾಡಿನ ನಡುವೆ ಜಿಂಕೆ ಮಂದೆ, ಪ್ರಾಣಿ ಸಂಕುಲವನ್ನು ನೋಡಿ ಮಂಗಳ "ಎಷ್ಟು ಚೆಂದಾಗದೆ, ಎಷ್ಟು ಚೆಂದಾಗಿದೆ" ಎನ್ನುವಳು. ನವಿಲು, ಹಾವು, ಮುಂಗುಸಿಯನ್ನು ನೋಡಿ

ಸಂತೋಷಪಡುತ್ತಾರೆ. ಅಲ್ಲೆ ಅವರು ಕಣ್ಣಾಮುಚ್ಚಾಲೆ ಆಡುತ್ತಾರೆ. ನಟರಾಜ ಮಂಗಳೆಯನ್ನು ಸತಾಯಿಸುತ್ತಾನೆ. ಅಲ್ಲಿಗೆ ಬಂದ ಅಜ್ಜಿ ಸೌದೆ ಪುಳ್ಳೆ ಹೊತ್ತುಕೊಂಡು ಹೊರಡಲು ಅನುವಾಗುತ್ತಾಳೆ. ಮಕ್ಕಳು ಹಾಗೆ ಆಗಬೇಕು, ನಾ ನಗಬೇಕು, ನೀ ಅಳಬೇಕು ಎಂದು ಹಳ್ಳಿ ಹಾಡು ಹಾಡುತ್ತಾ ನಲಿಯುತ್ತಿದ್ದಾರೆ. ಅಲ್ಲಿಗೆ ಬಂದ ಅಜ್ಜಿಗೆ

"ಒಂದು ಕಥೆ ಹೇಳಜ್ಜಿ, ಕಥೆ ಹೇಳಜ್ಜಿ ಎಂದು ಪೀಡಿಸುತ್ತಾರೆ"

"ಒಳ್ಳೆ ಕೇಮೆ ಆಯ್ತು, ಹೊತ್ತಾಯ್ತು ಬಿರಬಿರನೆ ಮನೆ ಸೇರ್ಕೊಳ್ಳೋಣ ಬನ್ನಿ"



ಎಂದು ಅವರಿಬ್ಬರ ತಲೆ ಮೇಲೆ ಪುಟ್ಟ ಪುಟ್ಟ ಪುಳ್ಳೆ ಹೊರೆ ಹೊರೆಸಿ ಕಾಡಿನಿಂದ ಊರ ಕಡೆ ಹೊರಡುತ್ತಾಳೆ. ಆದ್ರೆ ಮಕ್ಕಳು ಕೇಳಬೇಕಲ್ಲ ಅಜ್ಜಿಯನ್ನು ಮತ್ತಷ್ಟು ಪೀಡಿಸುತ್ತಾರೆ. ಆಗ ಅವರ ಕಾಟ ತಾಳದೆ ಅಜ್ಜಿ "ಅಮರಾವತಿ, ಅಮರಾವತಿ ಅಂತಾ ಒಂದು ಪಟ್ಟಣ.. _ .. " ಎಂದು ಅಡಗೂಲಜ್ಜಿ ಕಥೆ ಶುರು ಮಾಡುತ್ತಾಳೆ. ನಮ್ಮ ಮಕ್ಕಳು ಹೂ, ಹೂ ಅಂತ ಹೂಗುಟ್ಟುತ್ತಾರೆ. ದಾರಿ ಸಾಗ್ತು ಕಾಡುಹೋಯ್ತು, ಊರು ಬಂತು ಮತ್ತಿನ್ನೇನು? ಇನ್ನು ಅಜ್ಜಿ ಕಥೆ ಬಗ್ಗೆ ಹಲವು ಉದಾಹರಣೆ ಕೊಡಬಹುದು. ಹಳೇ ಕಾಲದಿಂದಲೂ ಜನಪದ ಕಥೆಗಳಿಗೆ ನಮ್ಮ ಕನ್ನಡ ನಾಡು ಪ್ರಸಿದ್ಧ. ವಡ್ಡಾರಾಧನೆಯಲ್ಲಿ ಹಲವು ಜನಪದ ಕಥೆಗಳಿವೆ. ಅಷ್ಟೇ ಏಕೆ ನಮ್ಮ ಹಲವು ವಿದ್ವಾಂಸರು ರಾಮಾಯಣ, ಮಹಾಭಾರತವನ್ನೇ ಜಾನಪದ ಕಾವ್ಯ ಎಂದಿದ್ದಾರೆ. ಅಲ್ಲಿ ಬರುವ ಉಪಕಥೆಗಳು ಜಾನಪದ ಶೈಲಿಯ ಕಥೆಗಳ ಹೋಲಿಕೆ ಹೊಂದಿವೆ.

ಮಹಾಭಾರತದಲ್ಲಿ ಪಾಂಡವರು ವೇಷ ಮರೆಸಿಕೊಂಡು ಬಂದ ನಗರಕ್ಕೆ ಬರುತ್ತಾನೆ. ಅಲ್ಲಿ ಒಬ್ಬ ರಾಕ್ಷಸನಿರುತ್ತಾನೆ. ದೈತ್ಯ ಆಕಾರ, ಆನೆಯಂಥಹ ಕಾಲು, ಕೋರೆ ಹಲ್ಲು, ಅನ್ನ ಆಹಾರದೊಂದಿಗೆ ಕೋಣ, ಎಮ್ಮೆ, ಹಾಗೂ ಮನುಷ್ಯರನ್ನು ಸಹಾ ತಿನ್ನುತ್ತಿದ್ದನು. ಇಂತಹ ಕಲ್ಪನೆ ಸತ್ಯಕ್ಕೆ ದೂರವಾದದ್ದು ವೈಜ್ಞಾನಿಕವಾಗಿ ರಾಕ್ಷಸ ಎಂಬ ಜಾತಿ ನಿಜ ಜೀವನದಲ್ಲಿ ಇಲ್ಲ. ಆನೆ, ಹುಲಿ, ತಿಮಿಂಗಿಲ, ಘೇಂಡಾಮೃಗ, ೪೦ ಅಡಿ ಎತ್ತರದ ಹಾವು ಎಲ್ಲವೂ ನಮ್ಮ ಮುಂದೆ ಇದೆ. ಆದರೆ ಮಾತನಾಡುವ ರಾಕ್ಷಸ ಈಗ ಏಕೆ ಇಲ್ಲ. ಇದು ಒಂದು ಕಲ್ಪನೆ



ಅಲ್ಲವೇ? ಈ ಜೀವಂತ ಕತೆಗಳಿಂದ ತಾಯಿ ತನ್ನ ಮಕ್ಕಳನ್ನು ಅವರ ಪ್ರೀತಿಯನ್ನು ಗೆಲ್ಲುತ್ತಾಳೆ. ಅಜ್ಜಿಯ, ಅಜ್ಜನ ಪ್ರೀತಿ ಮೊಮ್ಮಕ್ಕಳ ಮಧ್ಯೆ ಕತೆಗಳು ಸರಪಳಿ ಯಾಗಿ ಕೊಂಡಿಯಾಗಿ ಬೆಸೆದು ಕೊಂಡಿರುತ್ತವೆ. ಕುವೆಂಪುರವರ ಆತ್ಮ ಚರಿತ್ರೆಯಲ್ಲಿ ಬರೆದು ಕೊಂಡಿರುವಂತೆ "ಕತೆಗಾರ

ಮಂಜಣ್ಣ" ನನ್ನು ಯಾರು ಮರೆಯಲು ಸಾಧ್ಯ. ಇಂಥಹ ಕೆಲವು ಕತೆಗಳು ಮೊಮ್ಮಕ್ಕಳಾದ ಮಂಗಳೆ ನಟರಾಜವನ್ನು ಆಕರ್ಷಿಸಿದೆ. ಕತೆ ಕೇಳುತ್ತ ಬೆಳೆದ ಇಬ್ಬರೂ ಯಾವಾಗಲೂ ಒಟ್ಟಿಗೆ ಇರುವುದು ಕತೆ ಪ್ರಮುಖ ಕಾರಣವಾಗಿವೆ. ಕತೆ ಕೇಳುತ್ತ ಮಕ್ಕಳು ಅಜ್ಜಿ ಮನೆ ಸೇರುತ್ತಾರೆ. ಪಾರ್ವತಿ ಗಂಡ ವಿಷಕಂಠ ಹೆಸರು ಹೇಳುವಂತೆ ಸ್ವಲ್ಪ ವಿಷ ಕಾರುವ ಗುಣ, ಹಣದ ಮೇಲೆ ಮೋಹ.

ಮನೆ ಎಂದರೆ ಸಾಧಾರಣ ಮನೆ. ಹಗ್ಗದ ಮೇಲೆ ಹಳೆ ಬಟ್ಟೆ ಹಾಕಿದ್ದಾರೆ. ಮಂದ ದೊಡ್ಡ ಬಣೆ, ಕುಡಿಕೆ, ನೀರು ಹಾಕಿದ್ದಾರೆ. ದೊಡ್ಡ ಮರದ ಪೆಟ್ಟಿಗೆ, ಗೋಡೆಗೆ ನೇತು ಹಾಕಿದ ಮಂಕರಿ, ಅಲ್ಲೇ ಗೋಡೆ ಮೇಲೆ ಶಿವನ ಫೋಟೋ ಪಾರ್ವತಿ ಮಕ್ಕಳನ್ನು ಮಲಗಿಸಲು ಪ್ರಯತ್ನಿಸುತ್ತಾಳೆ. ನಟರಾಜನ ಪಕ್ಕದಲ್ಲಿ ಮಲಗಲು ಮಂಗಳೆಯ ಹಠ. ಅದು ವಿಷಕಂಠನಿಗೆ ಇಷ್ಟವಿಲ್ಲ. ಅವರಿಬ್ಬರನ್ನು ಜೊತೆಯಾಗಿ ಇರಲು ಬಿಡುವುದಿಲ್ಲ. ನಟರಾಜ ಅನಾಥ, ದಿಕ್ಕಿಲ್ಲ , ದೆಸೆಯಿಲ್ಲ. ಆಸ್ತಿ, ಪಾಸ್ತಿ ಏನೂ ಇಲ್ಲ. ಪರದೇಸಿ ಅವನ ಬಗ್ಗೆ ಅಸಡ್ಡೆ. ಆದರೆ ಪಾರ್ವತಿಗೆ ತನ್ನ ತಮ್ಮನ ಮೇಲೆ ಅಪಾರ ಪ್ರೀತಿ. ಮಂಗಳೆಯನ್ನು ತಮ್ಮನಿಗೆ ತಂದುಕೊಳ್ಳಬೇಕೆಂಬ ಆಸೆ ಅವಳಿಗೆ. ಅವಳು ಗರತಿ ಹೆಣ್ಣುಮಗಳು, ಚೌಕುಳಿ ಸೀರೆ, ಓಲೆ ಜುಮುಕಿ, ಕೈ ಬಳೆಗಳ ಮಧ್ಯೆ ಕಡಗ, ಮಧ್ಯೆ ಬೈತಲೆ, ದೊಡ್ಡ ಕುಂಕುಮ,



ತಲೆ ಗಂಟು, ಹೂ, ತೋಳುಬಂಧಿ, ಕಾಸಿನಸರ, ಮಹಾಲಕ್ಷ್ಮಿ ಇದ್ಹಾಗೆ ಇದ್ದಾಳೆ. ರಾತ್ರಿ ಮಕ್ಕಳಿಗೆ ನಿದ್ದೆ ಬರುವುದಿಲ್ಲ. ಅಜ್ಜಿ ಸಹಾ ಒಂದು ಪದ ಹಾಡು ಎಂದಾಗ ಪಾರ್ವತಿ ಲಾಲಿಹಾಡು ಹಾಡುತ್ತಾ ಮಕ್ಕಳನ್ನು ಮಲಗಿಸುತ್ತಾಳೆ.

ಈ ಸಮಯದಲ್ಲಿ ಒಂದು ಜನಪದ ಲಾಲಿ ಹಾಡನ್ನು ಬಳಸಲಾಗಿದೆ.

"ಲಾಲಿ ಲಾಲಿ ಕತ್ತೆಯ ಮರಿ ಚೆಂದ ತುತ್ತಿನ ನುಡಿ ಚೆಂದ"

ಇದೊಂದು ಇಂಪಾದ ಹಾಡು ತಾಯ್ತನ ಎಂದರೆ ಒಂದು ಪ್ರಕೃತಿದತ್ತ ಅನುಭವ. ಈ ಲಾಲಿಯ ಪದಗಳನ್ನು ದೂರಿ ಪದಗಳು ಸಹಾ ಎಂದು ಕರೆಯಲಾಗಿದೆ. ಒಂದು ಉದಾಹರಣೆ

"ಆಡಿ ಬಾ ನನ್ನಯ್ಯ ಅಂಗಾಲ ತೊಳೆದೇನು,
ತೆಂಗಿನಕಾಯ ತಿಳಿನೀರ ತಕ್ಕೊಂಡು
ಬಂಗಾರದ ಮಾರೀ ತೊಳೆದನು."

ಈ ರೀತಿಯ ಹಾಡುಗಳು ಎಳೆಯ ಕಂದಮ್ಮಗಳ ಬಗ್ಗೆ ಇಂಥ ರಮ್ಯ ಮನೋಹರ ಚಿತ್ರಗಳನ್ನು ಕೊಡುವ ಅಪಾರ ಸಂಖ್ಯೆಯ ತ್ರಿಪದಿಗಳು ಲಾಲಿಯ ಪದಗಳ ಗುಂಪಿನಲ್ಲಿ ಸಿಗುತ್ತವೆ. ತಾಯಿ ತನ್ನ ಮಗುವನ್ನು ತೊಡೆ ಮೇಲೆಯೇ ತೊಟ್ಟಿಲಿನಲ್ಲಿಯೋ ಜೋಳಿಯಲ್ಲಿ ಹಾಕಿ ಕೂಗಿ ನಿದ್ದೆಬರುವವರೆಗೂ ತೂಗಿ ಹಾಡಿ ಮಲಗಿಸುತ್ತಾಳೆ. ತಾಯಿಯ ಗರ್ಭದಲ್ಲಿದ್ದಾಗಲೇ ಒಳ್ಳೆಯ ಸಂಗೀತ, ಭಜನೆ, ದೇವರನಾಮ ಮುಂತಾದವುಗಳನ್ನು ಸ್ತ್ರೀಯರು ಕೇಳಬೇಕು ಎಂದು ಶ್ರೀಮಂತದಲ್ಲಿಯೇ ಹಾಡು ಹಾಡಿ ಗರ್ಭಿಣಿ ಸ್ತ್ರೀಯರ ಮನಸ್ಸಂತೋಷ ಪಡಿಸುತ್ತಾರೆ.

ಲಾಲಿ ಹಾಡುಗಳಲ್ಲಿ ಉತ್ತಮ ಕಾವ್ಯ ಗುಣವಿದೆ. ಹೆಚ್ಚಾಗಿ ಗೇಯತೆ ತುಂಬಿದೆ. ಇದನ್ನು ಮನದುಂಬಿ ಹಾಡಬಹುದು. ಹೃದಯ ತುಂಬಿ ಕೇಳಬಹುದು. ತನ್ನ ಮಗನ ಬಾಲ ಲೀಲೆಗಳನ್ನು ತಾಯಿಗೆ ಎಷ್ಟು ವರ್ಣಿಸಿದರು ಸಾಲದು. ಮಗನನ್ನು ಕೃಷ್ಣನ ವೇಷದಲ್ಲಿ ಅಲಂಕರಿಸುತ್ತಾಳೆ. ಅವನೊಂದಿಗೆ ಆಡುತ್ತಾಳೆ. ಊಟ ತಿನ್ನಿಸುವಾಗ, ಹಾಲು ಕುಡಿಸುವಾಗಲೂ ಸಹ ಹಾಡುತ್ತಾಳೆ. ಆದರೆ ಮಗುವನ್ನು ಮಲಗಿಸುವಾಗ ಅವಳು ಹಾಡುವ ಲಾಲಿಪದಗಳು ಅಪಾರವಾದ ಪ್ರೀತಿ ವಾತ್ಸಲ್ಯ, ಮಮತೆಯಿಂದ ಕೂಡಿರುತ್ತವೆ. ತನ್ನ ಪ್ರೀತಿಯನ್ನೆಲ್ಲಾ ಧಾರೆ ಎರೆದು ಸಾಹಿತ್ಯದ ಹಂಗು ತೊರೆದು ಕೇವಲ ತನ್ನ ವಾತ್ಸಲ್ಯದ ಪ್ರೇಮ ಧಾರೆಯಲ್ಲಿ ಮಗುವನ್ನು ಲಾಲಿಸಿ ಪಾಲಿಸುತ್ತಾಳೆ. ಈ ಅನುಭವದಲ್ಲಿಯೇ ತಾಯಿಯು ಬಾಯಿಯಲ್ಲಿ ತಂತಾನೆ ಸಾಹಿತ್ಯ ಹುಟ್ಟುತ್ತದೆ. ಅದಕ್ಕೆ ಅಕ್ಷರದ ಹಂಗಿಲ್ಲ. ಮಗುವಿನ ಮೇಲೆ ಅಪಾರ ಕನಸು ಕಟ್ಟುತ್ತಾಳೆ. ಮಗು ಬೆಳೆದು ಹೀಗೆ ಆಗುತ್ತಾನೆ. ಹಾಗೆ ಆಗುತ್ತಾನೆ ಅವಲ ಕನಸು ಸಮುದ್ರದಷ್ಟು ಆಳ, ಹಿಮಾಲಯದಷ್ಟು ಎತ್ತರ, ಆಕಾಶದಷ್ಟು ವಿಸ್ತಾರ.

ಇಂಥಹದೇ ಒಂದು ಗೀತೆಯನ್ನು ಪಾರ್ವತಿ ನಟರಾಜ ಮಂಗಳೆಗೆ ಹಾಡಿ ಮಲಗಿಸುತ್ತಾಳೆ. (ಈ ಗೀತೆಯನ್ನು ಈಗಿನ ಒಂದು ಹಾಸಿಗೆಯ ಜಾಹಿರಾತಿನಲ್ಲಿ ಕಾಣಬಹುದು). ಸಿನೆಮಾದಲ್ಲಿ ಸಂಪೂರ್ಣ ಗ್ರಾಮೀಣ ಸೊಗಡಿನ ಮೈಸೂರು ಕನ್ನಡ ಬಳಸಲಾಗಿದೆ. ವೈನಾಗಿ, ಚೋಜುಗ (ಆಶ್ಚರ್ಯ) ಹಡೆದವ್ವ (ತಾಯಿ) ಮುಂತಾದವು. ವಿಷಕಂಠ ಹೆಂಡತಿಯನ್ನು ಹುಣಸೂರು ಸಂತೆಗೆ ಕರೆದಾಗೆ ಗರತಿ ಪಾರ್ವತಿ ಮನೆ ಕೆಲಸ ಬೆಟ್ಟದಷ್ಟಿದೆ. ಪಾತ್ರೆಗಳನ್ನು ಕಲಾಯಿ ಮಾಡಿಸಬೇಕು, ಮೇಯೋ ಎತ್ತುಗಳನ್ನು ಹೊಲಕ್ಕೆ ಅಟ್ಟಿಕೊಂಡು ಹೋಗಬೇಕು. ದನ ಕಟ್ಟಬೇಕು. ಎಂದು ಉದ್ದದ ಸಾಲು ಹೇಳುತ್ತಾಳೆ. ಅದಕ್ಕೆ ಗಂಡ ತಾನೊಬ್ಬನೆ ಸಂತೆಗೆ ಹೋಗುತ್ತಾನೆ. ಅವನೋ ಬಾರಿ ಜಿಪುಣ. ಮನೆ ಬೆಣ್ಣೆ ಸವಿಯಬಾರದು. ಮನೆ ಮಂದಿ ಉಣಬಾರದು ಎನ್ನುವವನು. ಅದನ್ನು ಮೈಸೂರು ಸಂತೆಯಲ್ಲಿ ಮಾರಿ ಗಂಟು ಮಾಡಿಕೊಳ್ಳುವ ದುರಾಸೆ ಅವನದು. ಅವಳ ಮನೆ ಸಂಪೂರ್ಣ ಮೈಸೂರಿನ ಚಾಮುಂಡೇಶ್ವರಿ ಸ್ಟುಡಿಯೋ ಸೆಟ್ ಆದರೂ ಹಳ್ಳಿ ಮನೆ ಮುಂದೆ ರಂಗೋಲಿ, ಮೊಸರು, ಕುಡಿಕೆ, ಮುಂತಾದ ಜನಪದ ಪರಿಕರಗಳನ್ನು ಬಳಸಲಾಗಿದೆ.

ಮೊದಲಿನಿಂದಲೂ ಹಳ್ಳಿಯಲ್ಲಿ ಸಾಬರು ವಾಸವಾಗಿದ್ದು ಅವರು ಹಿಂದೂಗಳ ಜೊತೆ ಬಹಳ ಅನ್ಯೋನ್ಯರಾಗಿರುತ್ತಾರೆ. ಅವರು ಮೊಹರಂ ಗೀತೆಗಳು ಅಪ್ಪಟ ದೇಸಿ ಜಾನಪದ ಗೀತೆಗಳಾಗಿವೆ. ಇಂಥಹವೇ ಒಬ್ಬರು ಮುಸಲ್ಮಾನ ಬಂದು ಆಗಾಗ್ಗೆ ಪಟ್ಟಣಕ್ಕೆ ಹೋಗಿ ಕೆಲ ಸಾಮಾನುಗಳನ್ನು ತಂದು ಹಳ್ಳಿಯಲ್ಲಿ ಮಾರುತ್ತಾನೆ. ಚುಂಚನಕಟ್ಟೆ ಜಾತ್ರೆಯಿಂದ ಸರ್ವಿಗೆ ಆಟದ ಸಾಮಾನು ತಂದು ಕೊಡುತ್ತಾನೆ. ನಿನ್ನ ಗಂಡ ಎಲ್ಲಿ ಎಂದು ರೇಗಿಸುತ್ತಾನೆ. ಇವರು ಮಾರುವ ಬೊಂಬಾಯಿ ಮಿಠಾಯಿ ತಿನ್ನದ ಹುಡುಗರು ಹಳ್ಳಿಯಲ್ಲಿ ಯಾರೂ ಇಲ್ಲ. ವಾಚು, ಗೊಂಬೆ, ಮಾಡಿ ಕೈಗೆ ಕಟ್ಟುತ್ತಿದ್ದರು. ಆದರೆ ಅವೆಲ್ಲ ಈಗೆಲ್ಲಿ? ತೆಂಗಿನ ಸಸಿ ನೆಟ್ಟಿದ್ದಾರೆ. ಅಲ್ಲಿಯೇ ಹುಲ್ಲು ತುಂಬಿದ ಗಾಡಿ ನಿಲ್ಲಿಸಲಾಗಿದ್ದೆ. ನಟರಾಜನನ್ನು ಮೈಸೂರಿಗೆ ಹೆಚ್ಚಿನ ಓದಿಗೆ ಕಳುಹಿಸಬೇಕೆಂದು ಮನೆಯಲ್ಲಿ ಚರ್ಚೆ ನಡೆದರೂ ವಿಷಕಂಠ ಹಣ ಖರ್ಚಾಗುತ್ತದೆ ಎಂದು ಹಿಂದೇಟು ಹಾಕುತ್ತಾನೆ. ಆದರೂ ಕೊನೆಗೆ ಅಜ್ಜಿಯ ಹಠದಿಂದ ಒಪ್ಪುತ್ತಾನೆ. ಗಂಡು ಮಕ್ಕಳಿಗೆ ಓದು ಮುಖ್ಯ ಎಂದು ನಟರಾಜನನ್ನು ಮೈಸೂರಿಗೆ ಕಳುಹಿಸಲು ಒಪ್ಪುತ್ತಾನೆ. ಆ ಕಾಲಕ್ಕೆ ಹೆಣ್ಣು ಮಕ್ಕಳಿಗೆ ವಿದ್ಯೆ ಏನು ಬೇಕಿರಲಿಲ್ಲ. ಶಾಲೆಗೆ ದೂರದ

ಊರಿಗೆ ಕಳುಹಿಸುವ ಮಾತು ಇನ್ನೆಲ್ಲಿ? ಮಂಗಳೆ ಮನೆಯಲ್ಲೆ ಉಳಿಯುತ್ತಾಳೆ. ಹೆಣ್ಣುಮಕ್ಕಳ ಪ್ರಪಂಚ ಕೇವಲ ಮನೆಯೊಳಗೆ ಅದರಲ್ಲೂ ಅಡಿಗೆ ಮನೆಯಲ್ಲಿ. ಮಕ್ಕಳ ಲಾಲನೆ, ಪಾಲನೆ, ಊಟ, ಉಪಚಾರ, ಬಸಿರು, ಬಾಣಂತನದಲ್ಲಿ ಇವರ ಜೀವನ ಆಗಿಹೋಗುತ್ತದೆ. ಬಾಲ್ಯ ತಾಯಿಯ ಮನೆಯಲ್ಲಿ, ಯೌವ್ವನ ಗಂಡನ ಮನೆಯಲ್ಲಿ ಕಳೆಯುವ ಹೆಣ್ಣು ತನ್ನ ಸಣ್ಣ ಪ್ರಪಂಚದಲ್ಲಿಯೇ ಮುಳುಗಿ ಹೋಗುತ್ತಾಳೆ. ಹಾಸಿಗೆ ಬುಟ್ಟಿ ಹಿಡಿದು ನಟರಾಜ ಮೈಸೂರಿಗೆ ಹೊರಡುತ್ತಾನೆ. ಎತ್ತಿನಗಾಡಿಯಲ್ಲಿ ಕುಳಿತು ಹೊರಡುವ ತಮ್ಮನನ್ನು ಅಕ್ಕ ದುಃಖದಲ್ಲಿಯೇ ಕಳುಹಿಸಿಕೊಡುತ್ತಾಳೆ. ಹಳ್ಳಿಯ ಹೆಂಗಸರು ಸಹಾ ಬೀಳ್ಕೊಡುತ್ತಾರೆ. ಮಂಗಳೆ ಮನೆಯಲ್ಲಿ ಬೆಳೆದು ದೊಡ್ಡವಳಾದಳು. ನಟರಾಜ ಮೈಸೂರಿನಲ್ಲಿ ಓದುತ್ತಾ ದೊಡ್ಡವನಾದ. ಕುಂಬಾರ ತನ್ನ ಮಣ್ಣಿನ ಮಡಿಕೆಯ ಚಕ್ರ ತಿರುಗಿಸುತ್ತಿದ್ದಾನೆ. ಚಕ್ರ ತಿರುಗುತ್ತಾ ತಿರುಗುತ್ತಾ ಸುಂದರವಾದ ಮಡಿಕೆ ರೂಪುಗೊಂಡಿದೆ. ಮಡಿಕೆ ಹದವಾಗಿ ಬೆಂದು ಗಟ್ಟಿಯಾಗಿ ಉಪಯೋಗಿಸಲು ಸಿದ್ಧವಾಗಿದೆ.

ನಟರಾಜ, ಮಂಗಳೆ ಬೆಳೆದು ದೊಡ್ಡವರಾದರು ಎನ್ನುವುದಕ್ಕೆ ನಿರ್ದೇಶಕರು ಸಾಂಕೇತಿಕವಾಗಿ ಈ ಉದಾಹರಣೆ ನೀಡಿದ್ದಾರೆ. ಮರದ ಕೊಂಬೆ ಮೇಲಿಂದ ಸರ್ವಮಂಗಳೆ ಧುಮುಕಿ ಇಳಿಯುತ್ತಾಳೆ. ಅವಳೂ ಸಹಾ ಥೇಟ್ ಅವರ ಅಮ್ಮನಂತೆ ಅಲಂಕರಿಸಿಕೊಂಡಿದ್ದಾಳೆ. ಅದೇ ಉದ್ದ ಜಡೆ, ತಲೆ ತುಂಬಾ ಹೂ, ದೊಡ್ಡ ಬೊಟ್ಟು ಮೂಗುತಿ, ಓಲೆ ಜುಮುಕಿ, ಅಪ್ಪಟ ಸುಂದರಿ, ಅಜ್ಜಿಯ ಹಿಂದೆ ಓಡಿ ಬರುತ್ತಿದ್ದ ಪುಟಾಣಿ ಗೌರಿ ಈಗ ಹದಿಹರೆಯದ ಗೌರಮ್ಮನಾಗಿದ್ದಾಳೆ. ಅಲ್ಲಿ ಮಿನುಗುತಾರೆ ಕಲ್ಪನಾ ಅವರ ರಂಗ ಪ್ರವೇಶವಾಗುತ್ತದೆ. ಕನ್ನಡ ಚಿತ್ರರಂಗ ಹೆಮ್ಮೆ ಪಡಬಹುದಾದ ಅಭಿನಯಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡ ಅಭಿನೇತ್ರಿ. ಇಡೀ ಚಿತ್ರದ ನಾಯಕ ನಾಯಕಿ, ಚಿತ್ರಕಥೆ ಸಂಪೂರ್ಣ ಇವರ ಮೇಲೆಯೇ ಕೇಂದ್ರೀಕೃತವಾಗಿದೆ. ನಾಯಕನಟ ಬೇಗ ತೀರಿಹೋದರೂ ಕಥೆ ಮುಂದುವರೆದು ಸರ್ವಮಂಗಳೆಯ ನಿಧನದ ನಂತರ ಚಿತ್ರ ಪೂರ್ಣಗೊಳ್ಳುತ್ತದೆ. ಹೀಗಾಗಿ ಈ ಸಿನೆಮಾ ನಾಯಕ ಪ್ರಧಾನವಾಗಿರದೆ ನಾಯಕಿ ಪ್ರಧಾನವಾಗಿದೆ.

ಆ ಕಾಲಕ್ಕೆ ರಾಜ್‌ಕುಮಾರ್‌ರವರು ಉತ್ತಮ ನಾಯಕರಾಗಿ ರೂಪುಗೊಂಡಿದ್ದರು. ಅವರ ಕೆಲವು ಚಿತ್ರಗಳು ಪ್ರದರ್ಶನಗೊಂಡು ಜನಪ್ರಿಯತೆಯನ್ನು ಪಡೆದಿದ್ದವು. ಆದರೂ ಕಾದಂಬರಿಯ ಪ್ರಮುಖ ಪಾತ್ರ ಮಂಗಳೆ. ಇದು ಸ್ತ್ರೀ ಪ್ರಧಾನ ಸಿನೆಮಾ. ಕಾದಂಬರಿಯಿಂದ ಸಿನೆಮಾಕ್ಕೆ ಬರುವ ಹಂತದಲ್ಲಿ ಬಹಳಷ್ಟು ಮಾರ್ಪಾಡು ಮಾಡಿಕೊಂಡು ಸಿನೆಮಾ ಒಂದು ಸಣ್ಣ ಚೌಕಟ್ಟಿನಲ್ಲಿ ಬಂಧಿತವಾಗಿದೆ. ಇಲ್ಲಿ ಅಪಾರ ಕಲ್ಪನೆಗೆ ಜಾಗವಿಲ್ಲ. ಸೀಮಿತ ಚೌಕಟ್ಟಿನ ಒಳಗೆ ಚಿತ್ರಕಥೆ ಮೂಡಿ ಬರಬೇಕು ಅದೂ ಅಲ್ಲದೆ ಹಾಸ್ಯದ, ಮನೋರಂಜನೆಯ ಕಥಾ ಹಂದರ ಇದರಲ್ಲಿ ಇಲ್ಲ. ಗಂಭೀರ ಕುಟುಂಬದ ಹೆಣ್ಣು ಮಗಳ ಕಣ್ಣೀರಿನ ಕಥೆಯಿದು. ಇಲ್ಲಿ ಸರ್ವ ಮಂಗಳೆಯು ಪಾತ್ರದ ಮೂಲಕ ನಮ್ಮ ಹಳ್ಳಿಯ ಹೆಣ್ಣು ಮಗಳನ್ನು ನೋಡಬಹುದಾಗಿದೆ. ಹಳ್ಳಿಯಲ್ಲಿ ಹುಟ್ಟಿ ಬೆಳೆದು ನೂರಾರು ಕನಸು ಕಟ್ಟಿಕೊಂಡು ಅದೊಂದು ನೆರವೇರದೆ ಕುರೂಪಿ ಗಂಡನನ್ನು ಕಟ್ಟಿಕೊಂಡು ಆತನೊಂದಿಗೂ ಸುಖವಾಗಿ ಬಾಳದೆ, ಗರ್ಭಿಣಿಯಾದರೂ ತಾಯಿಯಾಗದೆ, ಗಂಡನಿಗೆ ಮತ್ತೊಂದು ಮದುವೆ ಮಾಡಿ ಗಂಡನ ಸಂಸಾರವನ್ನು ಸರಿದೂಗಿಸುವ ಹೆಣ್ಣುಮಗಳು ತ್ಯಾಗದ ಪ್ರತಿರೂಪವಾಗುತ್ತಾಳೆ. ತನ್ನ ಸವತಿ ತನ್ನ ಸ್ಥಾನ ಕಸಿದುಕೊಂಡರೂ, ತನ್ನ ಒಡವೆ, ಸೀರೆ ಎಲ್ಲವನ್ನು ಕಿತ್ತುಕೊಂಡರೂ ಕೊನೆಗೆ ಸವತಿ ತನ್ನ ಮೇಲೆ ದಬ್ಬಾಳಿಕೆ

ನಡೆಸಿ ಮನಸೋ ಇಚ್ಛೆ ಥಳಿಸಿದರೂ ಅದನ್ನು ಸಹಿಸಿಕೊಳ್ಳುತ್ತಾ ಕೊನೆಗಾಲದಲ್ಲಿ ನಟರಾಜನ ಸೇವೆಗೆ ನಿಲ್ಲುತ್ತಾಳೆ. ನಟರಾಜನ ನಿಧನದ ನಂತಗರ ಅವನ ಮಗನನ್ನು ತನ್ನ ಮಗನೆಂದು ಲಾಲಿಸಿ ಪಾಲಿಸುತ್ತಾಳೆ. ಕಾರ್ಮೋಡ ಕವಿದು ಬೆಳೆ ಹಾಳಾಗುವುದನ್ನು ತಪ್ಪಿಸಿ ೧೦ ಜನ ಮಾಡುವ ಕೆಲಸವನ್ನು ಒಬ್ಬಳೇ ಮಾಡಿ ಬೆಳೆ ಉಳಿಸಿ ತನ್ನ ಗಂಡನ ಮನೆ ಹಾಳಾಗುವುದನ್ನು ತಪ್ಪಿಸುತ್ತಾಳೆ. ಕೊನೆಗೆ ತನ್ನ ಮಾವ ನಟರಾಜನನ್ನು ಸೇರುತ್ತಾಳೆ. ಇದು ಚಿತ್ರಕಥೆ

ಚಿತ್ರಕಥೆಯನ್ನು ಒಂದೊಂದು ಸನ್ನಿವೇಶದಲ್ಲಿ ಮುಂದುವರೆಸುತ್ತ ಬಂದ ಹಾಗೆ ಒಂದೊಂದು ದೃಶ್ಯದಲ್ಲಿಯೂ ಚಿತ್ರಕಥೆ ಹರಡಿಕೊಂಡು ಬಂದಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ದೌರ್ಜನ್ಯ ಭಾರತ ದೇಶದಲ್ಲೇ ಹರಡಿಕೊಂಡಿದ್ದೆ. ಅದನ್ನು ಹಳ್ಳಿ ಪಟ್ಟಣ ಒಂದನ್ನು ಬಿಡದೆ ತನ್ನ ಕಬಂಧ ಬಾಹುಗಳಿಂದ ಎಲ್ಲಾ ಭಾರತೀಯರನ್ನು ಹಿಂಸಿಸುತ್ತಿತ್ತು. ಪತ್ರಿಕೆ ಓದುವ ನಟರಾಜ ತನ್ನ ಓದು ಮುಗಿಸಿ ತನ್ನ ಊರಿನ ಕಡೆ ಹೊರಡುತ್ತಾರೆ. ಅಲ್ಲಿ ಸ್ವಾತಂತ್ರ್ಯದ ಕಿಡಿ ಆರಂಭವಾದ ಕುರುಹನ್ನು ನಿರ್ದೇಶಕರು ನೀಡುತ್ತಾರೆ. ೧೯೪೭-೧೯೬೭ರ ಸ್ವಾತಂತ್ರ್ಯ ಬಂದ ಸುಮಾರು ೨೦ ವರ್ಷಗಳ ನಂತರ ಈ ಸಿನೆಮಾ ಬಿಡುಗಡೆಯಾಗಿದೆ. ೨೦ ವರ್ಷಗಳು ಗತಿಸಿದ ನಂತರವೂ ದೇಶದ ಪರಿಸ್ಥಿತಿಯಲ್ಲಿ ಇನ್ನು ಹೆಚ್ಚಿನ ಬದಲಾವಣೆ ಕಂಡುಬಂದಿರಲಿಲ್ಲ. ಸಿನೆಮಾ ಆಗ ತಾನೆ ತನ್ನ ಅಸ್ತಿತ್ವ ಕಂಡುಕೊಳ್ಳುತ್ತಿತ್ತು. ಹಲವು ತೊಂದರೆಗಳ ನಡುವೆ ಸಿನೆಮಾ ಆಗುತ್ತಿತ್ತು. ಹೊರಾಂಗಣ ಚಿತ್ರೀಕರಣ ಸ್ವಲ್ಪ ಕಷ್ಟವೇ ಆಗಿತ್ತು. ಆದರೂ ಮೈಸೂರಿನ ಒಡೆಯರ ವಿಗ್ರಹದ ಮುಂದೆ ಈ ನಾಯಕನ ಪರಿಚಯ ದೃಶ್ಯ ಚಿತ್ರೀಕರಿಸಲಾಗಿದೆ.



ಮುಂದಿನ ಸನ್ನಿವೇಶದಲ್ಲಿ ಹಳ್ಳಿಯ ಹೆಂಗಸರು ಅಳುಗುಳಿ ಮಣೆ ಆಟ ಆಡುತ್ತಿದ್ದಾರೆ. ಹುಣಸೇ ಬೀಜವನ್ನು ಒಮ್ಮೆಗೆ ತೆಗೆದುಕೊಂಡು ಒಂದೊಂದು ಬೀಜವನ್ನು ಮನೆಗೆ ಹಾಕುತ್ತಾ ಗೆಲ್ಲುವ ಸೋಲುವ ಆಟ. ನಾಗಜ್ಜಿ ಸಹಾ ಅಲ್ಲೆ ಇದ್ದಾಳೆ. ಊರಿನಿಂದ ಬರುವಾಗ ನಮ್ಮ ಹಿರೀಕರು ಯಾರೂ ಬರಿಗೈಯಲ್ಲಿ ಬರುವುದಿಲ್ಲ. ಹೂವು, ಹಣ್ಣು, ಕೊನೆಪಕ್ಷ ಮಕ್ಕಳಿಗೆ ಒಂದಿಷ್ಟು ಸಿಹಿ, ಹಿರೀಕರಿಗೆ ಬಾಯಾಡಿಸಲು ಎಲೆ ಅಡಿಕೆಯಾದ್ರೂ ತಂದೇ ತರುತ್ತಾರೆ. ಅದೇ ಹಿರೀಕರ ನಂಬಿಕೆ ಹುಸಿ ಮಾಡದ ನಟರಾಜ ಮನೆಗೆ ತರಕಾರಿ, ಅಜ್ಜಿಗೆ ಎಲೆ ಅಡಿಕೆ ತರುತ್ತಾನೆ. ಹಳ್ಳಿ ಜನ ಇಡೀ ಮೈಸೂರನ್ನೇ ತಂದು ಬಿಟ್ಟಿದ್ದೀಯಲ್ಲೋ ಎಂದು ಗೇಲಿ ಮಾಡುತ್ತಾರೆ. ಮಂಗಳಗೆ ಮೈಸೂರು ಮಲ್ಲಿಗೆ ತಂದಿದ್ದಾನೆ. ಅಜ್ಜಿ ಹೋಗು "ನಿನ್ನ ಹೆಂಡತಿಗೆ ನೀನೆ ಕೊಡು" ಎಂದು ರೇಗಿಸುತ್ತಾಳೆ. ಕಡ್ಲೆಪುರಿಯಲ್ಲಿ ನಟರಾಜ ಎಂದು ಬರೆದ ಮಂಗಳೆ ನಟರಾಜನ ನೆನಪಿನಲ್ಲೇ ಇರುತ್ತಾಳೆ. ಅದೊಂದು ಪ್ರೇಮ ಸಂಗಮ. ಹದಿಹರೆಯದ ಹುಡುಗ ಹುಡುಗಿಯರ ಪ್ರೇಮ ಸಲ್ಲಾಪ. ಇಂದಿನ ಚಿತ್ರಗಳಂತೆ ಆಲಿಂಗನ ಚುಂಬನ, ಅತಿರೇಕದ ದೃಶ್ಯಗಳಿಲ್ಲದ ಶುದ್ಧ ಪ್ರೀತಿಯ ಪ್ರದರ್ಶನ. ಪ್ರಿಯಕರ ಊರಿಂದ ಬರ್ತಾನೆ, ಪ್ರೇಯಸಿಗೆ ಏನೋ ತರುತ್ತಾನೆ ಎಂದು ಪ್ರತಿಯೊಬ್ಬ ಪ್ರೇಯಸಿಯೂ ಕಾಯುವುದುಂಟು. ನಟರಾಜ

ತಂದ ಹೂಕೊಡದೆ ಸತಾಯಿಸುತ್ತಾನೆ. ನಂತರ ಕೊಡುತ್ತಾನೆ. ಮಲ್ಲಿಗೆ ಪಡೆದ ಮಂಗಳೆ ನಟರಾಜನನ್ನು ಆಲಂಗಿಸಿ ಆರಾಧಿಸುತ್ತಾಳೆ. ಆ ಕಾಲದ ಪ್ರೇಮದೃಶ್ಯಗಳು ಸಹಾ ಕಣ್ಣಿಗೆ ಮುದ, ಮನಸ್ಸಿಗೆ ಹಿತ ನೀಡುವಂಥದ್ದಾಗಿದ್ದವು. ಅಲ್ಲಿ ಅತಿರೇಕ, ಅಶ್ಲೀಲವಿರುತ್ತಿರಲಿಲ್ಲ.

ಮಾವ ನಂಜುಂಡಸ್ವಾಮಿ ಅಜ್ಜಿಯನ್ನು ಮಂಗಳೆಯನ್ನು ಒಮ್ಮೆ ಮೈಸೂರಿಗೆ ಕರೆದುಕೊಂಡು ದೇವಿದರ್ಶನ ಮಾಡಿ ಹರಕೆ ತೀರಿಸಲು ನೆನಪಿಸಿದ್ದಾರೆ ಎಂದು ನಟರಾಜ ನಾಗಜ್ಜಿಗೆ ಹೇಳುತ್ತಾನೆ. ನಾಗಜ್ಜಿಗೂ ಚಾಮುಂಡಿ ಬೆಟ್ಟಕ್ಕೆ ಹರಕೆ ತೀರಿಸಬೇಕೆಂಬ ಆಸೆ ಬಹಳ ದಿನಗಳಿಂದ ಇರುತ್ತದೆ. ಹರಕೆಗೆ ಹನ್ನೆರೆಡು ವರ್ಷ ಎಂದ ಹಾಗೆ ಹರಕೆಯನ್ನು ಹನ್ನೆರೆಡು ವರ್ಷಗಳ ಒಳಗೆ ತೀರಿಸಬೇಕು. ಇಲ್ಲದಿದ್ದರೆ ದೈವ ಮುನಿದು ಶಾಪ ಕೊಡುತ್ತಾನೆ. ಮನೆಯಲ್ಲಿ ಕೆಡಕು ಉಂಟಾಗುತ್ತದೆ. ರಾಜನಿಗೂ ಹೆದರದ ರೈತ ದೈವಕ್ಕೆ ಹೆದರುತ್ತಾನೆ. ಸಂತರು, ದಾಸರು, ಭಕ್ತರು ರಾಜನ ಆಜ್ಞೆಯನ್ನು ಮೀರುತ್ತಾರೆ ಆದರೆ ದೈವದ ಆಜ್ಞೆಯನ್ನು ಯಾರೂ ಮೀರುವಂತಿಲ್ಲ. ದೇವರ ಬಗ್ಗೆ ಅಪಾರವಾದ ನಂಬಿಕೆ, ಭಯ, ಭಕ್ತಿ, ಶ್ರದ್ಧೆ.

ಬಹುಷಃ ಈ ಭಯ ಭಕ್ತಿಗಳೇ ಜನರನ್ನು ತಪ್ಪು ಮಾಡದೇ ಇರುವುದಕ್ಕೆ ಪ್ರೇರೇಪಿಸುತ್ತದೆ. ದೈವ ಎಂಬುದು ಒಂದು ಇಲ್ಲದಿದ್ದರೆ ಎಲ್ಲರೂ ಪಾಪದ ದಾರಿಯಲ್ಲಿಯೇ ನಡೆಯುತ್ತಿದ್ದರು. ಪ್ರತಿಯೊಬ್ಬರಿಗೂ ಪಾಪಪ್ರಜ್ಞೆ ಸದಾ ಕಾಡುತ್ತಿರುತ್ತದೆ. ಬೆಟ್ಟವನ್ನು ಬರಿಗಾಲಿನಲ್ಲಿ ಹತ್ತುವ ಹಲವು ಭಕ್ತರಿದ್ದಾರೆ. ದೇಹದಂಡನೆ ಎಂಥದ್ದೇ ಆಗಿರಲಿ ದೇವರಿಗಾಗಿ ಎಲ್ಲಕ್ಕೂ ಸಿದ್ಧ. ಎಲ್ಲರೂ ಬೆಟ್ಟ ಹತ್ತುತ್ತಾರೆ. ನಾಗಜ್ಜಿ ನಂಜುಂಡಸ್ವಾಮಿ ಮಾವ ಸ್ವಲ್ಪ ನಿಧಾನ ಆದರೆ ನಟರಾಜ ಮಂಗಳೆ ಚಕಚಕ ಎಂದು ಬೆಟ್ಟ ಹತ್ತಿ ಮೇಲೆ ಹೋಗುತ್ತಾರೆ. ಜಡೆ ಬಿಲ್ಲೆ ಹಾಕಿ ಬಿಗಿದ ಉದ್ದನೆ ಜಡೆ, ಮೂಗುತಿ ಸುಂದರಿ ಕಲ್ಪನಾ ಹದಿಹರೆಯದ ರಾಜಣ್ಣ ನಿಜವಾಗಲೂ ಪ್ರೇಮಿಗಳಂತೆ ಕಂಗೊಳಿಸುತ್ತಾರೆ. ಮೈಸೂರಿನ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿ ದಾಂಪತ್ಯ ಗೀತೆಗೆಂದೇ ಹೆಸರಾದ ಮಲ್ಲಿಗೆ ಖ್ಯಾತಿಯ ಮೈಸೂರು ಮಲ್ಲಿಗೆಯ ಕೆ.ಎಸ್. ನರಸಿಂಹ ಸ್ವಾಮಿಯವರ ಒಂದು ಯುಗಳ ಗೀತೆಯನ್ನು ಬಳಸಲಾಗಿದೆ.

"ನನ್ನವಳು ನನ್ನಾಡನಾಳುವಳು, ಬೆಡಗುಗೆನ್ನೆ ಚೆಲುವೆ
ಕಪ್ಪು ಕರುಳಿನ ಬೆನ್ನ ಮೇಲೆ ಹರಡಿದರೆ, ಇಳಿದಾಗ ಇರುಳ ಮಾಲೆ,
ತಾರೆಗಳನ್ನು ದಾಟುವೆವು ನಾವು"

(ಮೈಸೂರು ಚಾಮುಂಡಿ ಬೆಟ್ಟ, ದೊಡ್ಡ ಬಸವಣ್ಣನ ದೇವಾಲಯದಲ್ಲಿ ಚಿತ್ರಣ) ಅಂದು ನಟರಾಜ ಮಂಗಳೆಗೆ ಸ್ವರ್ಗವೇ ಸಿಕ್ಕಿಯಾಗಿದೆ. ಆದರೆ ಈ ಸಂತೋಷ ಹೆಚ್ಚು ದಿನ ಉಳಿಯುವುದಿಲ್ಲ. ಹಳ್ಳಿಯಲ್ಲಿ ನಾಗಜ್ಜಿ ತೀರಿಕೊಳ್ಳುತ್ತಾಳೆ. ಕೊನೆ ಉಸಿರಿರುವರೆಗೂ ಮಂಗಳೆ ಮದುವೆ ನಟರಾಜನ ಜೊತೆ ಬೇಗ ಆಗಲಿ ಎಂದು ತನ್ನ ಕೊನೆ ಉಸಿರು ಎಳೆಯುತ್ತಾಳೆ. ಅಜ್ಜಿಯ ಕೊನೆ ಆಸೆ ಇವರಿಬ್ಬರ ಮದುವೆ ನೋಡುವುದು ಅದು ವಿಧಿಯಾಟದಲ್ಲಿ ಸಿಲುಕಿ ನೆರವೇರುವುದೇ ಇಲ್ಲ.

ನಿರ್ದೇಶಕರು ಪಾತ್ರಗಳ ಹೆಸರನ್ನು ಬಹಳ ಸೂಕ್ತವಾಗಿ ಇಟ್ಟಿದ್ದಾರೆ. ಹಳೆ ಮೈಸೂರಿನ ಅಕ್ಕಪಕ್ಕದ ಹಳ್ಳಿಗಳಲ್ಲಿ ಇಂಥಹ ಹೆಸರಿನ ವ್ಯಕ್ತಿಗಳು ಸಾಧಾರಣ. ನಾಗಜ್ಜಿ ವಿಷಕಂಠ, ಮಂಗಳೆ, ಸುಬ್ಬರಾಯ, ನರಸಕ್ಕ,

ದುರ್ಗಿ, ಗಿರಿಜಾ.. .. ಎಲ್ಲಾ ಸ್ಥಳೀಯ ಹೆಸರುಗಳೇ. ಇನ್ನು ಊರಿನ ಹೆಸರು ಬಂದಾಗ ಕೊತ್ತೆಗಾಲ, ಹುಣಸೂರು, ಮೈಸೂರು.. .. ಚದುರಂಗ ಅವರ ಶುದ್ಧ ದೇಸಿ ಶೈಲಿಯನ್ನು ಚಿತ್ರ ನಿರ್ಮಾಣ ಮಾಡಿ, ನೋಡುಗರಿಗೆ ಇಲ್ಲೇ ಪಕ್ಕದ ಹಳ್ಳಿಯಲ್ಲಿ ನಡೆಯುತ್ತಿರುವ ಒಂದು ಮನೆಯ ಕಥೆ ಎಂದು ಎನಿಸುತ್ತದೆ. ನಾಗಜ್ಜಿ ಕೊನೆ ಉಸಿರು ಎಳೆದ ಸುದ್ದಿ ಪಾರ್ವತಿಗೆ ಭರಸಿಡಿಲು ಬಡಿದಂತೆ ಆಗುತ್ತದೆ. ಅವಳು ಅತ್ತೆಯಾಗಿರದೆ ತಾಯಿಯಾಗಿದ್ದಳು. ಕೆಲಸ ಮಾಡುವಾಗ ಅಯ್ಯಾ ನಿನಗೆ ದಣಿವಾಗುತ್ತದೆ ನಾನೇ ಮಾಡುತ್ತೇನೆ ತತ್ತ ಇತ್ತ ಎಂದು ಕೈಯಿಂದ ಕೆಲಸ ಕಿತ್ತುಕೊಂಡು ಮಾಡುತ್ತಿದ್ದಳು. ಬೆಣ್ಣೆ ಕಡಿಯುವಾಗ ಕಡೆಗೋಲನ್ನು ಬಲವಂತವಾಗಿ ಇಸಿದುಕೊಂಡು ತಾನೇ ಬೆಣ್ಣೆ ಕಡೆಯುತ್ತಿದ್ದಳು. ಮಕ್ಕಳನ್ನು ಪ್ರೀತಿಸುವ ಅಜ್ಜಿಯಾಗಿದ್ದಳು. ಸರ್ವ ನಟರಾಜ ಅಜ್ಜಿಯ ನೆನಪಲ್ಲಿ ಕಣ್ಣೀರು ಹಾಕುತ್ತಾರೆ.

ಅಜ್ಜಿಯ ಕಥೆ "ಭೋಗಾವತಿ ಭೋಗಾವತಿ ಎನ್ನೋ ಪಟ್ಟ ಅಲ್ಲಿ ಭೋಗಶೇಖರ ಅನ್ನೋ ದೊರೆ.. .." ನೆನಪಾಗುತ್ತದೆ. ಅಜ್ಜಿಯ ಬಾಯಿಂದ ಬರೋದೆಲ್ಲಾ ಬರೀ ಜಾನಪದ ಕಥೆಗಳೇ. ಮಕ್ಕಳು ಹೂಗುಟ್ಟದೆ ಹೋದರೆ ಏನೋ ನೀನು ಹೂಗುಟ್ಟುತ್ತಲೇ ಇಲ್ಲ ಹೋಗಿ ನಾನು ಕಥೆ ಹೇಳುವುದೇ ಇಲ್ಲ ಎಂದು ಕಥೆ ಅರ್ಧಕ್ಕೆ ನಿಲ್ಲಿಸುತ್ತಾಳೆ. ಆಗ ಮಕ್ಕಳು ಅಯ್ಯೋ ಇಲ್ಲ ಅಜ್ಜಿ ಹೂ ಎನ್ನುತ್ತೇವೆ. ಹೂಂ, ಹೂಂ, ಆಮೇಲೆ ಆಮೇಲೆ ಏನಾಯ್ತು ಹೇಳಜ್ಜಿ ಎಂದು ಅಜ್ಜಿಯನ್ನು ಪೀಡಿಸಿ ಕಥೆ ಮುಂದುವರೆಸಲು ಹೇಳುತ್ತಾರೆ. ಮತ್ತೆ ಅಜ್ಜಿ ಕಥೆ ಶುರು. ಇನ್ನು ಅಜ್ಜಿನೂ ಇಲ್ಲ, ಕಥೆನೂ ಇಲ್ಲ. ಊರಿಗೆ ಕೊತ್ತೆಗಾಲದ ದೊಡ್ಡಮ್ಮ ತನ್ನ ಮಗ ಸುಬ್ಬರಾಯನೆ ಜೊತೆ ಎತ್ತಿನ ಗಾಡಿಯಲ್ಲಿ ಬರುತ್ತಾಳೆ. ಆ ಕಾಲಕ್ಕೆ ಹಳ್ಳಿ ಜನಕ್ಕೆ ಎತ್ತಿನ ಗಾಡಿಯೇ ದಿಕ್ಕು, ಮೋಟಾರು, ಬಸ್ಸು ಎಂದು ಜನ ಇನ್ನು ನೋಡಿರಲೇ ಇಲ್ಲ. ಇನ್ನು ಹಳೆಯ ಸಾಧನ ಎತ್ತಿನ ಬಂಡಿಯಲ್ಲಿ ಹಲವು ರಾತ್ರಿ ಪ್ರಯಾಣ ಮಾಡುತ್ತಿದ್ದರು. ರಾತ್ರಿ ಹೊತ್ತು ಬಂಡಿಗೆ ಮಿಣುಕು ದೀಪ ಹಚ್ಚಿಟ್ಟುಕೊಂಡು ಪ್ರಯಾಣಿಸುತ್ತಿದ್ದರು. ಎತ್ತುಗಳು ನಮ್ಮ ರೈತರ ಮಿತ್ರರು. ಅವು ಬಂಡಿ ಎಳೆಯಲು ಸೈ, ಹೊಲ ಉಳಲು ಸೈ. ಸುಮ್ಮನೆ ದುಡಿಯುವವನನ್ನು ಗಾಣದೆತ್ತಿನ ಹಾಗೆ ದುಡೀತಾನೆ ಎಂದು ಜನಪದರು ಹೇಳಿದ್ದಾರೆ. ಹೊಲದ ಅಕ್ಕ ಪಕ್ಕದ ಹಾದಿಯಲ್ಲಿ ಎತ್ತಿನಗಾಡಿ ಬರುತ್ತಿದ್ದಾಗ ಅದೇ ದಾರಿಯಲ್ಲಿ ನಟರಾಜ ಮಂಗಳೆ ಬರುತ್ತಿದ್ದಾರೆ. ಹಾವು ಬಂತು ಎಂದು ಮಂಗಳೆ ನಟರಾಜನನ್ನು ಹಿಡಿದುಕೊಳ್ಳುತ್ತಾನೆ. ಅದನ್ನು ಕಂಡು ನಾಗತ್ತೆ ವಯಸ್ಸಿಗೆ ಬಂದ ಇನ್ನು ಮದುವೆಯಾಗದ ಹುಡುಗಿ ಹೀಗೆ ಮದುವೆಗೆ ಬಂದ ಹುಡುಗನ ಜೊತೆ ಏನು ಸುತ್ತಾಟ ಎಂದು ಕೋಪಗೊಂಡು ತನ್ನತ್ತ ಎಳೆದುಕೊಳ್ಳುತ್ತಾಳೆ. ಹಳ್ಳಿ ಕಡೆ ಹೀಗೆ ಮದುವೆ ಆಗುವವರೆಗೂ ಅಕ್ಕನ ಮಗಳ ಜೊತೆ ತಮ್ಮನೂ ಸಹಾ ಸರಸ ಆಡುವಂತಿಲ್ಲ. ಎಷ್ಟೇ ಒಟ್ಟಿಗೆ ಬೆಳೆದರೂ ಸಮಾಜದ ಕಟ್ಟುಪಾಡುಗಳನ್ನು ಯಾರೂ ಮೀರುವಂತಿಲ್ಲ.

ಒಳ್ಳೆ ಸುಂದರ ಹೆಣ್ಣು ಮಗಳನ್ನು ಕಂಡರೆ ಯಾರಾದರೂ ಮನೆ ಸೊಸೆ ಮಾಡಿಕೊಳ್ಳಲು ಹವಣಿಸುತ್ತಾರೆ. ಮಂಗಳೆಯನ್ನು ಕಂಡು ನಾಗಜ್ಜಿ ತನ್ನ ತಮ್ಮ ಸುಬ್ಬರಾಯನಿಗೆ ತಂದುಕೊಳ್ಳುವ ಆಸೆ ಮೂಡುತ್ತದೆ. ಸುಬ್ಬರಾಯ ಕುರೂಪಿ ವಯಸ್ಸಿನಲ್ಲಿ ದೊಡ್ಡವನು. ಆದರೆ ಆಸ್ತಿಪಾಸ್ತಿ ಇದೆ. ಅಲ್ಲಿಗೆ ಬಂದ ವಿಷಕಂಠ ಎರಡು ಬಿಂದಿಗೆಗಳನ್ನು ಕಟ್ಟಿದ ಎರಡು ಕೋಲುಗಳಲ್ಲಿ ನೀರು ತರುತ್ತಾನೆ. ಅದು ಒಂದು ಜಾನಪದ ಪದ್ಧತಿ. ನೀರು ತರಲು ಬಳಸುವ ಸಾಧನ ಹೊಲ ಗದ್ದೆ ತೋಟ ಮನೆ ನೋಡಿ ಯಾರಾದರೂ ಹೆಣ್ಣು ಕೊಡ್ತಾರೆ ಅಲ್ಲವೇ? ವಿಷಕಂಠನಿಗೆ ದುಡ್ಡು ಎಂದರೆ ಪ್ರಾಣ. ಮನಸ್ಸಿನಲ್ಲಿಯೇ ಮಂಡಿಗೆ ತಿನ್ನುತ್ತಾ ನರಸಕ್ಕ ಮನೆಗೆ ಕೊಳ್ಳಿ ಇಡುತ್ತಾಳೆ.

ಆ ಕಾಲಕ್ಕೆ ಕುಟುಂಬ ಯೋಜನೆ ಅಂತಾ ಒಂದು ಇರಲಿಲ್ಲವಲ್ಲ. ಮಗಳು ಮದುವೆ ಆಗಿ ಹೋದ ಮೇಲೆ ಅವಳು ಬಾಣಂತನಕ್ಕೆ ಬಂದರೆ ತಾಯಿಯೇ ಬಸುರಾಗಿ ಹೆತ್ತ ಉದಾಹರಣೆ ಉಂಟು. ಒಮ್ಮೊಮ್ಮೆ ಅಮ್ಮ ಮಗಳು ಒಟ್ಟಾಗಿ ಬಾಣಂತನ ಮಾಡಿಕೊಂಡ ಉದಾಹರಣೆ ಇವೆ. ಮಂಗಳೆಯ ತಾಯಿ ಪಾರ್ವತಿಗೆ ಗರ್ಭಪಾತವಾಗಿ ಅವಳು ಅನಾರೋಗ್ಯಕ್ಕೆ ಈಡಾಗುತ್ತಾಳೆ. ಮಂಗಳೆ ಅಮ್ಮನ ಸೇವೆಯಲ್ಲಿ ತೊಡಗುತ್ತಾಳೆ. ಮೈ ಇಳತಂತೆ ಎನ್ನುವ ಶಬ್ದ ಇಲ್ಲಿ ಬಳಸಲಾಗಿದೆ. ನಟರಾಜ ರಜೆ ಮುಗಿಸಿ ಮತ್ತೆ ಮೈಸೂರಿಗೆ ಹೊರಡುತ್ತಾನೆ. ಬಾವಿ ಹತ್ರ ನೀರು ಸೇದುವ ಮಂಗಳೆಗೆ ಮಾವ ಹೋಗುತ್ತಾನೆ ಎನ್ನುವ ದುಃಖ ಇಬ್ಬರಿಗೂ ದುಃಖ ಒಲ್ಲದ ಮನಸ್ಸಿನಲ್ಲಿ ಇಬ್ಬರೂ ದೂರ ಆಗುತ್ತಾರೆ. ವಿಧಿ ಬರಹ ಅವರು ಪುನ: ಒಂದಾಗುವುದೇ ಇಲ್ಲ. ಆ ಕಾಲಕ್ಕೆ ಸ್ವಾತಂತ್ರ್ಯದ ಚಳುವಳಿ ಇಡೀ ದೇಶದಲ್ಲಿ ಆವರಿಸಿಕೊಂಡಿತ್ತು. ಸುಮ್ಮನೆ ಹೋಗುತ್ತಿದ್ದ ನಟರಾಜನನ್ನು ಸ್ವಾತಂತ್ರ್ಯ ಹೋರಾಟಗಾರ ಎಂದು ಜೈಲಿಗೆ ಎಳೆದುಕೊಂಡು ಹೋಗುತ್ತಾರೆ. ಸಾಬಿ ಈ ವಿಷಯ ಮನೆಗೆ ತಿಳಿಸುತ್ತಾನೆ. ಇದೇ ಕೊರಗಿನಲ್ಲಿ ಪಾರ್ವತಿ ಮತ್ತಷ್ಟು ರೋಗಿಯಾಗುತ್ತಾಳೆ.

ಮಂಥರೆಯಂತೆ ಬಂದ ನರಸಕ್ಕ ವಿಷಕಂಠನಿಗೆ ಹಣದ ಆಮಿಷ ತೋರಿಸಿ "ನಟರಾಜ ಇನ್ನೆಲ್ಲಿ ಜೈಲು ಸೇರಿದ್ದಾನೆ. ನಿನ್ನ ಮಗಳನ್ನು ಹೀಗೆ ಬಿಡ್ತೀಯಾ" ಹಾಗೆ ಹೀಗೆ ಎಂದು ವಿಷಕಾರಿ ಮದುವೆಗೆ ಒಪ್ಪಿಸುತ್ತಾಳೆ. ಆದರೆ ಪಾರ್ವತಿಯ ತನ್ನ ತವರು ಮನೆಯ ನಂಟು. ಅನಾಥ ತಮ್ಮ ನನ್ನ ಮನೆಗೆ ದಿಕ್ಕಾಗಲಿ ಎಂದು ಕನಸು ಕಂಡಿದ್ದಳು. ಮಂಗಳ ಮದುವೆ ನಟರಾಜನ ಜೊತೆ ಎಂದೇ ಹಠ ಹಿಡಿಯುತ್ತಾಳೆ. ಆದರೆ ವಿಷಕಂಠ ಮನೆ ಬಿಟ್ಟು ಹೊರಡುವ ನಾಟಕ ಆಡಿ ಅವಳನ್ನು ಒಪ್ಪಿಸುತ್ತಾನೆ. ಇಲ್ಲೆಲ್ಲಾ ನಾವು ನೋಡಬೇಕಾದದ್ದು ಗ್ರಾಮ್ಯ ಭಾಷೆ. ಹಳ್ಳಿ ಮದುವೆ ವಿಚಾರದಲ್ಲಿ ನಡೆಯುವ ರಾಜಕೀಯ. ಆಸ್ತಿ ಒಡವೆ ಎಂದಾಗ ಹಣ ಎಂದ್ರೆ ಹೆಣಾನೂ ಬಾಯಿ ಬಿಡುತ್ತೆ ಎಂದು ಜನಪದರು ಹೇಳುತ್ತಾರೆ. ವಿಷಕಂಠ ನಿಜಕ್ಕೂ ಮಂಗಳೆಯ ಜೀವನದಲ್ಲಿ ವಿಷ ಕಾರುತ್ತಾನೆ. ಚದುರಂಗ ಅವರು ಬಹಳ ಯೋಚನೆ ಮಾಡಿ ಈ ಹೆಸರು ಇಟ್ಟಿದ್ದಾರೆ.

"ವರಸಾಮ್ಯ, ಗಂಡು ಹೆಣ್ಣು ರಜತ್ತಾಗಿ ಇರಬಾರದೆ? ಅಟ್ಟಿ ಗಂಡನು ಇಲ್ಲದ್ದು ಒಂದು ಕುಲವಾ" ಗಂಡು ಹೆಣ್ಣು ಶಿವಪಾರ್ವತಿ ಇದ್ದಂಗೆ ಇರಬೇಕು. ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೀತು ಎನ್ನುವ ಹಾಗೆ ಆಗಬಾರದು. ಲಗ್ನಕ್ಕೆ ಫಳಿಗೆ ಕೂಡಿ ಬರಬೇಕು. ಮಂಗಳೆ ಇನ್ನು ಚಿಕ್ಕವಳು. ಸುಬ್ಬರಾಯ ದೊಡ್ಡವನು ಇಬ್ಬರ ಮಧ್ಯೆ ತುಂಬಾ ವಯಸ್ಸಿನ ಅಂತರ ಇದೆ ಎಂದೆಲ್ಲಾ ಪಾರ್ವತಿ ವಾದಿಸುತ್ತಾಳೆ. ಆದರೆ ವಿಷಕಂಠನಿಗೆ ಅದೆಲ್ಲ ನಗಣ್ಯ. ದುಡ್ಡು ಇದ್ರೆ ಆಯಿತು.

ನಮ್ಮ ದೇಶದಲ್ಲಿ ಇದೊಂದು ದೊಡ್ಡ ಸಮಸ್ಯೆ ಇದೆ. ಹಳ್ಳಿ ಕಡೆ ಅಂತೂ ಸ್ವಲ್ಪ ಹೆಚ್ಚಾಗಿಯೇ ಇದೆ. ತಮ್ಮನಿಗೆ ಮಗಳು ಕೊಡುವ ಆತುರದಲ್ಲಿ ೧೦-೧೫ ವರ್ಷ ಚಿಕ್ಕ ಮಗಳು ತಮ್ಮನ ಹೆಂಡತಿಯಾಗುತ್ತಾಳೆ. ಅವಳಿಗೋ ಏನು ತಿಳಿಯದು. ಹೆಣ್ಣು ಮಕ್ಕಳಿಗೆ ಬಹಳ ಬೇಗ ಮದುವೆ ಮಾಡಿ ಬಿಡುತ್ತಾರೆ. ಒಂದು ಕಾಲದಲ್ಲಿ ತೊಟ್ಟಿಲು ತೊಟ್ಟಿಲಿಗೆ ಮದುವೆ ಮಾಡಿ ಬಿಡುತ್ತಿದ್ದರಂತೆ . ಮೊದಲಿನಿಂದಲೂ ಒಟ್ಟಾಗಿ ಬೆಳೆದಾಗ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡಾಗ ಇತ್ತೀಚಿನ ದಿನಗಳಂತೆ ವಿವಾಹ ವಿಚ್ಛೇದನ ಕಡಿಮೆ ಆಗುತ್ತಿತ್ತು. ಏನೋ ಪ್ರೀತಿ ಇದೆಯೋ ಇಲ್ಲವೋ ಒಟ್ಟಾಗಿ ಬಾಳುತ್ತಿದ್ದರು. ವಯಸ್ಸಿನ ಅಂತರ ಇರುತ್ತಿತ್ತು. ಗಂಡ ಸತ್ತರೆ ಹೆಂಡತಿ ಇನ್ನು ಚಿಕ್ಕವಳು. ಚಿಕ್ಕ

ವಯಸ್ಸಿಗೆ ವಿಧವೆ ಪಟ್ಟ ಕಟ್ಟಿಕೊಂಡು ಸಂಸಾರದಲ್ಲಿ ಏಗುವ ಕರ್ಮ ಹೆಣ್ಣಿನದು. ಇದರಲ್ಲಿ ಒಳ್ಳೆಯದು ಇದೆ. ಕೆಟ್ಟದ್ದು ಇದೆ. ವಯೋ ಸಹಜವಾಗಿ ಗಂಡ ಖಾಯಿಲೆ ಬೀಳಬಹುದು. ೧೦-೧೫ ವರ್ಷಗಳ ಅಂತರದಲ್ಲಿ ತೀರಿ ಹೋಗಬಹುದು. ಆ ಕಾರಣಕ್ಕೆ ನಮ್ಮ ದೇಶದಲ್ಲಿ ವಿಧವೆಯರ ಸಂಖ್ಯೆ ಹೆಚ್ಚು ಅವರು ಮತ್ತೊಮ್ಮೆ ವಿವಾಹ ಮಾಡಿಕೊಳ್ಳೋದು ಕಡಿಮೆ. ಮಾಡಿಕೊಳ್ಳುವ ತ್ಯಾಗಿಗಳು ಎಲ್ಲಿದ್ದಾರೆ. ಅವರು ಒಪ್ಪಿದರೆ ಸಮಾಜ ಒಪ್ಪಬೇಕಲ್ಲ. (ಇತ್ತೀಚಿನ ದಿನಗಳಲ್ಲಿ ಪರಿಸ್ಥಿತಿ ಬದಲಾಗಿದೆ, ವಿಧವಾ ವಿವಾಹ ನಡೆಯುತ್ತದೆ). ನೀವು ಹಳೆಯ ಮನೆಗಳಿಗೆ ಹೋಗಿ ಅಲ್ಲಿ ಗಂಡನ ಫೋಟೋ ಗೋಡೆಯ ಮೇಲೆ ಅದಕ್ಕೆ ಹಾರ ಅಂದ್ರೆ ಗಂಡ ತೀರಿಕೊಂಡು ೧೦-೧೫ ವರ್ಷ ಆಯಿತು. ಅವತ್ತಿನಿಂದ ಇವತ್ತಿನವರೆಗೂ ಮಕ್ಕಳು ಮರಿ ನೋಡಿಕೊಂಡು ನಡಿಸ್ತೆ ಇದೀನಿ ಎಂದು ಹೇಳುವ ಹಳ್ಳಿ ಹೆಂಗಸರು ಹೆಚ್ಚು.

ಹೆಂಡತಿ ಸತ್ತುಹೋದಳು. ಇನ್ನೊಂದು ಮದುವೆ ಮಾಡಿ ಕೊಳ್ಳಲಿಲ್ಲ. ನಾನೇ ತಾಯಿ ತಂದೆಯಾಗಿ ಮಕ್ಕಳನ್ನು ಬೆಳೆಸುತ್ತಿದ್ದೇನೆ ಎಂದು ಹೇಳುವ ಗಂಡಸರ ಸಂಖ್ಯೆ ತೀರ ಕಡಿಮೆ. ಹೆಂಡತಿ ತೀರಿದ ಒಂದು ವರ್ಷದೊಳಗೆ ಎರಡನೇ ಮದುವೆಗೆ ಸಿದ್ಧ. ಸಮಾಜವೇ ಎಷ್ಟು ದಿನ್ ಅಂತಾ ಇಂಗೆ ಇರ್ತೀಯಾ? ಮನೆಗೆ ಒಂದು ದೀಪ ಹಚ್ಚುವುದು ಬ್ಯಾಡವೇ, ಗಂಜಿ ಕಾಸೋರು ಯಾರು? ಮಕ್ಕಳಿಗೆ ತಾಯಿ ಬೇಡವೇ ಅದೂ ಇದೂ ಹೇಳಿ ಎರಡನೆ ಮದುವೆ ಮಾಡಿಸಿಯೇ ಬಿಡುತ್ತಾರೆ. ಅಲ್ಲಿ ಸಹಾ ಚಿಕ್ಕವಯಸ್ಸಿನ ಹೆಣ್ಣು ಮಗು ಹೆಂಡತಿಯಾಗಿ ಬರುತ್ತಾಳೆ. ಅವಳ ಗಂಡ ತೀರಿದಾಗ ಅವಳು ಒಂಟಿ ಎಂದು ಸಮಾಜ ಅವಳ ಸಂಕಟಕ್ಕೆ ಜೊತೆ ನಿಲ್ಲುವುದಿಲ್ಲ.

ನಮ್ಮ ಜನಪದ ಸಂಸ್ಕೃತಿಯಲ್ಲಿ ಕೂಡಿಕೆ ಎನ್ನುವ ಪದ್ಧತಿ ಇದೆ. ಹೆಂಗಸರಿಗೂ ಎರಡನೇ ಮದುವೆ ಉಂಟು. ಕೆಲ ಜಾತಿಯಲ್ಲಿ ಮಾತ್ರ ಇದು ಜಾರಿಯಲ್ಲಿದೆ. ಅದು ನಿಜಕ್ಕೂ ಒಳ್ಳೆಯದು. ವಿಷಕಂಠ ಈ ಮದುವೆಗೆ ನೀನು ಒಪ್ಪಬೇಕು ಇಲ್ಲದಿದ್ದರೆ ಮಾದೇಶ್ವರನ ಆಣೆ ಎಂದು ಆಣೆ ಪ್ರಮಾಣ ಮಾಡುತ್ತಾಳೆ. ಹಳೆ ಮೈಸೂರಿನ ಮಾದೇಶ್ವರನ ಮೇಲೆ ಆಣೆ ಮಾಡಿದರೆ ಆಯ್ತು. ಮಾತು ಮುರಿಯೋ ಹಂಗಿಲ್ಲ. ಚಾಮರಾಜನಗರ, ಕೊಳ್ಳೇಗಾಲ ದೊಡ್ಡಿ, ಟಿ. ನರಸೀಪುರ, ನಂಜನಗೂಡು, ಕೆ.ಆರ್. ನಗರ, ಮುಂತಾದ ಕಡೆ ಮಾದೇಶ್ವರ ಭಕ್ತಿಯ ಹೆಚ್ಚು. ಮೂರು ದಿನ, ಮೂರು ರಾತ್ರಿ ಕುಳಿತು ಹಾಡಿದರೂ ಮುಗಿಯದ ಮಾದೇಶ್ವರ ಭಕ್ತಿ ಲೀಲೆಗೆ ಸೋಲದವರು ಇಲ್ಲ. ಮಾದೇಶ್ವರ ಎಂದರೆ ಭಯ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಅಂಟು ಮೈಲಿಗೆ ಆಗದು. ಮಾತಿಗೆ ಕಟ್ಟುಬಿದ್ದು ಪಾರ್ವತಿ ಇಲ್ಲದ ಮನಸ್ಸಿನಿಂದ ಮದುವೆಗೆ ಒಪ್ಪುತ್ತಾಳೆ. ಅಲ್ಲಿ ಅಪಶಕುನವೆಂದು ಕಾಣಿಸಿಕೊಳ್ಳುತ್ತವೆ. ಮದುವೆ ಕೊನೆಗೂ ಒಲ್ಲದ ಮನಸ್ಸಿನ ನಡುವೆ ನಡೆದುಹೋಗುತ್ತದೆ. ಮುಸಲ್ಮಾನ ಸಾಹೇಬನಿಗೆ ಮಂಗಳ ಎಂದರೆ ಪ್ರೀತಿ. ಮದುವೆ ತಿಂಡಿ ಕೊಟ್ಟಾಗಲೂ ಮಂಗಳೆ ಮುಖದಲ್ಲಿ ಉತ್ಸಾಹ ಕಾಣದೇ ಇದ್ದಾಗ ಏನೋ ಆಗಿದೆ ಎಂದು ಅನುಮಾನಿಸುತ್ತಾನೆ. ಮದುವೆ ನಟರಾಜನ ಜೊತೆ ಆಗಲಿಲ್ಲ ಎಂದು ತಿಳಿದು ದುಃಖಿಸುತ್ತಾನೆ. ತಿಂಡಿ ಮಣ್ಣಿನ ಪಾಲಾಗುತ್ತದೆ.

ಹೊಲವೊಂದರಲ್ಲಿ ನಟರಾಜ ಉತ್ಸಾಹದಿಂದ ಬರುತ್ತಿದ್ದಾನೆ. ಎಷ್ಟು ಬೇಗ ಊರು ಸೇರಿ ಮಂಗಳೆಯ ಮುಖ ನೋಡುತ್ತೇನೆಯೋ ಎಂಬುದು ಆತನ ಕಾತುರ. ಫಕೀರ ದಾರಿಯಲ್ಲಿ ಸಿಕ್ಕು ಮಂಗಳೆ ಮದುವೆ ಆದ ವಿಷಯ

ತಿಳಿದ ಹಾವು ಕಚ್ಚಿದವನಂತೆ ಕುಸಿದು ಬೀಳುತ್ತಾನೆ. ಹಳ್ಳಿಗೆ ಹಿಂದಿರುಗದೆ ವಾಪಸ್ಸು ಹೊರಟ ಅವನನ್ನು ಫಕೀರ ತಡೆದು ನಿಮ್ಮ ಅಕ್ಕ ಈಗಲೋ ಆಗಲೋ ಎಂಬಂತೆ ಆಗಿದ್ದಾಳೆ. ಅವಳನ್ನು ಹೋಗಿ ನೋಡು ಎಂದು ಬಲವಂತವಾಗಿ ಊರಿಗೆ ಕಳುಹಿಸುತ್ತಾನೆ. ಯಾರಾದರೂ ಸಾಯುವ ಸ್ಥಿತಿಯಲ್ಲಿದ್ದಾರೆ ಎಂದರೆ ಅವರ ಮಾತು ಕೇಳುವುದು ಅವರ ಮಾತು ನಡೆಸಿ ಕೊಡುವುದು ನಮ್ಮ ಹಳ್ಳಿಗರಲ್ಲಿ ಸಾಮಾನ್ಯ. ಸಾಯೋ ಮುನ್ನ ಕೊನೆ ಆಸೆ ತೀರಿಸಪ್ಪ ಎಂದು ಹಿರಿಯರು ಬೇಡುವುದುಂಟು. ನಿನ್ನ ಕೊನೆ ಆಸೆ ಏನು ಪ್ರಾಣ ಕೊಟ್ಟಾದರೂ ನೆರವೇರೆಸಿಕೊಡುತ್ತೇನೆ ಎಂದು ಮಕ್ಕಳು ತಂದೆ ತಾಯಿಗೆ ಹೇಳುವುದುಂಟು. ಬಹುಶಃ ಪಾರ್ವತಿ ಅನಾರೋಗ್ಯದ ಕಾರಣದಿಂದ ನರಳುತ್ತಿದ್ದಾಗ ಅಮ್ಮನನ್ನು ಬದುಕಿಸಿಕೊಳ್ಳಲು ಮಂಗಳೆ ಈ ಮದುವೆಗೆ ಒಪ್ಪುತ್ತಾಳೆ. ಮಂಗಳೆಯ ಮದುವೆ ಆದ ವಿಷಯ ಕೇಳಿ ನಟರಾಜ ಯಾರ ಮುಖ ನೋಡದೆ ದೇಶಾಂತರ ಹೊರಟು ಬಿಡಬೇಕೀಂದು ದುಃಖದಿಂದ ಹೊರಟಾಗ ಅಕ್ಕನ ಸಾವು ಬದುಕಿನ ಹೋರಾಟದ ಸುದ್ದಿ ಪುನಃ ಬಂದು ಅಕ್ಕನ ಮುಖ ನೋಡುವ ಹಾಗೆ ಮಾಡುತ್ತದೆ. ಇದೇ ಕರುಳ ಬಳ್ಳಿ ಪ್ರೇಮ. ಮನೆಗೆ ಬಂದು ಅಕ್ಕನ ಸ್ಥಿತಿ ನೋಡಿ ದುಃಖಿಸುತ್ತಾನೆ. ಮದುವೆಯಾಗಿ ಮುತ್ತೈದೆಯಾಗಿ ಕಾಣುವ ಮಂಗಳೆಯನ್ನು ನೋಡಿ ಮತ್ತಷ್ಟು ಕುಗ್ಗಿ ಹೋಗುತ್ತಾನೆ. ಅವನಿಗೆ ಪ್ರಪಂಚವೇ ಬೇಡ ಎನಿಸುತ್ತದೆ. ಆದರೆ ಅಕ್ಕನ ಮುಖ ನೋಡಿಕೊಂಡು ಮನೆಯಲ್ಲಿ ಉಳಿಯುತ್ತಾನೆ.

ಊರಿನಲ್ಲಿ ಜಾತ್ರೆ, ರಥೋತ್ಸವ, ಕಳಸ ಹೊತ್ತ ಹೆಣ್ಣು ಮಕ್ಕಳು, ತುಂಬಿದ ಬಿಂದಿಗೆ ಎಲ್ಲರೂ ಶಾಸ್ತ್ರೀಕವಾಗಿ ನಡೆಯುತ್ತವೆ. ರಾಜಣ್ಣನವರ ಪ್ರತಿ ಚಿತ್ರದಲ್ಲೂ ಜಾತ್ರೆ ಇದ್ದೇ ಇರುತ್ತದೆ. ಇದು ಜಾನಪದ ಸಂಸ್ಕೃತಿಗೆ ಅವರು



ಕೊಟ್ಟ ಮಹತ್ವ ಪ್ರತಿ ನಿರ್ದೇಶಕರು ಸಹ ಕಥೆಗೆ ತಕ್ಕ ಹಾಗೆ ಜಾತ್ರೆ ಸನ್ನಿವೇಶವನ್ನು ತರುತ್ತಾರೆ. ಅದು ಸಿನೆಮಾ ಕಥೆಗೆ ಅನಾವಶ್ಯಕ ಎಂದು ಯಾರಿಗೂ ಅನಿಸುವುದಿಲ್ಲ. ಸಿನೆಮಾಗೆ ಬೇಕಾದ ಅತ್ಯಂತ ಅವಶ್ಯಕ ವಸ್ತು ಎನಿಸುತ್ತದೆ.

ಮಾದೇಶ್ವರ ಜಾತ್ರೆ, ದೇವಿರಮ್ಮನ ಜಾತ್ರೆ, ನಂಜುಂಡೇಶ್ವರನ ತೇರು, ಎಲ್ಲವನ್ನೂ ಒಂದಲ್ಲ ಒಂದು ಸಿನೆಮಾದಲ್ಲಿ ತೋರಿಸಿದ್ದಾರೆ. ಉತ್ಸವ ಮೂರ್ತಿಯನ್ನು ಸಿನೆಮಾದಲ್ಲಿ ಕಂಡರು ಕೈಮುಗಿಯುವ ಸಭ್ಯತೆ ನಮ್ಮ ಜನಕ್ಕಿದೆ. ಜನಗಳ ಆಸಕ್ತಿಯನ್ನು ನಿರ್ದೇಶಕರು ಇಂಥಹ ಜಾತ್ರೆ ಹಬ್ಬ ಸಿನೆಮಾದಲ್ಲಿ ತರುತ್ತಾರೆ, ಈ ಜಾತ್ರೆಯ ಸಮಯದಲ್ಲಿ ರಾಮಾಯಣದ ಒಂದು ದೃಶ್ಯ. ರಾವಣನ ತಂಗಿ ಶೂರ್ಪನಖಿ ರಾವಣನನ್ನು ಸೀತೆಯನ್ನು ಕದ್ದು ತರಲು ಪ್ರಚೋದಿಸುತ್ತಾಳೆ.



ಹಾಡಿನಲ್ಲಿ "ಅಣ್ಣಾ ರಾವಣ ತರಬೇಕು
ಅಂಥ ಚೆಲುವೆನಾ ಜಾನಕಿ,
ಮಂಡೋದರಿಗಿಂತ ಚೆಲುವೇನಾ"

ಜಾನಕಿ ಸೌಂದರ್ಯ ಮಂಡೋದರಿಗಿಂತ ಹೆಚ್ಚಿದೆ ಅವಳನ್ನು ಕದ್ದು ತಾ ಎನ್ನುವ ಕಥಾ ಪ್ರಸಂಗವನ್ನು ನಾಟಕದ ಮೂಲಕ ಆಡಿ ತೋರಿಸುವ ದೃಶ್ಯವಿದೆ. ಇದೂ ಸಹಾ ಒಂದು ಜನಪದ ಗೀತೆ ಆಗಿದ್ದು ಜಾನಪದ ನೃತ್ಯ ಶೈಲಿಯಲ್ಲಿದೆ. ರಾವಣನ ಪಾತ್ರದಲ್ಲಿ ಹತ್ತು ತಲೆ, ಶೂರ್ಪನಖಿ ರಾಕ್ಷಸಿ, ರಾಕ್ಷಸನಾದ ಕುರೂಪಿ ಸುಬ್ಬರಾಯ ಸೌಂದರ್ಯವತಿಯಾದ ಮಂಗಳೆಯನ್ನು ರಾಮನಿಲ್ಲದ ಸಮಯದಲ್ಲಿ ಮರಳು ಮಾಡಿ ಮೋಸ ಮಾಡಿ ಕದ್ದು ಎತ್ತಿಹೋದ ಚಿತ್ರಕಥೆಯನ್ನು ನೆನಪಿಸುತ್ತದೆ. ರಾಮ ಅಂದರೆ ನಟರಾಜ, ಸೀತೆ ಅಂದರೆ ಮಂಗಳೆ ರಾವಣನ ಲಂಕೆ ಸೇರಿದ ಸುದ್ದಿ ಕೇಳಿ ತಲ್ಲಣಿಸಿ ಹೋಗುತ್ತಾರೆ. ಹೀಗೆ ಗಿಳಿಮರಿಯನ್ನು ಗಿಡುಗ ಹೊತ್ತುಕೊಂಡು ಹೋಗುತ್ತದೆ. ಗಿಳಿಮರಿಯನ್ನು ಸಾಕಿದವ ಕಣ್ಣೀರು ಹಾಕುತ್ತಿದ್ದಾನೆ.

ಜಾತ್ರೆಯ ನೆಪದಲ್ಲಿ ಊರಿನ ಜನರಿಗೆ ಸುಬ್ಬರಾಯ ಮೇಲೆ ಕೋಪ ತೀರಿಸಿಕೊಳ್ಳಲು ಅವನು ಮಂಗಳೆಯನ್ನು ಮದುವೆಯಾದ, ನಟರಾಜನಿಗೆ ಅನ್ಯಾಯವಾಯಿತು ಎಂದು ಹಳ್ಳಿ ಜನ ಓಕುಳಿ ಆಟದಲ್ಲಿ ಅವನಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆಂದು ನಿರ್ಧರಿಸುತ್ತಾರೆ. ಜಾನಪದ ಕ್ರೀಡೆಯಾದ ಓಕುಳಿ ಆಟ ಆರಂಭವಾಗುತ್ತದೆ. ಲಂಕಾಸುರನ ದಹನ ಆಗುತ್ತದೆ. ಓಕುಳಿ ಬಣ್ಣವನ್ನು ಪಿಚಕಾರಿಗೆ ತುಂಬಿ ಹೊಡೆಯುವ ಆಟ. ಹಳ್ಳಿ ಕಡೆ ಪಿಚಕಾರಿ ಇಲ್ಲದಿದ್ದರೆ ಕರುವಿಗೆ ಹಾಲು ಹಾಲು ಕುಡಿಸುವ ಮರದ ಲೋಟದ ಆಕೃತಿಯ ವಸ್ತುವಿರುತ್ತದೆ. ಅದರಲ್ಲಿ ಬಣ್ಣದ ನೀರು ತುಂಬುತ್ತಾರೆ ಅಥವಾ ಚೆಂಬಿನಲ್ಲಿ ಬಣ್ಣದ ನೀರು ತುಂಬಿ ಮುಖಕ್ಕೆ ಹೊಡೆಯುವ ಬಡಿಯುವ ಹಾಗೆ ಜೋರಾಗಿ ಎರಚುತ್ತಾರೆ. ಅವರ ಹೊಡೆತ ತಪ್ಪಿಸಿಕೊಂಡು ಪ್ರತಿ ಹೊಡೆಯುವುದೇ ಆಟ.

ಸುಬ್ಬರಾಯನನ್ನು ಓಕುಳಿ ಆಟದಲ್ಲಿ ಹಣ್ಣು ಗಾಯಿ, ನೀರುಗಾಯಿ ಆಗೋ ಹಾಗೆ ನೀರಿನಲ್ಲಿ ಹೊಡೆಯುತ್ತಾರೆ. ಅದರಿಂದ ಅವನಿಗೆ ತಪ್ಪಿಸಿಕೊಳ್ಳಲು ಆಗುವುದಿಲ್ಲ. ತತ್ತರಿಸಿ ಹೋಗುತ್ತಾನೆ. ಇದೇ ಸಮಯ ಎಂದು ನಮ್ಮ ಹಳ್ಳಿಗರು ತಮ್ಮ ವೈಯಕ್ತಿಕ ದ್ವೇಷವನ್ನು ಸಾಧಿಸಿಕೊಂಡರೆ ಒಮ್ಮೊಮ್ಮೆ ಆಟದಲ್ಲಿ ರಕ್ತಪಾತ, ಏಟು, ಸಾವು ನೋವುಗಳು ಸಂಭವಿಸುವುದು ಉಂಟು. ಓಕುಳಿ ಎಂದಾಗ ಕೆಲ ಗುಂಪು ಕುಣಿತು ಹಾಡುವುದುಂಟು. ಕೆಲವರು ಕಿರಿಚುತ್ತ, ಅರಚುತ್ತ, ಹೋ ಹೋ ಎಂದು ಜೋರಾಗಿ ಗಲಾಟೆ ಎಬ್ಬಿಸಿ ಎರಚಾಡುತ್ತಾರೆ. ರಾವಣನನ್ನು ಸುಡುವ ಲಂಕಾದಹನ, ಕಾಮಣ್ಣನನ್ನು ಸುಡುವುದು ಒಂದು ಜಾನಪದ ಕಲೆ. ರಾವಣ ದಹನ, ವಿಜಯದಶಮಿಯಂದು ನಡೆಯುತ್ತದೆ. ಓಕುಳಿಯಿಂದ ಘಾಸಿಗೊಂಡ ಸುಬ್ಬರಾಯ ಹೊರಬರಲಾರದೆ ಒದ್ದಾಡುತ್ತಿದ್ದಾಗ ನಟರಾಜ ಅಲ್ಲಿಗೆ ಬಂದು ಅವನನ್ನು ರಕ್ಷಿಸುತ್ತಾನೆ. ಓಕುಳಿ ಹಾಕುವವರನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ. ಹಠ ಇದ್ದರೆ ಸುಬ್ಬರಾಯಿಯನ್ನು ಇನ್ನಷ್ಟು ಘಾಸಿಗೊಳ್ಳಲು ಬಿಡಬಹುದಿತ್ತು, ಆದರೆ ನಟರಾಜನಿಗೆ ಸುಬ್ಬರಾಯಿ ಮೇಲೆ ಕರುಣೆ ಬಂದು ಆಟದಿಂದ ಬಿಡಿಸಿಕೊಂಡು ಬರುತ್ತಾನೆ. ಇದನ್ನೆಲ್ಲ ಮಂಗಳ ಗಮನಿಸುತ್ತಾಳೆ.



ಮಾರನೆ ದಿನ ಮಂಗಳೆ ಮತ್ತೆ ಗಂಡನ ಮನೆಗೆ ಕಳುಹಿಸಲಾಗುತ್ತದೆ. ಕೊಟ್ಟಿಗೆಯಲ್ಲಿ ಕಟ್ಟಿದ್ದ ಕರುವನ್ನು ಹಿಡಿದು ಮುದ್ದಾಡಿ ಕಣ್ಣೀರು ಹಾಕುತ್ತಾಳೆ. ಬಹಳ ದುಃಖದಿಂದ ಮಂಗಳೆ ಗಂಡನ ಮನೆಗೆ ಹೊರಡುತ್ತಾಳೆ. ಪ್ರತಿಯೊಬ್ಬ ಹೆಣ್ಣು ತವರು ಮನೆ ತೊರೆದು ಗಂಡನ ಮನೆಗೆ ಹೊರಡುವಾಗ ಅಳುವುದು ಸಹಜ. ಇದೊಂದೇ ದುಃಖವಲ್ಲದೆ ಇಷ್ಟವಿಲ್ಲದ ಗಂಡನೊಂದಿಗೆ ಬಾಳ್ವೆ ನಡೆಸುವುದು ಮತ್ತೊಂದು ದುಃಖ. ಎರಡನ್ನು ಸಹಿಸಿಕೊಂಡು ಮಂಗಳೆ ಅಳುತ್ತ ಬಿಕ್ಕುತ್ತ ಹೊರಟಿದ್ದಾಳೆ. ಅವಳ ಮುದ್ದಿನ ಕರು ಅವಳನ್ನು ಹೋಗಲು ಬಿಡುತ್ತಿಲ್ಲ. ಮನಸ್ಸಿನಲ್ಲಿರುವ ದುಃಖ ನುಂಗಿಕೊಂಡು ಹೊರಡುತ್ತಾಳೆ. ಮದುವೆಯಾದ ತಕ್ಷಣ ಅವಳು ಕನ್ಯೆ ಅಲ್ಲ, ಹೆಂಗಸು. ಜವಾಬ್ದಾರಿ ಇರುವ ಮಹಿಳೆ. ತಲೆ ಮೇಲೆ ಸೆರಗು ಹೊದ್ದು ಗರತಿಯಂತೆ ಗಂಡನ ಮನೆಗೆ ಹೊರಡುತ್ತಾಳೆ. ಅವಳನ್ನು ಕಳುಹಿಸಿಕೊಡಲು ಬಹಳಷ್ಟು ಹಳ್ಳಿ ಹೆಂಗಸರು ಬಂದಿದ್ದಾರೆ. ಇಂತಹ ಸನ್ನಿವೇಶದಲ್ಲಿ ನಮ್ಮ ಜನಪದರು ಹಲವು ಹಾಡುಗಳನ್ನು ಕಟ್ಟಿದ್ದಾರೆ. ಹುಟ್ಟಿ ಬೆಳೆದ ಊರನ್ನು ಬಿಟ್ಟು ಹೋಗುವುದು ತುಂಬಾ ಕಷ್ಟ. ಗಂಡನ ಮನೆ ಹೇಗೋ ಏನೋ ಎನ್ನುವ ಭಯ. ಈ ದುಃಖದಲ್ಲಿಯೂ ಅವಳು ತನ್ನ ತವರು ಮನೆಯನ್ನು ಹರಸುವುದನ್ನು ಬಿಡುವುದಿಲ್ಲ.

"ಹಾಲುಂಡ ತವರಿಗೆ ಏನೆಂದು ಹಾಡಲಿ,
ಹೊಳೆದಂಡೆಲಿರುವ ಗರಕೆಯ ಕುಡಿ ಹಂಗೆ
ಹಬ್ಬಲಿ ಅವರ ರಸ ಬಳ್ಳಿ"

"ತಂದೀನೆ ನೆನವರ ತಂಗೊಳ ಬಿಸಿಯಾಯ್ತು,
ಗಂಗಾದೇವಿ ನನ್ನ ಹಡೆದವ್ವ ನೆನೆವರ
ಮಾಸೀರ ತಲೆಯು ಮುಡಿಯಾಯ್ತು".

ಎಂದು ಹೆಣ್ಣು ಮಗಳು ಆಶಿಸುತ್ತಾಳೆ. ಗಂಡನ ಮನೆ ತಲುಪಿ ಅಲ್ಲಿ ಸಂಸಾರ ನಡೆಸುವ ಹೆಣ್ಣು ಮಗಳು "ಭಾಗ್ಯದ ಬಳೆಗಾರ ಹೋಗಿ ಬಾ ನನ್ನ ತವರಿಗೆ" ಎಂದು ಬಳೆಗಾರನಿಗೆ ತನ್ನ ತವರಿಗೆ ಹೋಗಿ ನನ್ನ ಸಿರಿ ಅವ್ವ ಮುತ್ತೈದೆ ನನ್ನ ತಾಯಿಗೆ ಬಳೆ ತೊಡಿಸು ಎಂದು ಬಳೆಗಾರನನ್ನು ಬೇಡಿಕೊಳ್ಳುತ್ತಾಳೆ. ಬಳೆಗಾರ ನಿನ್ನ ತವರೂರು ನನಗೇನು ಬಲ್ಲೆನು ಎಂದಾಗ "ಬಾಳೆ ಬಲಕ್ಕೆ ಬಿಡು ಸೀಗೆ ಎಡಕ್ಕೆ ಬಿಡು, ನಟ್ಟ ನಡುವೇಲಿ ನೀ ಹೋಗು ಬಳೆಗಾರ ಅಲ್ಲಿದೆ ನನ್ನ ತವರೂರ" ಎಂದು ತವರು ಹಾದಿ ತೋರುತ್ತಾಳೆ. ಇನ್ನು ಬಾಣಂತನ ಮುಗಿಸಿ ತವರಿನಿಂದ ಗಂಡನ ಮನೆಗೆ ಹೋಗುವಾಗ

"ತೊಟ್ಟಿಲ ಹೊತುಕೊಂಡು ತವರ ಬಣ್ಣ
ಉಟ್ಟುಕೊಂಡು, ಅಪ್ಪ ಕೊಟ್ಟ ಎಮ್ಮೆ ಹೊಡಿಕೊಂಡ,
ತವರೂರ ತಿಟ್ಹತ್ತಿ ತಿರುಗಿ ನೋಡ್ಯಾಳ"

ಎಂದು ಹಾಡುತ್ತಾಳೆ.

ಇದೊಂದು ಬಡಹೆಣ್ಣುಮಗಳ ಕಥೆ, ತಲೆ ಮೇಲೆ ತೊಟ್ಟಿಲು ಅದರಲ್ಲಿ ಮಗು, ಮುಂದೆ ಎಮ್ಮೆ ಹೊಡೆದುಕೊಂಡು ತಾನೊಬ್ಬಳೇ ಗಂಡನ ಮನೆ ಸೇರುವ ಹೆಣ್ಣು ಮಗಳು ನಿಜಕ್ಕೂ ಕರ್ಮಯೋಗಿಯೇ ಸರಿ. ಬಡವರ ಹೆಣ್ಣಿನ ಬಾಳು ಈ ರೀತಿ ಇರುತ್ತದೆ. ಎಷ್ಟೇ ಕಷ್ಟವಾದರೂ ತವರು ಚೆನ್ನಾಗಿ ಇರಲಿ ಎಂದು ಆಶಿಸುತ್ತಾಳೆ. ಹೀಗೆ ವಿಶ್ಲೇಷಿಸುತ್ತಾ ಹೋದರೆ ನೂರಾರು ಜಾನಪದ ಗೀತೆಗಳು ಜಾನಪದ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ. ತವರು ಮನೆಯ ಕಷ್ಟ ದು:ಖವನ್ನು ತನ್ನ ಹೊಟ್ಟೆಯಲ್ಲಿ ಬಚ್ಚಿಟ್ಟುಕೊಳ್ಳುತ್ತಾಳೆ. ತವರಿನಲ್ಲಿ ದಾರಿದ್ರ್ಯ ಇದ್ದರೂ ಗಂಡನ ಮನೆಯಲ್ಲಿ ಸಿರಿ ಇದ್ದರೂ ಎಂದಿಗೂ ತವರಿನವರ ಅವಮಾನವನ್ನು ಗಂಡನ ಮನೆಯಲ್ಲಿ ಸಹಿಸುವುದಿಲ್ಲ. ಗಂಡನ ಮನೆಯಲ್ಲಿ ಕಿರುಕುಳವಿದ್ದರೂ ತವರಿಗೆ ಬಂದು ಹೇಳಿಕೊಂಡು ಅಳುವುದಿಲ್ಲ. ಗಂಡನ ಮನೆಯೇ ಅವಳ ಸರ್ವಸ್ವ. ಗಂಡನ ಮನೆಯಲ್ಲಿ ಎಲ್ಲರೂ ಒಳ್ಳೆಯವರೇ ಅಲ್ಲಿ ನಾನು ಸುಖವಾಗಿದ್ದೇನೆ ಎಂದು ಸುಳ್ಳು ಬೇಕಾದರೂ ಹೇಳುತ್ತಾಳೆ. ಅಲ್ಲಿ ಕಣ್ಣೀರು ಹಾಕಿದ್ದನ್ನು ತವರಿನಲ್ಲಿ ಹೇಳಿಕೊಳ್ಳುವುದಿಲ್ಲ.

ಈಗಿನ ಹೆಣ್ಣು ಮಕ್ಕಳಲ್ಲಿ ಕೆಲವರು ಗಂಡನ ಮನೆಯಲ್ಲಿ ಒಂದಿಷ್ಟು ತೊಂದರೆ ಆದರೂ ಸಹಿಸದೆ ತವರು ಮನೆಯಲ್ಲಿ ಹಾಗಿದ್ದೆ, ಹೀಗಿದ್ದೆ ಇಲ್ಲಿ ಅದಿಲ್ಲ, ಇದಿಲ್ಲ, ನಾನು ತವರಿಗೆ ಹೋಗುತ್ತೇನೆ, ಗಂಡ ಬಂದು ಕರೆದರೂ ಬರುವುದಿಲ್ಲ. ಬೇರೆ ಮನೆ ಮಾಡಿ ಕರೆದುಕೊಂಡು ಹೋಗಲಿ ಆಗ ನೋಡೋಣ ಎಂದು ಕೊಬ್ಬಿನ ಮಾತನ್ನಾಡುತ್ತಾರೆ. ಎಲ್ಲರೂ ಅಲ್ಲ, ಕೆಲವರು ಮಾತ್ರ. ಹಬ್ಬಕ್ಕೆ ಕರೆಯಲು ಅಣ್ಣ ಬರುತ್ತಾನೆ. ಆಗ ಅದೇ ನೆಪದಲ್ಲಿ ತವರಿಗೆ ಹೋಗಬಹುದು. ಅಲ್ಲಿ ಅಪ್ಪ ಅಮ್ಮನನ್ನು ನೋಡಬಹುದು ಎಂದು ಹೆಣ್ಣು ಮಕ್ಕಳು ಕಾಯುತ್ತಿದ್ದರು

"ಪಂಚಮಿ ಹಬ್ಬ
ಉಳಿದಾವ ದಿನಾ ನಾಕಾ
ಅಣ್ಣ ಬರಲಿಲ್ಲ ಏಕೆ ಕರಿಯಾಕ?.. .."

ಅಣ್ಣಾ ಬಂದು ಕರೆಯದಿದ್ದರೆ ಗಂಡನ ಮನೆಯಲ್ಲಿ ಕಳುಹಿಸುತ್ತಿರಲಿಲ್ಲ. ಕರೆಯದೆ ಅವಳೂ ಸಹಾ ಹೋಗುವುದಿಲ್ಲ. ಅದೇ ನಮ್ಮ ಸಂಸ್ಕೃತಿ. ಇಂತಹ ಸನ್ನಿವೇಶದಲ್ಲಿ ನಿರ್ದೇಶಕರಾದ ಚದುರಂಗ ಅವರು ಎಲ್ಲಿಯೂ ಜನಪದ ಚೌಕಟ್ಟನ್ನು ಮೀರುವುದಿಲ್ಲ. ಮಂಗಳೆ ಅಳುತ್ತ ಗಂಡನ ಮನೆ ಸೇರುತ್ತಾಳೆ. ತಾಯಿ ಪಾರ್ವತಿ ಸಹಾ ಮಗಳನ್ನು ಅಳುತ್ತಲೇ ಕಳುಹಿಸಿಕೊಡುತ್ತಾಳೆ. ಹೊರಡುವ ಮುನ್ನ ನಟರಾಜ ಮಂಗಳೆ ಇಬ್ಬರೂ ಕೊಟ್ಟಿಗೆಯಲ್ಲಿ ಸಂಧಿಸುತ್ತಾರೆ. ಇಬ್ಬರಲ್ಲೂ ಮೌನ. ಇಷ್ಟವಿಲ್ಲದಿದ್ದರೂ ಅಪ್ಪನ ಒತ್ತಾಯಕ್ಕೆ ಕಟ್ಟುಬಿದ್ದು ಮಂಗಳೆ ಮದುವೆ ಆಗಿದ್ದಾಳೆ. ಆಗ ನಟರಾಜನಿರಲಿಲ್ಲ. ಈಗ ಬಂದಿದ್ದಾನೆ. ಇಬ್ಬರಿಗೂ ತಮ್ಮ ಕರ್ತವ್ಯಗಳ ಅರಿವಿದೆ. ಹಿಂದೆ ಅವರಿಬ್ಬರೂ ಪ್ರೇಮಿಗಳಿರಬಹುದು ಆದರೆ ಮಂಗಳೆ ಕುತ್ತಿಗೆಯಲ್ಲಿ ಪವಿತ್ರ ತಾಳಿಯಿದೆ. ಅವಳು ಬೇರೊಬ್ಬರ ಸ್ವತ್ತು. ಪರಸ್ತ್ರೀ, ಪರಧನಕ್ಕೆ ಆಸೆ ಪಡುವ ಸಂಸ್ಕೃತಿ ನಮ್ಮದಲ್ಲ.

"ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕು, ಹೊತ್ತಾಗಿ ನೀಡಿದರೂ ಉಣಬೇಕು" ಎಂದು ತಾಯಿ ಮಗಳಿಗೆ ಹೇಳಿಕೊಡುತ್ತಾಳೆ. ತುಟಿಕ್ ಪಿಟಿಕ್ ಅನ್ನದೆ ಹೆಣ್ಣು ಮಕ್ಕಳು ಸಂಸಾರ ಮಾಡಿಕೊಂಡು ಹೋಗುತ್ತಾರೆ. ನಟರಾಜ ಹಾಗೂ ಮಂಗಳೆಯರ ಮನಸ್ಸಿನಲ್ಲಿಯೂ ಅಲ್ಲಿಂದ ಓಡಿ ಹೋಗುವ ವಿಚಾರ ಬರುವುದಿಲ್ಲ.

(ಇಂಥಹ ವಿಚಾರಗಳು ನಮ್ಮ ಇಂದಿನ ಸಿನೆಮಾದಲ್ಲಿ ಕಾಣಸಿಗುತ್ತದೆ. ಇಂತಹ ಸತ್ಯ ಘಟನೆಗಳು ನಮ್ಮ ಸಮಾಜದಲ್ಲಿ ಇಂದಿಗೂ ನಿಜವಾಗಿಯೂ ನಡೆಯುತ್ತಿವೆ). ಪ್ರಿಯಕರನನ್ನು ಕಂಡ ತಕ್ಷಣ ತಮ್ಮ ಪ್ರೀತಿ ಮತ್ತೆ ಚಿಗುರೊಡೆಯುವುದಿಲ್ಲ. ತಾಯಿ ಮನೆ ಗೌರವ ಮುಖ್ಯ. ಅಪಚಾರ ಆದರೆ ತಂದೆ ತಾಯಿ ಎದೆಯೊಡೆದು ಸಾಯುತ್ತಾರೆ. ಇದೇ ವಿಚಾರ ನಮ್ಮ ಹಳ್ಳಿಯ ಹೆಣ್ಣು ಮಕ್ಕಳಲ್ಲಿ ಇರುವುದು.

ಇದೇ ಸರಿ ಎಂದು ನಾನು ಹೇಳುವುದಿಲ್ಲ. ಆದರೆ ಇಂಥಹ ಮೌಲ್ಯಗಳನ್ನೇ ಸರ್ವಮಂಗಳಾ ಸಿನೆಮಾ ಪ್ರತಿನಿಧಿಸುತ್ತದೆ. ಇದು ಕೇವಲ ಜಾನಪದ ಮೌಲ್ಯ ಆಗಿರದೆ ಸಮಾಜದ ಮೌಲ್ಯ. ಕೆಂಡವನ್ನು ಹೆಚ್ಚು ದಿನ ಸೆರಗಿನಲ್ಲಿ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಮನಸ್ಸಿನಲ್ಲಿ ಒಂದು ನಾಲಿಗೆಯಲ್ಲಿ ಒಂದು ಎಂದು ನಡೆಯಲು ಮಂಗಳೆಗೆ ಸಾಧ್ಯವಿಲ್ಲ. ಅವಳು ಗಂಡನ ಮನೆಯಲ್ಲಿ ಅನ್ಯಮನಸ್ಕಳಾಗಿ ಇದ್ದಾಳೆ. ದೇಹ ಗಂಡನಿಗೆ ಒಪ್ಪಿಸಿದರೂ ಮನಸ್ಸು ನಟರಾಜನಿಗೆ ಅರ್ಪಿಸಿದ್ದಾಳೆ. ಅಡಿಗೆ ಮನೆ ಸೌದೆ ಒಲೆ ಬೆಂಕಿ ಉರಿಯುತ್ತಿದೆ. ಅಲ್ಲಿ ಕುಳಿತ ಮಂಗಳೆಯ ಮನಸ್ಸು ಇನ್ನೆಲ್ಲೂ ಇದೆ. ಹಳ್ಳಿ ಮನೆಯ ಅಡುಗೆ ಮನೆ ಹಾಲು ಉಕ್ಕಿ ಹರಿಯುತ್ತದೆ. ಮಂಗಳೆಯ ಗಮನಕ್ಕೆ ಬರುವುದಿಲ್ಲ. ಅಲ್ಲಿಗೆ ಬಂದ ನಾಗತ್ತೆ "ಹಿಂಗಾದ್ರೆ ಚೆನ್ನಾಗಿ ಅಟ್ಟು ಇಕ್ಕುತಾಳೆ (ಅಡಿಗೆ ಮಾಡ್ತಾಳೆ) ಬೇಯದ ಬೇಳೆ ಕಾಳನ್ನು ಯಾಪಾಟಿ (ಎಷ್ಟು) ಬೇಯಿಸಿದೆ ಏನು?" ಎಂದು ಹೀನಾಮಾನವಾಗಿ ಸೊಸೆಯನ್ನು ಬೈಯ್ಯುತ್ತಾಳೆ. ಹೌದು ಬೇಯದ ಬೇಳೆಯನ್ನು ಎಷ್ಟು ಬೇಯಿಸಿದ್ರೂ ಕಟ್ಟು ಬಿಡುವುದಿಲ್ಲ. ಒಪ್ಪದ ಮನಸ್ಸನ್ನು ಎಷ್ಟು ಒಪ್ಪಿಸುವುದು.

"ಹೊಟ್ಟೆ ತುಂಬಿದವರಿಗೆ ಹಿಟ್ಟೇ ಕಲ್ಲು" ಎಂಬಂತೆ ಅಲ್ಲಿ ಮಂಗಳೆಗೆ ಸುಖವಿಲ್ಲ, ಇಲ್ಲಿ ನಟರಾಜನಿಗೆ ನೆಮ್ಮದಿ ಇಲ್ಲ. ಅವನೂ ಕಾಡು, ಮೇಡು, ಕಂಡ ಕಂಡ ಕಡೆ ಅಲೆಯುತ್ತಿದ್ದಾನೆ. ಎಲ್ಲೆಲ್ಲೂ ಅವನಿಗೆ ಮಂಗಳೆ ಕಾಣುತ್ತಾಳೆ. ಹೇಳಲಾಗದೆ ಬಿಡಲಾಗದ ಪರಿಸ್ಥಿತಿ ಮಂಗಳೆಯನ್ನು ಹುಡುಕಿಕೊಂಡು ಅವಳ ಗಂಡನ ಮನೆಗೆ ಹೋಗಲು ಸಾಧ್ಯವೇ. ಮಂಗಳೆ ಗಂಡನ ಮನೆ ಬಿಟ್ಟು ನಟರಾಜನನ್ನು ಹುಡುಕಿಕೊಂಡು ಬರಲು ಸಾಧ್ಯವೆ, ಎರಡೂ ಸಾಧ್ಯವಿಲ್ಲ. ತಮ್ಮ ಈ ರೀತಿ ಬೈರಾಗಿಯಂತೆ ಅಲೆಯುತ್ತಿರುವುದನ್ನು ಯಾವ ಅಕ್ಕ ನೋಡಿಕೊಂಡು ಸುಮ್ಮನೆ ಇರುತ್ತಾಳೆ. ದಿನಾಲೂ ನಟರಾಜನನ್ನು ಮದುವೆ ಮಾಡಿಕೊಳ್ಳಲು ಒತ್ತಾಯಿಸುತ್ತಾಳೆ. ಕೊನೆಗೆ ಒಂದು ದಿನ ನಿನ್ನ ಕಾಲಿಗೆ ಬೀಳ್ತೀನಿ ಒಪ್ಪಿಕೋ ಎಂದು ಕಣ್ಣೀರಿಡುತ್ತಾಳೆ. ಅದನ್ನು ನೋಡಿ ಸಹಿಸಲಾಗದೆ ನಟರಾಜ ಮದುವೆಗೆ ಒಪ್ಪುತ್ತಾನೆ.



ಮದುವೆ ಶಾಸ್ತ್ರ ಹಳೆ ಮೈಸೂರಿನ ಕಡೆಯಂತೆ ನಡೆಯುತ್ತದೆ. ಸಂಪ್ರದಾಯ ದಂತೆ ಮೂರು ಗಂಟು ಹಾಕಿ ಊರವರ ಸಮ್ಮುಖದಲ್ಲಿ ನರಸಕ್ಕನ ಮಗಳು ದುರ್ಗಿಯ ಕೈ ಹಿಡಿಯುತ್ತಾನೆ. ಹೊಸ ಗಂಡು ಹೆಣ್ಣಿಗೆ ಸಾಸಿವೆ ಇಕ್ಕುವ ಶಾಸ್ತ್ರಕ್ಕೆ ಜನ ಎಲ್ಲ ಮಂಗಳೆಗೆ ಹೇಳುತ್ತಾರೆ. ಮಾವನ ಮದುವೆಗೆ ಬರುವ ಮಂಗಳೆ ತನ್ನ ಪ್ರಿಯಕರನ ಮದುವೆಯಲ್ಲಿ ತಾನೇ ಶಾಸ್ತ್ರ ನೆರವೇರಿಸುತ್ತಾಳೆ. ಕೈಯಲ್ಲಿ ಅಕ್ಷತೆ ಹಿಡಿದು ಮಂಡಿ, ಭುಜ ಹಾಗೂ ತಲೆ ಮೇಲೆ ಹಾಕಿ ಕೊನೆಗೆ ತಲೆ ಹಿಂದೆ ಬೆನ್ನಿನ ಮೇಲೆ ಬಿಡುವ ಶಾಸ್ತ್ರ. ನಟರಾಜ ಮದುವೆ

ವರನ ವಸ್ತ್ರದಲ್ಲಿ ಕಂಗೊಳಿಸುತ್ತಾನೆ. ಮೈಸೂರಿನ ಕಡೆ ತರಹ ಹಣೆಗೆ ಬಾಸಿಂಗ ಕೆನ್ನೆಯಲ್ಲಿ ಕಪ್ಪು ಚುಕ್ಕೆ ಗಂಡು ಹೆಣ್ಣಿನ ಸುತ್ತಾ ಊರಿನ ಮುತ್ತೈದೆಯರು ಕುಳಿತಿದ್ದಾರೆ.

ಮದುವೆ ಎಂದರೆ ಹಾಗೆ ಅಲ್ಲಿ ಸಂಭ್ರಮವಿರುತ್ತದೆ. ಹಿಂದಿನ ಕಾಲದಲ್ಲಿ ಒಂದು ವಾರ ಮದುವೆ ಶಾಸ್ತ್ರ ನಡೆಯುತ್ತಿತ್ತಂತೆ. ಹೆಣ್ಣು ಕೇಳಲು ಗಂಡಿನ ಮನೆಯವರು ಹೆಣ್ಣಿನ ಮನೆಗೆ ನೂರೆಂಟು ಬಾರಿ ಬಂದು ೭ ಜೊತೆ ಚಪ್ಪಲಿ ಸವೆಸುತ್ತಿದ್ದರಂತೆ. ಹಾಗೆ ಹೆಣ್ಣನ್ನು ಸಹಾ ಕುಲಗೋತ್ರ ನೋಡಿಯೇ ತರುತ್ತಿದ್ದರು. ಕುಲ ನೀಡಿ ಹೆಣ್ಣು ಕೊಡು ಎನ್ನುತ್ತಿದ್ದರು. ಇತ್ತೀಚೆಗೆ ಮದುವೆ ಒಂದು ದಿನ ಶಾಸ್ತ್ರ ಆಗಿಬಿಟ್ಟಿದೆ. ಅಷ್ಟೇ ಏಕೆ ಕೇವಲ ಹಾರ ಬದಲಾಯಿಸಿಕೊಂಡು ರಿಜಿಸ್ಟ್ರಾರ್‌ನಲ್ಲಿ ಕೇವಲ ಸಹಿ ಮಾಡಿ ಮದುವೆ ಅನ್ನೋ ಶಾಸ್ತ್ರವನ್ನು ೧ ನಿಮಿಷದಲ್ಲಿ ಮುಗಿಸುತ್ತಾರೆ. ಒಂದು ವಾರದ ಮದುವೆ ಒಂದು ನಿಮಿಷ. ಆದರೆ ಹಳ್ಳಿ ಕಡೆ ಇಂತಹ ಮದುವೆಗಳನ್ನು ಯಾರೂ ಒಪ್ಪುವುದಿಲ್ಲ. ಅವರಿಗೆ ಮನೆ ಮುಂದೆ ಚಪ್ಪರ ಹಾಕಬೇಕು. ಓಲಗ ಊದಬೇಕು. ನೆಂಟರು ಬರಬೇಕು, ಊಟ ಉಪಚಾರ ಜೋರಾಗಿ ಇರಬೇಕು. ಹಾಡು ಹಸೆ ಇರಬೇಕು, ಸೋಬಾನೆ ಚಿಕ್ಕಮ್ಮ ಬರಬೇಕು. ಸೋಬಾನೆ ಪದ ಹಾಡಬೇಕು. ಮದುವೆ ಮುಗಿದು ಪ್ರಸ್ಥ ಆಗುವವರೆವಿಗೂ ಒಂದಲ್ಲ ಒಂದು ಶಾಸ್ತ್ರ ಇದ್ದೇ ಇರುತ್ತದೆ. ಇಂತಹ ಮದುವೆಗಳಲ್ಲಿ ಭಾಗವಹಿಸುವುದು ಸಹಾ ಒಂದು ಸಂಭ್ರಮವೇ, ಈಗೆಲ್ಲಾ ಆ ಸಂಭ್ರಮವೆಲ್ಲಿ.

ಮದುವೆ ಆಯಿತು. ಆದರೆ ದುರ್ಗಿ ನಟರಾಜನಿಗೆ ಹೊಂದಾಣಿಕೆ ಇಲ್ಲ . ಊಟದ ವಿಚಾರದಲ್ಲಿ ಗಲಾಟೆ ನಿಂತರೂ ತಪ್ಪು, ಕುಂತರೂ ತಪ್ಪು ಎಂದು ನಟರಾಜ ದುರ್ಗಿಯನ್ನು ಸರಿಯಾಗಿ ನಡೆಸಿಕೊಳ್ಳುವುದಿಲ್ಲ. ಪದೇ ಪದೇ ಹೊಡೆಯುತ್ತಾನೆ. ದುರ್ಗಿ ಹೆಸರಿಗೆ ಅಷ್ಟೆ ದುರ್ಗಿ, ಸ್ವಭಾವದಲ್ಲಿ ಬಹಳ ಒಳ್ಳೆಯ ಹೆಣ್ಣುಮಗಳು. ಗಂಡನ ದಬ್ಬಾಳಿಕೆಯನ್ನು ಸಹಿಸಿಕೊಳ್ಳುತ್ತಾಳೆ. ಇದೊಂದು ದಟ್ಟ ದರಿದ್ರ ಸಂಪ್ರದಾಯ. ಗಂಡನು ತನ್ನ ತೋಳಿನ ಬಲವನ್ನು ಅಬಲೆ ಹೆಣ್ಣು ಮಕ್ಕಳ ಮೇಲೆ ತೀರಿಸಿಕೊಳ್ಳುವುದು. ಬಲಾಬಲಾಗಳಿದ್ದರೆ ಸಮಸಮವಾಗಿ ಗಂಡಸಿನ ಮೇಲೆ ಹೊಡೆದಾಡಿದರೆ ಸರಿ, ಹೆಂಡತಿ ಮೇಲೆ ಕೈ ಮಾಡುವುದು ಅತಿ ಹೀನಾಯ ಸಂಸ್ಕೃತಿ.

"ಒಲ್ಲದ ಗಂಡ ಮೊಸರಿನಲ್ಲಿ ಕಲ್ಲು ಹುಡುಕಿದ" ಎಂಬಂತೆ ನಟರಾಜ ದುರ್ಗಿಯನ್ನು ಹಿಂಸಿಸುತ್ತಾನೆ. ದುರ್ಗಿ ಎಲ್ಲವನ್ನೂ ಸಹಿಸಿಕೊಳ್ಳುತ್ತಾಳೆ. ಮಂಗಳೆಯು ನೆನಪಲ್ಲಿ ದುರ್ಗಿಗೆ ಹೆಂಡತಿಯ ಸ್ಥಾನಮಾನ ನೀಡುವುದಿಲ್ಲ. ಅತ್ತೆ ಮೇಲಿನ ಕೋಪ ಕೊತ್ತೆ ಮೇಲೆ ಎನ್ನುವಂತೆ ದುರ್ಗಿಯನ್ನು ದನಕ್ಕೆ ಚಚ್ಚಿದ ಹಾಗೆ ಚಚ್ಚುತ್ತಾನೆ. ಮಂಗಳೆ ತವರಿಗೆ ಬಂದಿದ್ದಾಳೆ. ಅಲ್ಲಿ ಅಚ್ಚೆ ಹಾಕಿಸಿಕೊಳ್ಳುತ್ತಾಳೆ. ಹಚ್ಚೆ ಹಾಕುವವಳು ನಿನ್ನ ಗಂಡನಿಗೆ "ಒಲೆ ಹಚ್ಚು ಗಿಂಡಿಲಿ ಅಡುಗೆ ಮಾಡಾಕ್ಕವ" ಎಂದು ತಮಾಷೆ ಮಾಡುತ್ತಾಳೆ.

"ಹಂಚಿ ಬುಟ್ಟಿನ ಗರತಿ ಹಾಡ್ಹೋಗು,
ನನ್ನ ಓಣ್ಯಾಗ ಚೊಚ್ಚಲ ಬಸರು ನನ ಮಗಳು
ಚೊಚ್ಚಲು ಬಸರು ನನ ಮಗಳ ಕೈಯಾಗ ಹಂಪಿಯ ತೇರ ಬರಿಬಾರೆ"

ಎನ್ನುವ ಜನಪದ ಗೀತೆಯಿದೆ.

ಹಚ್ಚೆ ಹಾಕಿಸಿಕೊಳ್ಳುವ ಸಂಪ್ರದಾಯ ಮೊದಲಿನಿಂದಲೂ ನಮ್ಮ ಕಡೆ ಇದೆ. ಶಿವ ಪಾರ್ವತಿ, ಹೂ, ಮುಂತಾದ ಚಿತ್ರ , ಬಸವಣ್ಣ, ತಮ್ಮ ಹೆಸರು, ಗಂಡ ಹೆಂಡತಿಯ ಹೆಸರು, ಅಪ್ಪ, ಅಮ್ಮನ ಹೆಸರು, ಹೀಗೆ ಒಂದು ಬಾರಿ ಅಚ್ಚೆ ಹಾಕಿಸಿಕೊಂಡರೆ ಅದು ಜೀವನ ಪರ್ಯಂತ ಹೋಗುವುದಿಲ್ಲ. ಇನ್ನು ಕೆಲವರು ಹಣೆ ಮೇಲೆ ಹುಬ್ಬಿನ ನಡುವೆ ಹಣೆಗಿಡುವ ಜಾಗದಲ್ಲಿ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಸ್ವಂತ ಮಂಗಳೆಯ ತಾಯಿ ಈ ತರಹದ ಹಚ್ಚೆ ಹಾಕಿಸಿಕೊಂಡಿದ್ದಾಳೆ. "ಅಮ್ಮನಂತೆ ಮಗಳು, ನೂಲಿನಂತೆ ಸೀರೆ" ಎಂಬಂತೆ ಮಂಗಳೆ ಸಹಾ ಹಚ್ಚೆ ಹಾಕಿಸಿಕೊಳ್ಳುತ್ತಾಳೆ. ತವರಿನಲ್ಲಿ ಮಂಗಳೆಗೆ ನಟರಾಜನ ವಿಷಯ ತಿಳಿಯುತ್ತದೆ. ಅವರಿಬ್ಬರ ಸಂಸಾರದಲ್ಲಿ ಸುಖ ಇಲ್ಲದೆ ಇರುವ ವಿಚಾರ ತಿಳಿದ ಮಂಗಳೆಗೆ ಅತೀವ ದು:ಖವಾಗುತ್ತದೆ. ಇದನ್ನು ಹೇಗಾದರೂ ಮಾಡಿ ಸರಿಪಡಿಸಬೇಕೆಂದು ನಿಶ್ಚಯಿಸುತ್ತಾಳೆ.

ದುರ್ಗಿ ಒಂದು ದಿನ ಬೆಳಿಗ್ಗೆ ಹಾಲು ಕರೆಯಲು ಮಂಗಳೆಗೆ ಹೇಳುತ್ತಾಳೆ. ನನ್ನ ಕೈಗೆ ಏನೋ ಗಾಯ ಆಗಿದೆ ಎಂದು ಸುಳ್ಳು ನೆಪ ಹೇಳುತ್ತಾಳೆ. ಗಿಂಡಿ ತೆಗೆದುಕೊಂಡ ಹೋದ ಮಂಗಳಿಗೆ ನಟರಾಜ ಸಣ್ಣ ಕಡ್ಡಿ ತೆಗೆದುಕೊಂಡು ಹೊಡೆಯಲು ಮುಂದಾಗುತ್ತಾನೆ. ಅವನು "ಕರ ಕಟ್ಟಿಹಾಕಿ ಎಷ್ಟು ಹೊತ್ತಾಯ್ತು ಈಗ್ಲಾ ಹಾಲು ಕರೆಯೋಕೆ ಬರೋದು" ಎಂದು ತನ್ನ ಹೆಂಡತಿ ದುರ್ಗಿ ಎಂದು ತಿಳಿದು ಹೊಡೆಯಲು ಬಂದಾಗ ಬಂದವಳು ದುರ್ಗಿ ಅಲ್ಲ ಮಂಗಳೆ ಎಂದು ತಿಳಿದಾಗ ಪಶ್ಚಾತ್ತಾಪ ಪಡುತ್ತಾನೆ.



"ದನಕ್ಕೆ ಹೊಡೆಯೋ ಹಾಗೆ ಹೊಡೆದರೆ ಅವಳು ಕರೆಯೋದಾದ್ರೂ ಎಂಗೆ" ಎಂದು ಕೇಳುತ್ತಾಳೆ. ಅವಳಿಗೂ ಗೊತ್ತು ನಟರಾಜನ ದು:ಖ ಆದರೆ ಏನು ಮಾಡುವುದು. "ನಮ್ಮ ಕರ್ಮಕ್ಕೆ ನಾವೇ ಹೊಣೆಎಂದು ಬೇರೆಯವರಲ್ಲ" ಎನ್ನುವ ಕಿವಿಮಾತು ಹೇಳುವ ಮೂಲಕ "ಇದೇ ನಮ್ಮ ಜೀವನ ಇದರಲ್ಲಿ ನಾವಿಬ್ಬರೂ ಹೀಗೆಯೇ ಬದುಕಬೇಕು" ಎಂಬ ಸತ್ಯ ನುಡಿಯುತ್ತಾಳೆ. ಓದು ಬರಹ ಬಲ್ಲದ ಹೆಣ್ಣು ಮಗಳು ಎಷ್ಟು ಬೇಗ ಜೀವನವನ್ನು ಅರ್ಥ ಮಾಡಿಕೊಂಡಳು ಅಲ್ಲವೇ ಇದೇ ಅಲ್ಲವೇ ಜೀವನ ನಮಗೆ ಕಲಿಸಿದ ಪಾಠ. ಮೈಸೂರಿಗೆ ಹೋಗಿ ತಿರುಗಿ ಬಂದ ನಟರಾಜ ಜೀವನವನ್ನು ಸರಿಯಾಗಿ ಗ್ರಹಿಸಲಿಲ್ಲ ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೀತು ಎನ್ನುವ ಹಾಗೆ ನಡೆದುಕೊಳ್ಳುತ್ತಾನೆ. ಕರುವಿಗೆ ನನ್ನ ಮರಿ ಎಂದು ಮುದ್ದು ಮಾಡಿ ಹೋಗುತ್ತಾಳೆ. ಬಹುಷ: ಅಂದಿನಿಂದ ನಟರಾಜನಿಗೆ ಸ್ವಲ್ಪ ಬುದ್ಧಿ ಬಂತು ಅಂತ ಕಾಣುತ್ತದೆ.

ಓದು ಬರಹ ಕಲಿತರೂ ರೈತ ರೈತನೆ. ನಟರಾಜ ಹೊಲ ಉಳುತ್ತಿದ್ದಾನೆ. ಅವನಗೆ ಗೋಲಿಬಾರ್ ನಡೆದ ಸಂಗತಿ ತಿಳಿಯುತ್ತದೆ. ಅವನಲ್ಲಿ ಹೋರಾಟ ಬೀಜಾಂಕುರವಾಗುತ್ತದೆ. ವಿಷಕಂಠ ಕಾಯಿ ಸುಲಿಯುತ್ತ ನಟರಾಜನ ಬಗ್ಗೆ ಮಾತನಾಡುತ್ತಾನೆ. ಅವನಿಗೆ ನಟರಾಜನ ಬಗ್ಗೆ ಮೊದಲಿನಿಂದಲೂ ಅಸಡ್ಡೆ. ಸಮಾಜದಲ್ಲಿ ಸ್ವಾತಂತ್ರ್ಯದ

ಕಿಡಿ ಹತ್ತಿಕೊಂಡಿದೆ. ಗಾಂಧೀಜಿಯವರ ಸ್ವರಾಜ್ಯ ಪಡೆಯುವ ಹೋರಾಟದಲ್ಲಿ ಅವನ ಮನಸ್ಸು ನೆಟ್ಟಿದೆ. ಅವನಿಗೆ ಸಂಸಾರದಲ್ಲಿ ಆಸಕ್ತಿ ಇಲ್ಲ. ಆದರೆ ಮಂಗಳ ತಾನಾಯ್ತು ತನ್ನ ಮನೆ ಆಯ್ತು ಅಂತಾ ಗಂಡನೊಂದಿಗೆ ಸಂಸಾರ ಮಾಡ್ತಾ ಇದ್ದಾಳೆ. ಮಂಗಳೆ ಗಂಡ ಸುಬ್ಬರಾಯಿ ಹೊಲ ಉಳುತ್ತಿದ್ದಾನೆ. ಅಲ್ಲಿಗೆ ಮಂಗಳೆ ಊಟ ಹೊತ್ತುಕೊಂಡು ಬರುತ್ತಾಳೆ. ಗಂಡನಿಗೆ ಊಟ ಬಡಿಸುತ್ತಾಳೆ. ಅವಳೀಗ ಗರ್ಭಿಣಿ. ಅವಳಿಗೆ ಈ ಮಗುವನ್ನು ಹೆರುವುದು ಬೇಡ ಅನಿಸುತ್ತದೆ. ಆದರೆ ಸುಬ್ಬರಾಯಿ ಬಹಳ ಒಳ್ಳೆಯವನು. ಹೆಂಡತಿ ಎಂದರೆ ಪ್ರಾಣ. ಅವಳು ನೊಂದರೆ ತಾನೂ ನೊಂದು ಬಿಡುವ ಹೆಂಡತಿಯನ್ನು ಅಂಗೈಯಲ್ಲಿಟ್ಟು ಸಾಕುತ್ತಾನೆ. ಮಗಿಗೆ ನಮ್ಮ ಅಯ್ಯ (ಅಪ್ಪ)ನ ಹೆಸರು ಇಡೋಣವಾ ಎಂದಾಗ ಮಂಗಳೆ ಸುಮ್ಮನೆ ಅಳುತ್ತಾಳೆ. ಹೋಗ್ಲಿ ಬಿಡು ಅಳಬೇಡ ನಿಮ್ಮ ಅಯ್ಯನ ಹೆಸರನ್ನು ಇಡೋಣ ಎಂದು ಸಮಾಧಾನ ಮಾಡಿ ಮಗುವಿನಂತೆ ಮಲಗಿಸುತ್ತಾನೆ.

ಇಲ್ಲಿ ತಂದೆಗೆ ಅಯ್ಯ ಎನ್ನುವ ಗ್ರಾಮ್ಯದ ಶಬ್ದ ಪ್ರಯೋಗವಾಗಿದೆ. ವಿಷಕಂಠ ತನ್ನ ಮಗಳನ್ನು ನೋಡಲು ಬಂದಿದ್ದಾನೆ. ಭೀಮಸ್ತೆ ಹೆಣ್ಣುಮಗಳಿಗೆ ತಿಂಡಿ ಹಣ್ಣು ತಂದಿದ್ದಾನೆ. ಮರದ ಬುಟ್ಟಿಯಲ್ಲಿ ಪದಾರ್ಥ ಹೊತ್ತು ಬಂದಿದ್ದಾನೆ. ಮೊರದಲ್ಲಿ ಬಾಳೆಹಣ್ಣು ತಂದು ಮಗಳಿಗೆ ಕೊಡಲು ಮುಂದೆ ಹೋದಾಗ ಮಂಗಳೆಗೆ ಮೈ ಇಳಿದ ವಿಷಯ ತಿಳಿಯುತ್ತದೆ. ಗರ್ಭಪಾತ ಎನ್ನುವ ಶಬ್ದಕ್ಕೆ ಇಲ್ಲಿ ಗ್ರಾಮ್ಯ ಭಾಷೆ, ಜನಪದ ಭಾಷೆ, ಆಡುಭಾಷೆ ಮೈ ಇಳಿದಿದೆ ಎಂದು ಬಳಸಲಾಗಿದೆ. ಮಗಳಿಗೆ ಬಟ್ಟೆ ತಂದುಕೊಟ್ಟು ಅಪ್ಪ ಹೊರಡುತ್ತಾನೆ. ತಾನು ತಾತನಾಗುವ ಭಾಗ್ಯ ಹೋಯಿತಲ್ಲ ಎಂದು ಕೊರಗುತ್ತಾನೆ.

ಗರ್ಭಿಣಿ ಮಹಿಳೆಯರಿಗೆ ತವರಿನಿಂದ ತಿಂಡಿ ತೀರ್ಥ, ಸೀರೆ ಕುಪ್ಪಸ, ಬಳೆ ಬಿಚ್ಚೋಲೆ ಬರುವುದು ಸಾಮಾನ್ಯ. ಅದು ಸಂಸಾರ ಬೆಳಗುವ, ವಂಶದ ಕುಡಿಗೆ ಕೊಡುವ ಮಾಡುವ ಉಪಚಾರ. ಮಗಳು ಬಸುರಿ ಆಗಿದ್ದಾಳೆ, ಎಂದು ತಿಳಿದ ತಕ್ಷಣ ತವರು ಮನೆಯಿಂದ ಊಟ ಉಪಚಾರ ಶುರು. ಪಾರ್ವತಿ ಕೆಲಸದಲ್ಲಿ ತೊಡಗಿದ್ದಾಳೆ. ನಟರಾಜ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿ ಹೋರಾಟಗಾರ ಎನಿಸಿಕೊಂಡಿದ್ದಾನೆ. ಪೊಲೀಸರು ಅವನನ್ನು ಹುಡುಕುತ್ತಿದ್ದಾರೆ. ನಟರಾಜನ ಮನೆಗೆ ಬಂದ ಪೊಲೀಸರು ಅವನನ್ನು ಹಿಡಿಯಲು ಬಲು ಪ್ರಯಾಸ ಪಡುತ್ತಾರೆ. ನಟರಾಜ ಹೆಂಗಸರ ಮಧ್ಯೆ ಪೊಲೀಸರಿಗೆ ಚಳ್ಳೆ ಹಣ್ಣು ತಿನ್ನಿಸಿ ಅಲ್ಲಿಂದ ಓಡಿಹೋಗುತ್ತಾನೆ.

ಮುಂದೆ ಊರ ಹಬ್ಬದ ಸನ್ನಿವೇಶ ಚಿತ್ರಿಸಲಾಗಿದೆ. ಮಂಗಳೆ ಕೆಂಡ ಹಾಯಲು ಬರುತ್ತಾಳೆ. ಆಗ ಜನರೆಲ್ಲ ಮಕ್ಕಳಾಗಲಿ ಎಂದು ಕೆಂಡ ಹಾಯಲು ಬಂದವಳೆ ಎಂದು ಮಾತನಾಡಿಕೊಳ್ಳುವುದು ಅವಳ ಕಿವಿಗೂ ಬೀಳುತ್ತದೆ. ಅದನ್ನು ಕೇಳಿದರೂ ಕೇಳದಂತೆ ಅವಳು ಭಕ್ತಿಯಿಂದ ದೇವರ ಕೆಂಡ ಹಾಯುತ್ತಾಳೆ. ಇಲ್ಲಿ ಕಥಾ ನಿರ್ದೇಶಕರು ಊರ ಜಾತ್ರೆ, ದನ, ಜನ, ತೇರು, ಕೆಂಡ ಹಾಯುವ ಗುಂಡಿ ಎಲ್ಲವನ್ನೂ ಅಚ್ಚುಕಟ್ಟಾಗಿ ನಿರ್ಮಾಣ ಮಾಡಿದ್ದಾರೆ. ಆ ಕಾಲಕ್ಕೆ ನಿಜವಾದ ಜಾತ್ರೆಯಲ್ಲಿ ಚಿತ್ರೀಕರಣ ಮಾಡುತ್ತಿದ್ದರು. ಆದರೆ ಈಗ ಇಡೀ ಜಾತ್ರೆಯ ಅದ್ದೂರಿ ನಿರ್ಮಾಣ ಮಾಡುತ್ತಾರೆ. ಆದರೂ ಅದರಲ್ಲಿ ಸಹಜತೆ ಇರುವುದಿಲ್ಲ. ನಿಜವಾದ ಭಕ್ತರಿರುವುದಿಲ್ಲ, ಎಲ್ಲರೂ ಜ್ಯೂನಿಯರ್ ಕಲಾವಿದರು. ಅದು ಅವರ ಹೊಟ್ಟೆಪಾಡು.

ನಟರಾಜ ಮತ್ತೆ ಪೊಲೀಸರ ವಶವಾಗುತ್ತಾನೆ. ಜೈಲು ಸೇರುತ್ತಾನೆ. ಹೆಂಡತಿ ದುರ್ಗಿ ಗರ್ಭಿಣಿ, ಇಂತಹ ಸಮಯದಲ್ಲಿ ಗಂಡ ಜೈಲು ಸೇರಿದ್ದಾನೆ. ಅವನಗೆ ಜೈಲಿನಲ್ಲಿ ಪ್ರೀತಿಯ ಅಜ್ಜಿಯ ನೆನಪು. ಅಜ್ಜಿ ಕತೆ

ಹೇಳುತ್ತಿದ್ದದ್ದು, ತಾನೂ ಮಂಗಳೆ ಜೊತೆಯಾಗಿ ಕಥೇ ಕೇಳಿದ್ದು, ಆಟ ಆಡಿದ್ದು, ಜಗಳ ಆಡಿದ್ದು, ಜೈಲಿನಲ್ಲಿ ಒಂದು ಲೋಟ ಕುಡಿಯಲು ನೀರು ಸಹಾ ಸಿಗುವುದಿಲ್ಲ. ನಟರಾಜನ ಜೀವನವೂ ಬಹಳ ದು:ಖದಿಂದ ಕೂಡಿದೆ. ಒಂದೆಡೆ ಮಂಗಳೆಯ ನೆನಪು ಇನ್ನೊಂದೆಡೆ ಜೈಲು ವಾಸ, ಮನೆಯಲ್ಲಿ ಗರ್ಭಿಣಿ ಹೆಂಡತಿ ಅವನು ಕ್ರಮೇಣ ಖಾಯಿಲೆ ಬೀಳುತ್ತಾನೆ. ಇತ್ತ ಮಗಳಿಗೆ ಮಕ್ಕಳ ಭಾಗ್ಯ ಇಲ್ಲ. ಮೈ ತುಂಬಿದರೂ ಬೇಗನೆ ಮೈ ಇಳಿದು ಹೋಗುತ್ತದೆ. ಅವಳಿಂದ ಈ ವಂಶ ಉದ್ದಾರ ಆಗೊಲ್ಲ ಅಂತ ನಾಗತ್ತೆ ತಮ್ಮ ಸುಬ್ಬರಾಯನನ್ನು ಪೀಡಿಸಿ ಇನ್ನೊಂದು ಮದುವೆಗೆ ಒಪ್ಪಿಸಲು ನೋಡುತ್ತಾಳೆ. ವಿಧವೆ ನಾಗತ್ತೆಗೆ ಗಂಡನ ಪ್ರೇಮ ಏನೆಂದು ಗೊತ್ತಿಲ್ಲ. ಅದೂ ಅಲ್ಲದೆ ನಿರ್ದೇಶಕರು ಸರ್ವಮಂಗಳೆ ಎನ್ನುವ ಹೆಣ್ಣಿನ ಬಾಳನ್ನೆಲ್ಲ ಕಣ್ಣೀರಿನಲ್ಲಿ ತೊಳೆಯಲು ನಿರ್ದರಿಸಿದ್ದಾರೆ. ಇಷ್ಟು ದಿನ ಕಷ್ಟಪಟ್ಟಿದ್ದು ಸಾಲದು ಎಂಬಂತೆ ಮತ್ತಷ್ಟು ಕಷ್ಟ ಮಂಗಳೆಗೆ. ತನ್ನ ಗಂಡನನ್ನೇ ಎರಡನೇ ಮದುವೆಗೆ ಒಪ್ಪಿಸುತ್ತಾಳೆ. ನಕ್ಕರೆ ನಗಲೆವ್ವ ನಗುಮುಖದ ಕ್ಯಾದಿಗೆ  ನಾ ಮುಚ್ಚಿ ಮುಡಿವ ಪರಿಮಳ ಒಂದು ಹೂವ ಅವಳೊಂದು ಬಾರಿ ಮುಡಿಯಲಿ ಎಂದು ಜನಪದರು ಹಾಡಿದ್ದಾರೆ.  ಇಷ್ಟೆಲ್ಲಾ ಆಸ್ತಿ, ಸಂಪಾದಿಸಿರುವುದು ಯಾತಕ್ಕೆ ಯಾವ ಸುಖಕ್ಕೆ?  ನಾಗತ್ತೆ, ಆಗ ಆಗುತ್ತೆ, ಈಗ ಆಗುತ್ತೆ ಅಂತಾ ಕಾದದ್ದು ಆಯ್ತು. ಕೊನೆಗೆ ಪಟ್ಟದಮ್ಮನ ಪೂಜೆನೂ ಮಾಡಿಸಿ ಆಯ್ತು ಎಂದು ದೇವರ ಮೊರೆ ಹೊಕ್ಕಿದ್ದನ್ನು ತಮ್ಮನ ಕಿವಿಗೆ ಈ ವಿಷಯ ಹಾಕಿದ ನಾಗತ್ತೆ ಮಾತನ್ನು ಮಂಗಳೆ ಕಿವಿಯಾರೆ ಕೇಳಿಸಿಕೊಂಡಿದ್ದಳು. ನಾಗತ್ತೆ ಅಡಿಕೆ ಕತ್ತರಿಸುತ್ತಾ ಹೇಳಿದ ಮಾತು ಮಂಗಳೆಯ ಬದುಕನ್ನೆ ಕತ್ತರಿಸಿದ ಹಾಗೆ ಆಗುತ್ತೆ.

ಒಂದೊಂದು ಸಲ ಕಲ್ಪನಾ ಹಳ್ಳಿಯ ಸೊಗಡಿನ ಭಾಷೆ ಮಾತನಾಡಲು ಕಷ್ಟಪಟ್ಟಂತೆ ಕಾಣುತ್ತಾರೆ. ಇಂಗ್ಲೀಷ್ ಕಾನ್ವೆಂಟ್‌ನಲ್ಲಿ ಕಲಿತಿದ್ದು ಕಲ್ಪನಾ ಅಭಿನಯದಲ್ಲಿ ಮುಂದೆ ಆದರೆ ಕೆಲಕಡೆ ಅಪ್ಪಟ ಹಳ್ಳಿ ಭಾಷೆ ಮಾತನಾಡುವಾಗ ಸ್ವಲ್ಪ ಕಷ್ಟ ಪಟ್ಟಿದ್ದಾರೆ. ಗಂಡನನ್ನು ಎರಡನೇ ಮದುವೆ ಒಪ್ಪಿಸುತ್ತಾಳೆ. ಅಕ್ಕನ ಮೇಲೆ ಬಂದ ಕೋಪವನ್ನು ಹಸುವಿಗೆ ಇರುವ ಜೋಳದ ಬೆಂಡನ್ನು ರಪರಪ ಎಂದು ಕತ್ತರಿಸಿ ಹಾಕುವ ಸುಬ್ಬರಾಯ ಅಕ್ಕನನ್ನು ಇದೇ ರೀತಿ ಕತ್ತರಿಸಿ ಹಾಕಿಬಿಡಲೆ ಎನ್ನುವಷ್ಟು ಕೋಪ ತೋರಿಸುತ್ತಾನೆ.  ಮಂಗಳೆ ಅವನ ಕೋಪವನ್ನು ತಣ್ಣಗಾಗಿಸಿ ಗಂಡನ ಮದುವೆಗೆ ಅವನನ್ನು ಒಪ್ಪಿಸುವ ಹೆಂಡತಿ ಆಗುತ್ತಾಳೆ. ಮದುವೆ ಸಮಯದಲ್ಲಿ ತನ್ನ ಕೊರಳ ಪದಕ ತೆಗೆದು ಗಿರಿಜೆಗೆ ಕೊಡುತ್ತಾಳೆ.

ಗಂಡ ಪಂಡಿತರಾಯ ರಾಡೀಯ ಮಾಡಿದರೆ
ಭಂಡ ಮಾಡುವರ ಮಗಳಲ್ಲ
ಕೊರಳಾನ ಗುಂಡು ಬೇಡಿದರೆ ಕೊಡುವೇನೆ.

ಇಂತಹ ಪ್ರಸಂಗಗಳು ನಮ್ಮ ಸಮಾಜದಲ್ಲಿ ನಡೆದದ್ದು ಉಂಟು. ಮೊದಲ ಹೆಂಡತಿಗೆ ಮಕ್ಕಳಾಗದಿದ್ದರೆ ಹೆಂಡತಿ ತೀರಿಕೊಂಡರೆ, ಎರಡನೆ ಮದುವೆಗೆ ಸಮಾಜ ಒತ್ತಾಯಿಸುತ್ತದೆ.  ಸುಬ್ಬರಾಯಿಗೆ ಈ ಮದುವೆ ಸುತಾರಾಂ ಇಷ್ಟವಿಲ್ಲ.  ಬಂದವಳಿಗೆ ಮಕ್ಕಳಾದರೆ ನಿನ್ನ ಗತಿ ಏನು ಎಂದು ಮಂಗಳೆಯನ್ನೇ ಪ್ರಶ್ನಿಸುತ್ತಾನೆ. ಕೈಯಲ್ಲಿ ಹುಲ್ಲು ತುಂಬಿದ ಮಂಕರಿ ಹಿಡಿದ ಮಂಗಳೆ ನಾನೆಲ್ಲಿ ಹೋಗ್ತೀನಿ ಸುಮ್ಮನೆ ಇನ್ನೊಬ್ಬನನ್ನು ಮಾಡಿಕೊಂಡು ಮನೆ ಉದ್ದಾರ ಮಾಡಿಕೊ ಎಂದು ಮಂಕರಿ ಹಿಡಿದು ನಿರ್ಲಿಪ್ತನಾಗಿ ಅಲ್ಲಿಂದ ಹೊರಡುತ್ತಾಳೆ. ಮದುವೆಗೆ ಸಿದ್ಧಳಾದ ಗಿರಿಜಳು ಸ್ವಲ್ಪ ಗಟಾಣಿ ಹೆಂಗಸು. ನಾಗತ್ತೆ ಏನೋ ಬೋಳು, ಬೋಳಾಗಿವೆ ಎಂದು ಮಂಗಳೆಯ ಕತ್ತಿನ ಪದಕ ಚಿನ್ನದ ಸರ ಈಸುಕೊಂಡು ಗಿರಿಜೆಗೆ ತೊಡಿಸುತ್ತಾಳೆ. ಹೆಣ್ಣು ಮಕ್ಕಳಿಗೆ ಚಿನ್ನದ

ಒಡವೆಯ ಮೇಲೆ ಎಷ್ಟೇ ಮೋಹವಿದ್ದರೂ ಮಂಗಳೆ ಸುಮ್ಮನೆ ತೆಗೆದು ಒಡವೆ ಬಿಚ್ಚಿಕೊಡುತ್ತಾಳೆ. ಅವಳಿಗೆ ಒಡವೆ ಮೇಲೆ ಮೋಹವಿಲ್ಲ. ಗಿರಿಜಾ ಸುಬ್ಬರಾಯ ವಿವಾಹ ನಡೆದು ಮಂಗಳೆಯ ಕಷ್ಟದ ದಿನಗಳು ಇನ್ನಷ್ಟು ಆರಂಭವಾಗುತ್ತದೆ.

ತನ್ನ ವಂಶ ಉದ್ದಾರ ಆಗಲಿ ಮಕ್ಕಳು ಮರಿ ಅಂತಾ ಮನೆ ಬೆಳಗಲಿ ಎಂದು ನಮ್ಮ ಹಳ್ಳಿಯ ಹೆಣ್ಣು ಮಕ್ಕಳು ತಮ್ಮ ಜೀವನ ಬಲಿಕೊಟ್ಟು ತನ್ನ ಗಂಡನಿಗೆ ಎರಡನೆಯ ಮದುವೆ ಮಾಡಿಸಿದ್ದು ಉಂಟು. ಮನಸ್ಸಿನಲ್ಲಿ ಕೆಂಡ ಇದ್ದರೂ ಒಳಗುದಿ ಬೇಗೆ ಇದ್ದರೂ ಹೊರಗೆ ನಗುತ್ತ ತಾವೇ ನಿಂತು ಹೆಣ್ಣು ಮಗಳನ್ನು ಸಿಂಗರಿಸಿ ಗಂಡನ ಕೋಣೆಗೆ ಕಳುಹಿಸಿದ ಉದಾಹರಣೆಗಳಿವೆ. ಎರಡನೇ ಹೆಂಡತಿಗೆ ಮಕ್ಕಳಾದ ಮೇಲೆ ತನಗೆ ಮಕ್ಕಳಾಯಿತು ಎಂದು ಸಂತೋಷಪಟ್ಟು ಆ ಮಗುವನ್ನೇ ತನ್ನ ಮಗುವೆಂದು ಸಾಕಿ ಸಲಹಿದ ಉದಾಹರಣೆಗಳಿವೆ. ಅಂತಹ ಹಿರಿಮನಸು ನಮ್ಮ ಹೆಣ್ಣು ಮಕ್ಕಳದ್ದು. ಏಕೆಂದರೆ ತ್ಯಾಗ ಎಂಬುದನ್ನು ಅವರು ಬಾಲ್ಯದಿಂದಲೇ ಕಲಿತು ಬಂದಿರುತ್ತಾರೆ. ತವರು ಮನೆಯಲಿ ತಮ್ಮ ತಂಗಿಯರನ್ನು ಮಕ್ಕಳಂತೆ ಸಾಕಿ, ತಾವು ಹಸಿದು ಮಲಗಿದ್ದರೂ ತಂಗಿ, ತಮ್ಮಂದಿರಿಗೆ ತಿನ್ನಿಸಿದ ಪ್ರೀತಿಯ ಅಕ್ಕಂದಿರಿದ್ದಾರೆ. ಅವರಿಗೆ ಬಾಲ್ಯದಲ್ಲೇ ತಾನು ಉಣದಿದ್ದರೂ ತನಗಿಂತ ಚಿಕ್ಕವರಿಗೆ ಮೊದಲು ನೀಡಬೇಕು ಎಂಬುದು ನಮ್ಮ ಜನಪದರ ನಂಬಿಕೆ. ಅದಕ್ಕೆ ಅಕ್ಕ ತಂಗಿಯರ ನಡುವೆ ಬೆಳೆದ ಹೆಣ್ಣುಮಗಳು, ಸಹನೆ, ಸಂಯಮ, ತ್ಯಾಗದ ಗುಣಗಳನ್ನು ಕಲಿತು ಬಂದಿರುತ್ತಾಳೆ. ಅಂತಹವಳನ್ನೆ ಸೊಸೆಯಾಗಿ ತರುವುದು. ಸವತಿಯ ಮೇಲೆ ಮಂಗಳೆಗೆ ದ್ವೇಷವಿಲ್ಲ. ಆದರೆ ಕೆಲವು ಉದಾಹರಣೆಯಲ್ಲಿ ಸವತಿ ಸವತಿಯರು ಕಿತ್ತಾಡಿಕೊಂಡು, ಜುಟ್ಟು ಹಿಡಿದು ಬಡಿದುಕೊಂಡ ಸಂಗತಿಗಳೂ ಇವೆ. ಮಂಗಳೆ ಭೂಮಿ ತೂಕದ ಹೆಣ್ಣು.

ಹುಲ್ಲಿನ ಬಣವೆಯಲ್ಲಿ ಹುಲ್ಲು ಗಂಟು ಕಟ್ಟುವ ಮಂಗಳೆಯ ಕೈ ಬರಿದಾಗಿದೆ. ಚಿನ್ನದ ಬಳೆಗಳಿಲ್ಲ ಎಂಬ ಸಂಗತಿ ಗಂಡನಗೆ ತಿಳಿಯುತ್ತದೆ. ಅದಕ್ಕೆ ಮಂಗಳೆ ತಲೆ ಮೇಲೆ ಸೆರಗು ಎಳೆದುಕೊಂಡು ಹೋಗುವಾಗ ಈ ಒಡವೆ ವಸ್ತ್ರ ನಮ್ಮ ಜೊತೆಯಲ್ಲಿ ಬರೋಲ್ಲ ಯಾರ ಬಳಿ ಬಳೆ ಇದ್ದರೇನು? ಎಂದು ಹುಲ್ಲು ಗಂಟು ಕಟ್ಟುವಲ್ಲಿ ಮಗ್ನಳಾಗುತ್ತಾಳೆ. ಹಸುವಿಗಾಗಿ ಒಣ ಹುಲ್ಲನ್ನು ಸಂಗ್ರಹಿಸುವ ಹುಲ್ಲಿನ ಬಣವೆಯಲ್ಲಿ ಚಿತ್ರೀಕರಿಸಲಾಗಿದೆ. ಪ್ರತಿಯೊಂದು ಹೊಲದಲ್ಲೂ, ಅಥವಾ ಮನೆ ಮುಂದೆ ಇಂತಹ ಒಂದು ಬಣೆಯನ್ನು ನಾವು ನೋಡಬಹುದು. ಹಸಿ ಹುಲ್ಲು ಸಿಗದಿದ್ದಾಗ ಹಸುವಿಗೆ ಒಣ ಹುಲ್ಲನ್ನೇ ಮೇವಿಗೆ ನೀಡುತ್ತಾರೆ. ನಟರಾಜ ಜೈಲಿನಿಂದ ತಪ್ಪಿಸಿಕೊಳ್ಳುತ್ತಾನೆ.

"ಶ್ರೀ ಪಾರ್ವತಿಯ ಶಿವನ ನೋಡೋಣ ಬನ್ನಿ,
ಗಂಗೆಯ ಜೊತೆಗೂಡಿ ಶಿವನ ನೋಡೋಣ ಬನ್ನಿ"



ಎಂದು ಜಾನಪದ ಗೀತೆ ಹಾಡುತ್ತಾ ಮಂಗಳೆ ರಾಗಿ ಕಲ್ಲಿನಲ್ಲಿ ರಾಗಿ ಬೀಸುತ್ತಿದ್ದಾಳೆ. ೧೯೪೭ ರ ಹಿಂದಿನ ದಿನಗಳು ಆಗಿನ್ನು ವಿದ್ಯುತ್, ಫ್ಲೋರ್‌ಮಿಲ್ಲು, ಏನೂ ಇರಲಿಲ್ಲ. ಹೆಣ್ಣು ಮಕ್ಕಳು ರಾಗಿ ಬೀಸಿ ಹಿಟ್ಟು ತಯಾರಿಸುತ್ತಿದ್ದರು. ಈ ರಾಗಿ ಕಲ್ಲು ಭಾರಿ ಜೋರು. ಇದನ್ನು ಒಂದು

ಸುತ್ತು ತಿರುಗಬೇಕಾದರೆ ರಟ್ಟೆಯಲ್ಲಿ ಬಲ ಇರಬೇಕು. ರಾತ್ರಿಯಿಂದ ಬೆಳಗಾನಾ ರಾಗಿ ಬೀಸುತ್ತಿದ್ದರಂತೆ. ಅದರಿಂದಲೇ ನಮ್ಮ ಹೆಣ್ಣು ಮಕ್ಕಳು ಬಲುಗಟ್ಟಿ, ಬಾವಿಯಿಂದ ನೀರು ಸೇದುತ್ತಿದ್ದರು. ೨-೪ ಮೈಲಿ ಎರಡೆರೆಡು ಕೊಡ ನೀರು ತುಂಬಿ ತರುತ್ತಿದ್ದರು. ಕಾಡಿಗೆ ಹೋಗಿ ಸೌದೆ ಕಡಿದು ಕಟ್ಟಿಗೆ ಹೊರೆ ತಲೆ ಮೇಲೆ, ಕಂಕುಳಲ್ಲಿ ಮಗು ಉರಿಬಿಸಿಲಿನಲ್ಲಿ ನಡೆದುಕೊಂಡು ಬರುತ್ತಿದ್ದರು. ದೈಹಿಕ ಶ್ರಮಕ್ಕೆ ಇವರು ಕೊಟ್ಟ ಮಹತ್ವವೇ ಬೇರೆ. ಆದ್ದರಿಂದಲೇ ಅವರಿಗೆ ಖಾಯಿಲೆ ಕಸಾಲೆ ತುಂಬಾ ಕಮ್ಮಿ. ರೋಗ ನಿಯಂತ್ರಕ ಗುಣ ಹೆಚ್ಚು ಇರುತ್ತಿತ್ತು. ಅತ್ತೆ ಸೊಸೆ ನಾದಿನ ಅಜ್ಜಿ ಎಲ್ಲಾ ಹೆಣ್ಣು ಮಕ್ಕಳು ಕುಳಿತು ರಾಗಿ ಬೀಸುತ್ತ ಮನೆ ಕಷ್ಟ ಸುಖ ಮಾತನಾಡಿಕೊಳ್ಳುತ್ತಿದ್ದರು. ಅವರಲ್ಲಿ ಸ್ನೇಹ ಸೌಹಾರ್ದ ಬೆಳೆಯುತ್ತಿತ್ತು. ಆಹಾರ ಮನೆಯಲ್ಲೇ ತಯಾರಾಗುತ್ತಿತ್ತು. ಜವಾಬ್ದಾರಿ ಬೆಳೆಯುತ್ತಿತ್ತು. ಆದರೆ ಈಗ ಅವೆಲ್ಲಿ ?

ಅದೇನೇ ಇರಲಿ ರಾಗಿ ಬೀಸೋ ಪದ ಎಂದು ಸಮೃದ್ಧ ಸಾಹಿತ್ಯ ನಮ್ಮ ಜನಪದರು ತುಂಬಿ ಕೊಟ್ಟಿದ್ದಾರೆ. ತಮ್ಮ ಶ್ರಮದ ಅರಿವು ಅವರಿಗಾಗದಿರಲೆಂದೇ ಜನಪದರು ವಿಶೇಷವಾಗಿ ಮಹಿಳೆಯೇ, ಮಹಿಳೆಯರಿಂದ, ಮಹಿಳೆಯರಿಗೋಸ್ಕರ ಕಟ್ಟಿಕೊಂಡ ರಾಗಿ ಬೀಸೋ ಪದಗಳು ಅತ್ಯಂತ ಗೇಯತೆಯಿಂದ ಕೂಡಿದೆ. "ರಾಗ ಹಾಕಿ ಹಾಡಿದರೇ ಅವು ಚೆಂದ". ಹೆಚ್.ಎಲ್. ನಾಗೇಗೌಡರು ಬೀಸೋ ಪದಗಳು ಎಂತಲೇ ಇಂಥಹ ಗೀತೆಗಳ ಸಂಗ್ರಹ ಮಾಡಿದ್ದಾರೆ.

ಕನ್ನಡ ನಾಡಿನ ಬಹುತೇಕ ಗ್ರಾಮಗಳಲ್ಲಿ ರಾಗಿಯ ಕಲ್ಲು ಮನೆಯ ದಿನನಿತ್ಯ ಬಳಕೆಯ ಬಹುಮುಖ್ಯ ವಸ್ತು. ರಾಗಿ ಹಿಟ್ಟು, ಜೋಳದ ಹಿಟ್ಟು, ಅಕ್ಕಿ ಹಿಟ್ಟು, ಮೆಣಸಿನ ಪುಡಿ ಮೊದಲಾದವುಗಳನ್ನು ಬೀಸುವಾಗ ಹೆಂಗಸರು ಬೀಸುವ ಪದಗಳನ್ನು ಹಾಡುವುದುಂಟು. ಇದರಿಂದ ಅವರು ಕೆಲಸ ಮಾಡಿ ಮುಗಿಸುವ ತನಕ ಬೇಸರವಾಗುವುದಿಲ್ಲ. ತಡರಾತ್ರಿ ವೇಳೆ ಬೀಸುವಾಗ ನಿದ್ರೆ ಬರದಂತೆ ಈ ಬೀಸುವ ಪದ ತಡೆಯುತ್ತದೆ. ಇಬ್ಬರೂ ಅಥವಾ ಮೂವರು ಸೇರಿಕೊಂಡು ಹಾಡುತ್ತಾ ತಮ್ಮ ಕಾರ್ಯದಲ್ಲಿ ಮಗ್ನರಾಗುತ್ತಾರೆ. ತಂದೆ ತಾಯಿಯರ ಬಗ್ಗೆ, ದೇವರ ಬಗ್ಗೆ, ರಾಮಾಯಣ, ಮಹಾಭಾರತ, ಮಾದೇಶ್ವ, ಎಲ್ಲಮ್ಮ, ಶಿವ ಪಾರ್ವತಿ ಮುಂತಾದ ದೇವರುಗಳ ಬಗ್ಗೆ ಹಾಡುವುದುಂಟು. ಇವು ಸಾಮಾನ್ಯವಾಗಿ ತ್ರಿಪದಿಗಳಿಂದ ಕೂಡಿರುತ್ತವೆ.

"ಕಲ್ಲಮ್ಮ ತಾಯಿ ಮಲ್ಲಮ್ಮ ರಾಗೀಯ
ಜಲ್ಲ ಜಲ್ಲಾನೆ ಉದರವ್ವ, ನಮ್ಮನೆ
ಬೆಲ್ಲ ಆರತಿಯ ಬೆಳಗೇವು ॥"

ಬೀಸುವ ಹಾಡುಗಳು ಬದುಕಿನ ಆಧುನೀಕರಣದಿಂದಾಗಿ ಇಂದು ಅಪರೂಪವಾಗಿದೆ.

ರಾಗಿ ಬೀಸುವ ಮಂಗಳೆ ಜೊತೆ ಗಿರಿಜಾಳೂ ಸೇರಿಕೊಳ್ಳುತ್ತಾಳೆ. ಅಷ್ಟರಲ್ಲಿ ನಾಗತ್ತೆ ತಲೆ ಬಾಚಿ ಹೇನು ಕುಕ್ಕು ಎಂದು ದಬಾಯಿಸಿ ಕರೆಯುತ್ತಾಳೆ. ಬಾಚಣಿಗೆ, ಸೀರಣಿಗೆ ಕೈ ಕನ್ನಡಿ ಮುಂತಾದ ದಿನನಿತ್ಯದ ಸಾಮಾನುಗಳನ್ನು ಬಳಸಲಾಗಿದೆ. ಗಿರಿಜಾ ಬರುವುದು ತಡವಾದಾಗ "ಅವಳಿಗೇನು ದಾಡಿ, ಚೋಟಾಳುವಿಗೆ ಮೋಟಾಳು ಬೇರೆ ಕೇಡು, ಅವಳೊಬ್ಬಳೇ ಬೀಸಲಿ" ಎಂಬಂತೆ ಕೂಗು ಹಾಕುತ್ತಾಳೆ. ಗಿರಿಜಾ ನಾಗತ್ತೆ ಗುಂಪು ಸೇರಿಕೊಳ್ಳುತ್ತಾಳೆ. ಮಂಗಳೆ ಮನೆಯಲ್ಲಿ ಒಂಟಿಯಾಗುತ್ತಾಳೆ. ಗಿರಿಜೆ ಸಹಾ ಹಳ್ಳಿ ಹೆಂಗಸರಂತೆ ಅಲಂಕಾರ ಮಾಡಿಕೊಂಡು

ತಲೆಯಲ್ಲಿ ಹೂ, ಉದ್ದ ಕಾಸಿನ ಸರ, ಮಾಂಗಲ್ಯ ಸರ ಧರಿಸಿದ್ದಾಳೆ. ಮನೆ ಮುಂದೆ ಹುಲ್ಲಿನ ಹೊರೆ ಹೊತ್ತುಹೊರಟ ಮಂಗಳಗೆ "ಅಮ್ಮಣ್ಣಿ ನಟರಾಜ ಜೈಲಿಂದ ತಪ್ಪಿಸಿಕೊಂಡೈತೆ" ಎಂಬ ಆಘಾತಕಾರಿ ಸುದ್ದಿಯನ್ನು ಫಕೀರ ಹೇಳುತ್ತಾನೆ. ಮಂಗಳೆಗೆ ಅಲ್ಪಸ್ವಲ್ಪ ಓದಲು ಬರುತ್ತದೆ. ನಟರಾಜ ಯಾವ ಜೈಲಿನಿಂದ ತಪ್ಪಿಸಿಕೊಂಡು ಬಿಟ್ಟಿದ್ದಾನೆ, ಹಿಡಿದುಕೊಟ್ಟವರಿಗೆ ೫೦೦ ಬಹುಮಾನ ಎಂಬ ಕಳವಳಕಾರಿ ಸುದ್ದಿ ಓದುತ್ತಾಳೆ.

ನಟರಾಜ ಹೊಲಗದ್ದೆ, ತೋಟ, ಬಯಲು, ಗುಡಿಸಲು, ಎಲ್ಲೆಂದರಲ್ಲಿ ಪೊಲೀಸರ ಕಣ್ಣು ತಪ್ಪಿಸಿಕೊಂಡು ಓಡಾಡುತ್ತಿದ್ದಾನೆ. ಪಾತ್ರೆಗೆ ಕಲಾಯಿ ಮಾಡುವ ಸಾಹೇಬ ಸಹ ಅವನು ಓಡಿ ಹೋಗಲು ಸಹಕರಿಸುತ್ತಾನೆ. ಹುಲ್ಲಿನ ಹೊದಿಕೆ ಹಾಕಿರುವ ಮನೆ ಮೇಲೆ ಕುಳಿತು ಅಲ್ಲಿಂದ ಹುಲ್ಲನ್ನು ತನ್ನ ಮೇಲೆ ಹಾಕಿಕೊಂಡು ಪೊಲೀಸರಿಂದ ಬಚಾವಾಗುತ್ತ ಸುಬ್ಬರಾಯ ಊರಿನ ಕಡೆ ಓಡಿ ಬರುತ್ತಾನೆ. ಅಲ್ಲೆ ಬಯಲಲ್ಲೆ ಬಂದು ಹೋರಿ ಕಟ್ಟಲಾಗಿರುತ್ತದೆ. ಅದು ಬಿಡಿಸಿಕೊಂಡು ಅದೇ ದಾರಿಯಲ್ಲಿ ಬರುತ್ತಿದ್ದ ಸುಬ್ಬರಾಯನನ್ನು ಅಟ್ಟಿಸಿಕೊಂಡು ತಿವಿಯಲು ಬರುತ್ತದೆ. ನಟರಾಜನಿಗೆ ಧರ್ಮ ಸಂಕಟ ಬಿಡಿಸಲು ಹೋದರೆ ಪೊಲೀಸರ ಕೈಗೆ ಸಿಕ್ಕಿಹಾಕಿಕೊಳ್ಳುವ ಭಯ, ಆದರೂ ಪ್ರಾಣ ರಕ್ಷಣೆ ಮಾಡಲು ಎಂದು ಮಂಗಳೆಯ ಗಂಡನನ್ನು ರಕ್ಷಿಸುತ್ತಾನೆ. ಬೇಕೆಂದರೆ ಕೊಲ್ಲಲು ಬಿಟ್ಟು ತಾನು ಬಚಾವ್ ಆಗಬಹುದಿತ್ತು. ಅವನಲ್ಲಿ ಮಂಗಳೆ ಬಗ್ಗೆ ಮನುಷ್ಯತ್ವದ ಬಗ್ಗೆ ಪ್ರೀತಿಯಿದೆ. ಮತ್ತೆ ಪೊಲೀಸರ ವಶವಾಗುತ್ತಾನೆ.

ಹೋರಿಯ ಮೂಗುದಾರ ಹಿಡಿದು ಅದರ ಕೋಪ ಅಡಗಿಸಿ ಅದನ್ನು ನೆಲಕ್ಕೆ ಬೀಳಿಸಿ ಸೋಲಿಸುತ್ತಾನೆ. ದೂರಕ್ಕೆ ಅಟ್ಟುತ್ತಾನೆ. ಸುಬ್ಬರಾಯ ಬೇಡಿಕೊಂಡರೂ ಪೊಲೀಸರು ನಟರಾಜನನ್ನು ಬಿಡುವುದಿಲ್ಲ. ಎಂಟು ಎತ್ತುಗಳ ಜೊತೆ ಓಟ, ಕೆಸರುಗದ್ದೆ ಓಟ, ಎಲ್ಲವೂ ಜನಪದ ಕ್ರೀಡೆಯಲ್ಲಿದೆ. ಸಿನೆಮಾದಲ್ಲಿ ಇದನ್ನು ಬಳಸಲಾಗಿದೆ. ಹೆಣ್ಣಿಗೆ ಹೆಣ್ಣೇ ಶತ್ರು ಎಂಬಂತೆ ಮಂಗಳೆಗೆ ಕಾಟ ಶುರು. ದೇವೇರಿ ಎನ್ನುವ ಕೂಲಿಯಾಳು ಹಾಗೂ ಮತ್ತೊಬ್ಬ ಮಂಗಳೆಯ ಮನೆ ವಿಚಾರ ಮಾತನಾಡುತ್ತಾ ದಿನಾ ಅತ್ತೆ ಸೊಸೆಗೆ ಜಗಳ ಅಂತ ಮಾತಿಗೆ ಉಪ್ಪು ಖಾರ ಹಚ್ಚಿ ಮಾತಾಡ್ತಾ ಇದ್ದಾರೆ. ದೇವೀರಿ ಎನ್ನುವ ಹೆಂಗಸಿನ ಜೊತೆ ಅಪರಿಚಿತನೊಬ್ಬ ಮಾತಾಡ್ತಾ ಇದ್ದಾನೆ. ಇದನ್ನು ಕೇಳಿದ ನಾಗತ್ತೆ ಕಳೆ ಕೀಳಲು ಗದ್ದೆ ಕಡೆ ಹೋಗಲಿಲ್ಲವೇ, ಯಾರ ಜೊತೆ ಮಾತಾಡ್ತಾ ಇದೀಯ ಎಂದು ಗದರಿಸಿಕೊಂಡಳು. ಅವನು ಎದ್ದು ಓಡಿ ಹೋಗ್ತಾನೆ. ಇವಳು ಗೌರಿ ಹಸಿನ ಕರ ನಿಂತಿತ್ತು. ನೀನು ಬಂದ ರಭಸಕ್ಕೆ ಥಂಗ್ ಎಂದು ನೆಗೆದು ಓಡೋಯ್ತು , ಈಗ ಓಯ್ತೀನಿ ಎಂದು ಸುಳ್ಳು ಹೇಳುತ್ತಾಳೆ. ತಮ್ಮ ಎಲೆ ಮೇಲೆ ಹಸು ಸತ್ತು ಬಿದ್ದಿದ್ದರೂ ಬೇರೆಯವರ ಎಲೆ ಮೇಲೆ ಸೊಳ್ಳೆ ಓಡಿಸೋ ಜನ ನಮ್ಮವರು.

ಗಿರಿಜೆ ಚೆನ್ನಜ್ಜಿ ಮಾತಾಡ್ತಾ

"ಇಷ್ಟು ದಿನಾ ಎಲ್ಲಿಗೆ ಹೋಗಿದ್ದೆ?"

"ತವರಿಗೆ."

"ಏನು ಸಾರು ಮಾಡಿದ್ದೆ?"

"ಅವರೆಕಾಯಿ ಸಾರು"

ಎಂಬ ಮಾಮೂಲು ವಿಷಯ ತೆಗೆಯುತ್ತಿದ್ದಾಳೆ. ನಟರಾಜನ ಬಗ್ಗೆ ಮಂಗಳೆ ಮಧ್ಯೆ ಅನೈತಿಕ ಸಂಬಂಧ ಇತ್ತು ಎಂದು ಹೇಳುವ ಗಿರಿಜಾಳ ಮಾತು ಕೇಳಿ ತಡೆಯಲಾರದ ಮಂಗಳೆ ಬಂದು ನನಗೆ ವಿವೇಕ ಇಲ್ಲವೇ ?

ಎಂದಾಗ ಗಿರಿಜ ನನಗೆ ವಿವೇಕ ಇಲ್ಲವೇ ಎಂದು ಮೊರ ತೆಗೆದುಕೊಂಡು ಮಂಗಳೆಗೆ ಚೆನ್ನಾಗಿ ಬಾರಿಸುತ್ತಾಳೆ. ಇದೊಂದು ಅತಿರೇಕದ ದೃಶ್ಯ. ಮಂಗಳೆ ಅದನ್ನು ಬಿಡಿಸಿಕೊಳ್ಳಲಾರದೆ ಸುಮ್ಮನೆ ಹೊಡೆಸಿಕೊಳ್ಳುತ್ತಾಳೆ. ಹಿಂಗ್ಯಾಕೆ ಮಾಡ್ತೀಯವ್ವ ಎಂದು ತನ್ನ ಅಸಹಾಯಕತೆ ತೋಡಿಕೊಳ್ಳುವುದು ಬಹುಷಃ ಇಂದಿನ ಕಾಲಕ್ಕೆ ಸೂಕ್ತ ಅಲ್ಲ ಎನ್ನಿಸುತ್ತದೆ. ಏಟಿಗೆ ಎದಿರೇಟು, ಸೇರಿಗೆ ಸವ್ವಾ ಸೇರು ಎನ್ನುವ ಕಾಲದಲ್ಲಿ ಈ ಕಥಾವಸ್ತು ಸ್ವಲ್ಪ ಹಳೆಯದಾಯಿತು. ಹಳ್ಳಿ ಅಟ್ಟಿ ಮನೆ, ಮುಂದೆ ಹುಲ್ಲಿನ ಬಣವೆ, ಎರಡು ಎತ್ತುಗಳನ್ನು ಕಟ್ಟಲಾಗಿದೆ. ಹಳೆ ಹೆಂಚಿನ ಮನೆ ಜುಟ್ಟು ಹಿಡಿದು ಮಂಗಳೆಯನ್ನು ಚೆನ್ನಾಗಿ ಚಚ್ಚುತ್ತಾಳೆ. ಅಲ್ಲಿಗೆ ಬಂದ ಸುಬ್ಬರಾಯಿ ಗಿರಿಜೆಯನ್ನು ತಡೆದು ಅವಳಿಗೆ ಒದ್ದು ಬುದ್ಧಿ ಕಲಿಸುತ್ತಾನೆ. "ಹೆಣ್ಣು ಮಕ್ಕಳನ್ನು ಕಾಲಿನಿಂದ ಒದೆಯುವುದು ಸರಿಯಲ್ಲ." "ಆ ರಕ್ಕಸೀನೇ ಕಟ್ಟಿಕೋ" ಎಂದು ಬೈತಾಳೆ. ಅದಕ್ಕೆ ಸುಬ್ಬರಾಯಿ "ಈ ರಕ್ಕಸಿ ಮಾತು ಕೇಳಿ ಮಂಗಳನಾ ಏಕೆ ಕಣ್ಣೀರಲ್ಲಿ ಕೈ ತೊಳಿತೀರಿ ಅವಳಂಥ ಗುಣವಂತೆ ಯಾವ ಕಾಶ್ಮೀರದಲ್ಲೂ ಸಿಕ್ಕೊಕ್ಕಿಲ್ಲ" ಎಂದು "ಇವತ್ತು ಮೊದಲು ನಾಳೆ ಕೊನೆ ಇನ್ನೊಂದು ಕಿತ ಹಿಂಗೆ ಮಾಡೀಯಾ" ಎಂದು ಬೈಯುತ್ತಾನೆ. ಗಿರಿಜೆ ತನ್ನ ಪ್ರಾಣ ಕಳೆದುಕೊಳ್ಳುತ್ತೇನೆ ಎಂದಾಗ ನಾಗತ್ತೆ ತಾನು ಎಲ್ಲ ಸರಿಪಡಿಸ್ತೀನಿ ಎಂದು ಭರವಸೆ ಕೊಟ್ಟು ಒಂದು ಆಲೋಚನೆಗೆ ಬರುತ್ತಾಳೆ. ಸುಬ್ಬರಾಯನ ಸ್ಥಿತಿ ಹೇಗಿದೆ ಎಂದರೆ "ಇಬ್ಬರು ಹೆಂಡಿರ ಕಾಟ ಇರುಳು ತಿಗಣೆಯ ಕಾಟ" ಎನ್ನುವಂತೆ ಆಗಿದೆ. ಮಾತಿಗೆ ತಪ್ಪಿ ಮನೆ ಮಕ್ಕಳನ್ನು ಸವತಿ ಎಂದು ಮಂಗಳೆ ಗದರಿಕೊಳ್ಳುತ್ತಿಲ್ಲ.

ಆವತ್ತು ರಾತ್ರಿ ಜೋರಾದ ಮಳೆ. ಸುಬ್ಬರಾಯ ಲಾಟೀನು ಹಿಡಿದು ಮನೆಗೆ ಬರ್ತಾನೆ. ಮನೆಯ ಒಂದು ಗೋಡೆಯ ಮೇಲೆ ಜಿಂಕೆಯ ಮುಖ, ಹಳ್ಳಿ ಮನೆ ಪರಿಕರಗಳು ಜೋಡಿಸಲಾಗಿದೆ. ಇನ್ನೊಂದು ಕೋಣೆಯಲ್ಲಿ ದೇವೀರಿ ಮಂಗಳೆಗೆ ಬಿಸಿನೀರ ಶಾಖ ಕೊಡ್ತ ಇದ್ದಾಳೆ. ಇವನು ಬಂದ ತಕ್ಷಣ ತಲೆ ಮೇಲೆ ಸೆರಗು



ಹೊದ್ದು ಅವಳು ಹೊರಡುತ್ತಾಳೆ. "ಪಂಡರೀನಾಥ, ರಾಮ, ಅಮ್ಮ" ಎಂದು ಜ್ವರದಿಂದ ಮಂಗಳೆ ನರಳುತ್ತಿದ್ದಾಳೆ. ಇಂದು ಮಧ್ಯಾಹ್ನ ಗಿರಿಜಾಳ ಕೈ ಏಟು ತಿಂದು ಅವಳ ಮೈಮೇಲೆ ಬರೆ ಬಿದ್ದಿದೆ. ಅದಕ್ಕಿಂತ ತನ್ನ ನಟರಾಜನ ಬಗ್ಗೆ ಆಡಿದ ಕ್ಷುಲ್ಲಕ ಮಾತು ಅವಳ ಕಿವಿ ಕೊರೆಯುತ್ತಿದೆ. ಬಟ್ಟೆಗೆ ಬಿಸಿ ಉಪ್ಪನ್ನು ಸುರಿದು ಏಟು ಬಿದ್ದ ಕಡೆ ಬಿಸಿ ಶಾಖ ಕೊಡ್ತಾನೆ. ಬಹಳ ಸೂಕ್ಷ್ಮ ದೃಶ್ಯ. ಅಲ್ಲೆ ಕೋಣೆಯಲ್ಲೆ ಮಣ್ಣಿನ ಮಡಿಕೆ ಜೋಡಿಸಲಾಗಿದೆ. ದೊಡ್ಡ ಗಿಂಡಿ, ಗೋಡಗೆ ಕೆಳಭಾಗದಲ್ಲಿ ಸುಂದರ ವಿನ್ಯಾಸದಲ್ಲಿ ರಂಗೋಲಿ ಬಿಡಿಸಲಾಗಿದೆ. ಒಂದು ಕೋಲಿನ ಮೇಲೆ ಮರದ ತುಂಡಿನ ಮೇಲೆ ಸೀಮೆಎಣ್ಣೆ ದೀಪ ಹಚ್ಚಿ ಇಡಲಾಗಿದೆ. ಮೂಲೆಯಲ್ಲಿ ಮೊಸರು ಕಡೆಯುವ ಮಂತು ಇಡಲಾಗಿದೆ. ಮಂಗಳೆ ಕಣ್ಣೀರು ಸುರಿಸುತ್ತ ದೇವೀರಿ ಯಾಕಮ್ಮ ನಿಲ್ಲಿಸ್ದೆ ಎಂದು ದೀನವಾಗಿ ನುಡಿಯುತ್ತ ಹಿಂದೆ ತಿರುಗಿ ನೋಡಿದಾಗ ಅಲ್ಲಿ ಗಂಡ ಬಂದು ಕುಂತಿದ್ದಾನೆ. ತಕ್ಷಣ ಬೆನ್ನು ಮುಚ್ಚಿಕೊಳ್ಳುವ ಹೆಂಡತಿ ಗಂಡನ ಎದುರು ಮೈ ತೋರದ ಗರತಿ ಎನ್ನಿಸಿಕೊಳ್ಳುತ್ತಾಳೆ. ತಲೆ ಮೇಲೆ ಕೈ ಹೊತ್ತು ಮಂಗಳೆ ಎರಡು

ಮೂಗಿಗೆ ಮೂಗುತಿ ಧರಿಸಿದ್ದಾಳೆ. ಮಧ್ಯೆ ಬೈತಲೆ ತೆಗೆದಿದೆ. ಗಂಡ ಹೆಂಡಿರ ಮಧ್ಯೆ ಮನಕರಗುವ ನಾಲ್ಕು ಮಾತು. "ಬ್ಯಾಡ ಅಂದ್ರೂ ಎರಡನೇ ಮದುವೆ ಮಾಡಿಸ್ದೆ" ಎಂದು ಪಶ್ಚಾತ್ತಾಪ ಪಡುತ್ತಾನೆ. ಗಿರಿಜೆ ಇನ್ನೂ ಚಿಕ್ಕವಳು ೪ ದಿನಾ ಕಳೆದ್ರೆ ತಾನಾಗಿ ಎಲ್ಲಾ ತಿಳಿದುಕೊಳ್ಳುತ್ತಾಳೆ. ಎಂದು ಗಿರಿಜೆ ಪರವಾಗಿ ಮಾತಡ್ತಾಳೆ. ಕೋನೆಯ ಬಾಗಿಲು ತೆರೆದಿದೆ. ಅಲ್ಲಿ ಗಿರಿಜೆ, ನಾಗತ್ತೆ ನಿಶ್ಯಬ್ದವಾಗಿ ಬಂದು ಗಂಡ ಹೆಂಡಿರ ಮಾತು ಕೇಳಿಸಿಕೊಳ್ತಾರೆ.

"ತಾಟಗಿತ್ತಿ ತಾರಾದೇವಿಗೆ ಕಷ್ಟ ಸುಖ ತಿಳಿಯೋದು ಆ ಒನಕೇಗೆ ಕೋಡು ಮೂಡೂದು ಎರಡೂ ಒಂದೇ ಸರಿ" ಎಂದು ಸುಬ್ಬರಾಯಿ ಹೇಳಿದ್ದನ್ನು ಕೇಳಿಸಿಕೊಂಡ ನಾಗತ್ತೆ ಮಂಗಳೆಗೆ ಕೊಬ್ಬು ಇಳಿಸ್ತೀನಿ ಎಂದು ಹೊಸ ಯೋಜನೆ ಹಾಕಿಕೊಳ್ಳುತ್ತಾರೆ. ಅವರು ಹೋದ ನಂತರವೂ ಮೂಟೆಗಳ ಸಾಲು ಸರಿಯಾಗಿ ಕಾಣ್ತಾ ಇವೆ. ಹಳ್ಳಿ ಮನೆಯಲ್ಲಿ ಧಾನ್ಯಕ್ಕೇನು ಕೊರತೆ ಇಲ್ಲ. ರಾಗಿ ಚೀಲ ಪೇರಿಸಿ ಇಟ್ಟಿರುತ್ತಾರೆ. ಸುಬ್ಬರಾಯಿ ಮನೆಯಲ್ಲಿಯೂ ಸಹಾ. ನಿಜವಾದ ದನದ ದನದ ಜಾತ್ರೆ, ಜನ ತುಂಬ ತುಳುಕಾಡ್ತಾ ಇದ್ದಾರೆ. ಹುಣಸೂರು ಸಂತೆಯಲ್ಲಿ ಕೊಳ್ಳುವವರು, ಮಾರುವವರು, ಟೆಂಟ್ ಹಾಕಿಕೊಂಡು ಕಂಡ ಕಂಡಲ್ಲಿ ಕುಳಿತಿದ್ದಾರೆ. ಕೈಯಲ್ಲಿ



ಮಂಕರಿ ಹಿಡಿದು ನಾಗತ್ತೆ, ಗಿರಿಜಾ ಸಂತೆಗೆ ಬರುತ್ತಾರೆ. ಆಗದವರಿಗೆ ಊಟದಲ್ಲಿ ಮದ್ದು ಇಡುವ ಕುತಂತ್ರ ಹಳೆಯದು ಅದೊಂದು ಸತ್ತ ಪ್ರಾಣಿಯ ಚರ್ಮ, ದೊಣ್ಣೆಕೇತ ಎಂಬ ಪ್ರಾಣಿಯನ್ನು ಕೊಂದು ಅದರ ಚರ್ಮವನ್ನು ತುಂಡು ತುಂಡಾಗಿ ಮಾಡಿ ಅದನ್ನು ಕಟ್ಟಿಗೆ ಒಲೆಯ ಹಿಂದೆ ೧೫-೨೦ ದಿನ ಸುಡುತ್ತಾರೆ. ಅದರ ಒಂದು ಸಣ್ಣ ತುಂಡನ್ನು ಊಟದಲ್ಲಿ ಮಿಶ್ರಣ ಮಾಡಿ ಆಗದವರಿಗೆ ಬಡಿಸುತ್ತಾರೆ. ಅದನ್ನು ತಿಂದ ವ್ಯಕ್ತಿಗೆ ಆ ಚರ್ಮ ಜೀರ್ಣವಾಗದೆ ಹೊಟ್ಟೆಯಲ್ಲಿ ಉಳಿಯುತ್ತದೆ. ಅದರೆ ಮೇಲೆ ಕೂದಲು ಬೆಳೆಯುತ್ತದೆ. ಆ ಕಾಲಕ್ಕೆ ಸ್ಕ್ಯಾನಿಂಗ್ ಇರಲಿಲ್ಲವಲ್ಲ. ತಿಂದ ವ್ಯಕ್ತಿಗೆ ಯಾವಾಗಲೂ ಹೊಟ್ಟೆ ನೋವು ಊಟ ಸೇರಲ್ಲ. ದಿನೇ ದಿನೇ ಕೃಶವಾಗಿ ರೋಗಿಯಾಗಿ ಒಂದು ದಿನ ವಿಪರೀತಕ್ಕೆ ಹೋಗಿ ಸತ್ತೇ ಹೋಗುತ್ತಾನೆ. ಇದೊಂದು ಸ್ಲೋ ಪಾಯಿಸನ್ ಇದ್ದ ಹಾಗೆ. ನಾಗತ್ತೆ ಚೌಕುಳಿ ಸೀರೆ, ಹುಬ್ಬಳ್ಳಿ ಕುಪ್ಪಸ ತೊಟ್ಟಿದ್ದಾಳೆ. ಹುಣಸೂರು ಜಾತ್ರೆಗೆ ಬರುತ್ತಾರೆ. ಅಕ್ಕಪಕ್ಕ ಹೆಂಗಸರು ಮದ್ದು ಕೊಡ್ತಾರಂತೆ ಎಂದು ತನ್ನಲ್ಲಿದ್ದ ವಸ್ತುಕೊಟ್ಟು ಮದ್ದು ಖರೀದಿಸುತ್ತಾರೆ. ಅದನ್ನು ದೇವೀರಿ ಗಮನಿಸುತ್ತಾಳೆ.

ಇಂಥಹ ಮದ್ದು ಕೊಡೋದು ಎಂಥಹ ದರಿದ್ರ ಬುದ್ಧಿ ಎಂದರೆ ಮದ್ದು ಕೊಡುವ ಚಟ ಕಲಿತರೆ ಯಾರಿಗಾದ್ರೂ ಮದ್ದು ಇಡಬೇಕು ಎಂದು ಮನಸ್ಸು ತುಡಿಯುತ್ತದಂತೆ. ಯಾರೂ ಸಿಗದಿದ್ರೆ ಕೊನೆಗೆ ತನ್ನ ಗಂಡನಿಗೆ ಮದ್ದು ಇಟ್ಟು ಕೊನೆಗೆ ತಾನೇ ಮದ್ದು ತೆಗೀತಾರಂತೆ ಹೆಂಗಸರು ಅಂತಾ ನಾನು ಕೇಳಿದ್ದೆ. ನಮ್ಮ ಜನ ಬಹಳ ಬುದ್ಧಿವಂತರು. ಕತ್ತಿಯಿಂದ ಆಗದ ಕೆಲಸನವನ್ನು ಕೊತ್ತಿಯಿಂದಲೇ, ಕುತಂತ್ರದಿಂದಲೋ ನೆರವೇರಿಸಿಕೊಂಡು ಬಿಡುತ್ತಾರೆ. ಮದ್ದು ಇಟ್ಟು ರಾಜ ಮಹಾರಾಜರನ್ನೇ ಸಾಯಿಸಿದ ಉದಾಹರಣೆಗಳಿವೆ. ದ್ವೇಷ ಅಂಥದ್ದು.

ಜಾನಪದ ವೈದ್ಯ ಇದೆ ಅಂದರೆ ಜನಪದ ಮೋಸವೂ ಇರಬೇಕಲ್ಲ. ಮದ್ದು ಇಡುವುದು ಮದ್ದು ತೆಗೆಯುವುದು ಕೆಲವು ಸಾಬರ ಹೆಂಗಸರಲ್ಲೂ ಉಂಟು.

ಮನೆಗೆ ಬಂದ ಗಿರಿಜೆ ಮದ್ದು ಮುಚ್ಚಿಡುತ್ತಾಳೆ. ಅಲ್ಲೆ ಬಾಗಿಲ ಮೇಲೆ ಒಂದು ಮರದ ತಟ್ಟೆ, ಅದರ ಮೇಲೆ ಒಂದು ಮರದ ಹೂಬುಟ್ಟಿ, ಸೇರು ಇಟ್ಟಿದ್ದಾರೆ. ಹಿಂದಿನ ಬಾಗಿಲಿನಿಂದ ಒಂದು ಒನಕೆ, ಈಚಲು ಚಾಪೆ, ಮಡಿಚಿಟ್ಟಿರುವ ದೃಶ್ಯ ಕಾಣುತ್ತಿದೆ. ಕುಡಿಕೆ ನೇತು ಹಾಕಲಾಗಿದೆ. ಸಣ್ಣದೊಂದು ಡಬ್ಬಿಯಲ್ಲಿ ಮದ್ದು ಮುಚ್ಚಿಡುತ್ತಾರೆ. ನಾಳೆ ಕಡುಬಿನಲ್ಲಿ ಇಟ್ಟು ಕೊಟ್ಟರೆ ಆಯಿತು ಎಂದು ಮಾತಾಡಿಕೊಳ್ತಾರೆ. ಇನ್ನು ಅವಳ ಕತೆ ಮುಗೀತು. ಹೊಲಕ್ಕೆ ಹೋಗಿ ಬರುವ ಎಂದು ಹೊರಡುತ್ತಾರೆ.

ದೇವೀರಿ ಅದನ್ನು ತೆಗೆದು ಅದರಲ್ಲಿ ಬೇರೊಂದು ಒಳ್ಳೆಯ ಪದಾರ್ಥ ಇಟ್ಟು "ತನ್ನ ಕೆಲಸ ಸಾಧಿಸೋಕ್ಕೆ ವಿಷ ಹಾಕ್ಕೋಕ್ಕು ಹೇಸಲ್ವಲ್ಲಾ ಮನುಷ್ಯ" ಎಂದು ಬೈಯುತ್ತಾ ಒಳ್ಳೆ ಕೆಲಸ ಮಾಡ್ತಾಳೆ. ಮಂಗಳೆಯನ್ನು ಉಳಿಸ್ತಾಳೆ. ಅತ್ತೆ ಸೊಸೆ ಬಹಳ ಸಿಂಗಾರ ಮಾಡಿಕೊಂಡು ಪಗಡೆ ಆಡ್ತಾ ಇದ್ದಾರೆ. ಅದೇ ದೂರದ ಮೂಲೆಯಲ್ಲಿ ಸಾಧಾರಣ ಬಟ್ಟೆಯಲ್ಲಿ ದೇವೀರಿ ರಾಗಿ ಬೀಸ್ತಾ ಇದ್ದಾಳೆ. ಅಲ್ಲೆ ಪಕ್ಕದಲ್ಲಿ ಮಂಕರಿ ಇದೆ. ಬೀಸಿದ ಹಿಟ್ಟನ್ನು ಮಂಕರಿಯಲ್ಲಿ ಜಲಿಸುತ್ತಾಳೆ. ಅಷ್ಟು ಹೊತ್ತಿಗೆ ಹಿತ್ತಾಳೆ ಬಿಂದಿಗೆಗಳಲ್ಲಿ ನೀರು ತಂದ ಮಂಗಳೆ ಬಾಗಿಲು ಹೊಸಲು ದಾಟಿ ಒಳಬರುತ್ತಾಳೆ. ಒಳಕೋಣೆಗೆ ಹೋಗಲು ತಲೆ ತಗ್ಗಿಸಿ ಹೋಗುತ್ತಾಳೆ. ಮನೆ ಬಾಗಿಲು ಯಾವಾಗಲೂ ಚಿಕ್ಕದು ಇರುತ್ತದೆ. ಏಕೆಂದರೆ ಅಹಂಕಾರ ಬಿಟ್ಟು ನಾನು ಚಿಕ್ಕವನು ಎಂದು ತಲೆ ಬಾಗಿ ಬರಬೇಕೆಂದು ಹಳ್ಳಿ ಮನೆ ಕಡೆ ಬಾಗಿಲ ಹೊಸ್ತಿಲನ್ನು ಕುಳ್ಳಗೆ ಮಾಡಿರ್ತಾರೆ. ತಲೆಯ ಮೇಲೆ ಸಿಂಬಿ ಇದ್ದು ಅದರ ಮೇಲೆ ಒಂದು ಹಿತ್ತಾಳೆ ಬಿಂದಿಗೆ , ಸೊಂಟಕ್ಕೆ ಇನ್ನೊಂದು ಬಿಂದಿಗೆ ನೀರು ತರುವ ಮಂಗಳೆಯನ್ನು ನೋಡಿ ಅತ್ತೆ ಸೊಸೆ ಆಶ್ಚರ್ಯ ಪಡುತ್ತಾರೆ.



"ಇದೇನು ಚೋಜುಗ (ಆಶ್ಚರ್ಯ) ನಾವು ಕೊಟ್ಟ ಮದ್ದು ತಗೊಂಡ್ರು ಏನು ಮಾಡಲಿಲ್ಲವಲ್ಲ" ಎಂದು ಹೊಟ್ಟೆ ಉರಿದುಕೊಳ್ಳುತ್ತಾರೆ. ಅದಕ್ಕೆ ನಾಗತ್ತೆ ಅದ್ಯಾವ ಮಂತ್ರ ಹಾಕವಳೋ ಮರಿಜೋಳಿಗೆ ಕಡ್ಡಿ ಇಕ್ಕವಳೋ ಕಾಣೆ ಎನ್ನುತ್ತಾಳೆ. ಮಂಗಳೆಗೆ ಏನೂ ಆಗಲಿಲ್ಲವಲ್ಲ ಎಂಬ ಕೋಪ ಇಬ್ಬರಿಗೂ. ನೀರಿನ ಬಿಂದಿಗೆಯೊಂದಿಗೆ ಹೊರ ಬಂದ ಮಂಗಳೆಗೆ ಒಂದು ಸಂತಸದ ಸುದ್ದಿ ದುರ್ಗಿಗೆ ಗಂಡು ಮಗು. ಈ ಸುದ್ದಿ ಕೇಳಿ ಕುಣಿಯಲಾಗದ ಸಂತಸ ಪಡುವ ಮಂಗಳೆಯನ್ನು ಅತ್ತೆ ಸೊಸೆ ಆಡಿಕೊಂಡು ನಗುತ್ತಾರೆ. ಸಿಹಿ ಸುದ್ದಿ ಹೇಳಿದ ಬಾಯಿಗೆ ಬೆಲ್ಲ ತಂದು ಹಾಕ್ತೀನಿ ಎಂದು ಸಡಗರ ಪಡ್ತಾಳೆ.

"ಇನ್ನೊಬ್ಬರಿಗೆ ಮಗು ಆಯ್ತು ಅಂತಾ ಇಷ್ಟು ಸಂತಸ ಪಡೋದಕ್ಕೆ ದೇವರು ಅದಕ್ಕೆ ಇಷ್ಟು ಅಡಗಿಸಿಟ್ಟಿರುವುದು" ಎಂದು ವ್ಯಂಗ್ಯ ಆಡುತ್ತಾರೆ. ಸದ್ಯ ನಟರಾಜನ ಸಂಸಾರ ಒಂದು ನೆಲೆಯಾಗಿ ನಿಂತಿದೆ. ನನ್ನ ನೆನಪಲ್ಲಿ ನಟರಾಜ ತನ್ನ ಸಂಸಾರ ಮರೆಯುತ್ತಾನೆ ಎಂಬ ಕೊರಗು ನೀಗುತ್ತದೆ. ಯಾರಿಗೆ ಏನೇ ಆದರೂ ಮಂಗಳೆಯ ಸಂತಸ ಇಮ್ಮಡಿಗೊಳ್ಳುತ್ತದೆ. ದುರ್ಗಿ ಬೆತ್ತದ ತೊಟ್ಟಿಲಿನಲ್ಲಿ ಮಗುವನ್ನು ತೂಗಿ ಮಲಗಿಸುತ್ತಿದ್ದಾಳೆ. ಜೋ ಜೋ

ಸದ್ಗುಣ ನಿರ್ಮಲ ಚಂದ್ರ ಜೋ ಜೋ, ಜಗಜ್ಯೋತಿ ಬಸವರಾಜೇಂದ್ರ ಜೋ ಎಂದು ಹಾಡುತ್ತಾಳೆ. ಬಿಗಿಯಾಗಿ ನಾಲ್ಕು ಕಡೆ ಬಿಳಿ ಹಗ್ಗಗಳಿಂದ ಬಿಗಿದ ತೊಟ್ಟಿಲು. ಮಗುವಿಗೆ ಕುಲಾವಿ ತೊಡಿಸಿದೆ. ಹಣೆಗೆ, ಕೆನ್ನೆಗೆ ಕಪ್ಪು ಬೊಟ್ಟು ಇಟ್ಟಿದ್ದಾರೆ. ಮಧ್ಯದಲ್ಲಿ ಎರಡು ಗೆಜ್ಜೆ ಕಟ್ಟಿದ್ದಾರೆ, ತೂಗಿದಾಗ ಅದು ಘಲ್ ಎನ್ನುತ್ತದೆ. ಶಿವನ ಬಗ್ಗೆ ಜನಪದರು ಹಾಡುತ್ತಾರೆ.

ಶಿವ ಶಿವನೆಂದರೆ ನೆಡಿಲೆಲ್ಲ ಬಯಲಾಗಿ
ಕಲ್ಲ ಬಂದೆರಗಿ ಕಡೆಗಾಗಿ । ಎಲೆ ಮನವೆ ।
ಶಿವನೆಂಬ ಶಬ್ದ ಬಿಡಬ್ಯಾಡ ॥

ಪಾರ್ವತಿಗೆ ನಾಲ್ಕು ತಿಂಗಳು ಅವಳು ಕೋಣೆ ಸೇರಿದ್ದಾಳೆ. ದುರ್ಗಿ ಬಾಣಂತಿ, ಮೈಸೂರಿನ ಮಾವ ಒಂಟಿ, ಈ ಸಮಯದಲ್ಲಿ ಒಂದು ಆಘಾತದ ಸುದ್ದಿ ನಟರಾಜನನ್ನು ಜೈಲಿನಿಂದ ಬಿಟ್ಟರೂ ಸರ್ಕಾರಿ ಆಸ್ಪತ್ರೆಯಲ್ಲಿ ಕ್ಷಯರೋಗ ತಗುಲಿ ಅನಾರೋಗ್ಯದಿಂದ ನರಳುತ್ತಿದ್ದಾನೆ. ಚಿಕ್ಕಯ್ಯ (ಚಿಕ್ಕಪ್ಪ) ಮೈಸೂರು ಮಾವ ಬಂದು ಎಲ್ಲರಿಗೂ ಸುದ್ದಿ ತಿಳಿಸುತ್ತಾನೆ. ನಟರಾಜನ ಶುಶ್ರೂಷೆಗೆ ಯಾರೂ ಇಲ್ಲದ ಕಾರಣ ಸುಬ್ಬರಾಯಿ ಮಂಗಳೆಯನ್ನು ಕಳಿಸಿಕೊಡಲು ಒಪ್ಪುತ್ತಾನೆ.

ಮಂಗಳೆ ಮಾವನ ಶುಶ್ರೂಷೆಗೆ ನಿಲ್ಲುತ್ತಾಳೆ. ಸ್ವಲ್ಪ ದಿನದ ನಂತರ ದುರ್ಗಿ ಮಗುವನ್ನು ಎತ್ತಿಕೊಂಡು ಬಂದು ನಟರಾಜನಿಗೆ ತೋರಿಸುತ್ತಾಳೆ. ಇದೇ ಒಂದು ಸಂತಸದ ಸುದ್ದಿ ನಟರಾಜನಗೆ ಆದರೆ ಹೆರಿಗೆ ಸಮಯದಲ್ಲಿ ಪಾರ್ವತಿ ಹಾಗೂ ಅವಳ ಹಸುಗೂಸು ತೀರಿಹೋದ ಸುದ್ದಿಯನ್ನು ಭಾವ ವಿಷಕಂಠ ಹೇಳಿ ಮತ್ತಷ್ಟು ದು:ಖ ಹೆಚ್ಚುತ್ತದೆ. ನಟರಾಜನ ರೋಗ ಉಲ್ಬಣಿಸಿ ಅವನು ರಕ್ತ ವಾಂತಿ ಮಾಡಿಕೊಂಡಾಗಲೂ ಮಂಗಳೆ ಅಸಹ್ಯಿಸಿಕೊಳ್ಳದೇ ಅವನನ್ನು ಬದುಕಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಆದರೆ ಅವನು ನಿಧನನಾಗುತ್ತಾನೆ. ಸಾಯುವ ಸಮಯದಲ್ಲಿ ಅವನಗೆ ಬಾಲ್ಯದ ಆಟ ನೆನಪಾಗುತ್ತದೆ. ಮಂಗಳೆಯನ್ನು ಹಿಡಿಯುವ ಪಡೆಯುವ ಅವನ ಕೊನೆ ಇಚ್ಛೆ ನೆರವೇರುವುದಿಲ್ಲ.

ಇದರಿಂದ ಮನ ನೊಂದ ಮಂಗಳೆ ಆತ್ಮಹತ್ಯೆಗೆ ಪ್ರಯತ್ನಿಸಿದಾಗ ದುರ್ಗಿ, ಮಾವ ಅವಳನ್ನು ತಡೆದು ಮಗುವನ್ನು ಅವಳ ಮಡಿಲಿಗೆ ಹಾಕುತ್ತಾರೆ. ಮಗುವಿನ ಲಾಲನೆಯಲ್ಲಿ ಸ್ವಲ್ಪ ವರ್ಷ ಕಳೆಯುತ್ತಾಳೆ. ತೊಡೆ ಮೇಲೆ ಹಸುಗೂಸನ್ನು ಮಕ್ಕಡೆ ಹಾಕಿಕೊಂಡು ಸ್ನಾನ ಮಾಡಿಸಿ ಮಗುವನ್ನು ಬೆಳೆಸುವಲ್ಲಿ ತನ್ನ ನೋವನ್ನು ಮರೆಯುತ್ತಾಳೆ. ಸುಂದರ ಶಿಶುಗೀತೆ.



"ಉಂಡಾಡಬಹುದು ಓಡಿ ಬಾ ಎನ್ನಪ್ಪ ಊಟಕ್ಕೆ ಬಾರೊ ಕೃಷ್ಣಪ್ಪ" ಮಗುವಿನಲ್ಲಿ ಪುಟ್ಟ ಕೃಷ್ಣನನ್ನು ಕಾಣುತ್ತಾಳೆ. ತಾನು ಬಂಜೆ ಎಂಬ ನೋವನ್ನು ಮರೆಯುತ್ತಾಳೆ. ಮನೆಯಲ್ಲಿ ಲಕ್ಷ್ಮಿ, ಸರಸ್ವತಿ, ಶಿವನ ಪೋಟೋಗಳಿವೆ. ಮಧ್ಯದಲ್ಲಿ ಹಗ್ಗಕ್ಕೆ ಕಟ್ಟಿರುವ ಜೋಕಾಲಿ ಅಲ್ಲೆ ದೇವರ ಗೂಡು.

ಭತ್ತ ಕುಟ್ಟುವ ಒನಕೆ ಎಲ್ಲವೂ ಚೊಕ್ಕಟವಾಗಿ ಜೋಡಿಸಿದೆ. ಮಗುವಿಗೂ ನಟರಾಜ ಎಂದೇ ಹೆಸರು ಇಟ್ಟಿದ್ದಾರೆ. ತಾಯಿಯ ಪ್ರೀತಿಯನ್ನೆಲ್ಲಾ ಧಾರೆ ಎರೆದ ಮಗುವನ್ನು ಬೆಳೆಸುತ್ತಿದ್ದಾಳೆ. ಇದನ್ನು ಕಂಡು ಗಿರಿಜಾ ಮತ್ತೆ ಹೊಟ್ಟೆಕಿಚ್ಚು ಪಡುತ್ತಿದ್ದಾಳೆ. ಒಂದು ಸಣ್ಣ ಕೊಳದ ಮಾದರಿಯ ಕೆರೆ, ಕಲ್ಲು ಕಟ್ಟಿದ ತೆರೆ ಮುಂದೆ ಮಂಗಳೆ ಕಾಲು ತೊಳೆದುಕೊಳ್ಳುತ್ತಿದ್ದಾಳೆ. "ಹೊಗೆ ಸೊಪ್ಪು ಬೆಳೆದು ನಾನು ಕಂಗಾಲಾಗಿದ್ದೆ, ನೀನು ಬಾಳೆ ತೋಟ ಮಾಡಿ ಸರಿಯಾಗಿ ನೀರು ಹಾಕಿ ಬೆಳೆ ಕೈಗೆ ಬರೋ ಹಾಗೆ ಮಾಡಿದೆ. ನನ್ನನ್ನು ಉಳಿಸ್ಕೊಂಡೆ" ಎಂದು ಗಂಡ ಮೆಚ್ಚುಗೆಯ ಮಾತಾಡುತ್ತಾನೆ. "ಕೊಳ್ಳೆಗಾಲದಿಂದ ತಂದ ರೇಷ್ಮೆ ಸೀರೆ ಏನಾಯ್ತು" ಎನ್ನುತ್ತಾನೆ.

ರೇಷ್ಮೆ ಸೀರೆಯನ್ನು ದುರ್ಗಿ ಎರಡು ಮೂರು ಕಡೆ ಹರಿದು ಹಾಕಿದ ಸುದ್ದಿ ಮಂಗಳೆಯಿಂದ ಅವನಿಗೆ ತಿಳಿಯುತ್ತದೆ. ಕೋಪ ಮಾಡಿಕೊಳ್ಳಬೇಡಿ, ಹೊಡೆಯ ಬೇಡಿ ಎಂದು ಬೇಡಿಕೊಳ್ಳುತ್ತಾಳೆ. ತನ್ನ ಹೆಂಡತಿಯನ್ನು ಸರಿಯಾಗಿ ನೋಡಿ ಕೊಳ್ಳುತ್ತಿಲ್ಲ ಎನ್ನುವ ದುಃಖ ಸುಬ್ಬರಾಯನಿಗೆ ಆದರೆ ಅದ್ಯಾವುದೂ ಮಂಗಳೆಗೆ ಬೇಕಿಲ್ಲ. ಕೇವಲ ದುಡಿಮೆಯಲ್ಲಿ ತನ್ನ ಜೀವನ ತಳ್ಳುತ್ತಿದ್ದಾಳೆ. ನಮ್ಮ ಹೆಣ್ಣು ಮಕ್ಕಳು ದುಡಿಮೆಯಲ್ಲಿ ಎತ್ತಿದ ಕೈ, ಮನೆ ಗದ್ದೆ ತೋಟ, ಹೊಲ ಎಂದು ಸದಾ ಕಾಲ ದುಡಿಯುತ್ತಲೇ ಇರುತ್ತಾರೆ. ಅವರಿಗೆ ಗಂಡ ಮನೆ ಮಕ್ಕಳೇ ಸರ್ವಸ್ವ ತನ್ನ ಸುಖ ಏನೂ ಬೇಕಾಗಿಲ್ಲ. ಹೆಣ್ಣು ಮಕ್ಕಳ ದುಡಿಮೆಯಿಂದಲೇ ಮನೆಯಲ್ಲಿ ಎರಡು ಹೊತ್ತು ಗಂಜಿ ಕಾಣಿಸುವುದು. ಅವರು ಹೊಲದಿಂದ ಬಂದು ಅಡಿಗೆ ಮನೆ ಹೊಕ್ಕು ಬೆಂಕಿ ಒಲೆ ಹಚ್ಚಿದರೆ ಎಲ್ಲರ ಹೊಟ್ಟೆ ತಣ್ಣಗಾಗುವುದು. ಇಂಥಹ ಗೃಹಿಣಿಯನ್ನು ಜನಪದರು ಹಾಡಿ ಹೊಗಳಿದ್ದಾರೆ. ಹೆಣ್ಣು ಮನೆಯ ಕಣ್ಣು, ಮನೆಗೆ ಮಹಾಲಕ್ಷ್ಮಿ ಎಂದೆಲ್ಲಾ ವರ್ಣಿಸುತ್ತಾರೆ. ಹೆಣ್ಣು ಮಕ್ಕಳು ಕಾಲಿನಲ್ಲಿ ಬೆಳ್ಳಿ ಗೆಜ್ಜೆ ಧರಿಸಿ ಓಡಾಡುತ್ತಾ ಇದ್ದರೆ ಲಕ್ಷ್ಮಿ ಮನೆಗೆ ಬರುತ್ತಾಳೆ ಎಂಬ ನಂಬಿಕೆ. ಕೈ ಬಳೆ ಘಲ ಘಲ ಎನ್ನುತ್ತಿದ್ದರೆ, ಮನೆಯೆಲ್ಲ ಝುಣ ಝುಣ. ಹೆಣ್ಣು ಇಲ್ಲದ ಮನೆ ಮಸಣ. ಹೆಣ್ಣಿಲ್ಲದ ಮನೆ ಗಂಜಿಕ್ಕೂ ದಿಕ್ಕಿಲ್ಲ ಎನ್ನುವಂತೆ ಆ ಮನೆ ಬಿಕೋ ಎನ್ನುತ್ತದೆ. ಸಂಜೆಯಾದರೆ ಅಲ್ಲಿ ದೀಪ ಹಚ್ಚೋರಿಲ್ಲ. ಬೆಳಗಾದರೆ ಸಗಣಿ ನೀರು ಹಾಕಿ ಸಾರಿಸಿ ರಂಗೋಲಿ ಹಾಕೋರಿಲ್ಲ. ಬಾಗಿಲಿಗೆ ಹರಿಶಿನ ಕುಂಕುಮ ಹಚ್ಚಿ ಹೂ ಕಡ್ಡಿಗಳಿಂದ ಪೂಜೆ ಮಾಡೋರಿಲ್ಲ. ಮನೆ ಮುಂದೆ ತುಳಸಿ ಕಟ್ಟೆಯಲ್ಲಿ ದೀಪ ಹಚ್ಚೋರಿಲ್ಲ. ಅದೂ ಒಂದು ಮನೆಯೇ ಮನೆಯಲ್ಲಿ ಹೆಣ್ಣು ಮಕ್ಕಳು ಇರಬೇಕು . ಗೃಹಿಣಿ ಸದಾಕಾಲ ನಗುತ್ತಿರಬೇಕು. ಗೃಹಿಣಿ ಗೃಹಮುಚ್ಯತೇ ಎನ್ನೋದು ಸತ್ಯ. ಎಂತಹ ಬಡತನ ಇದ್ದರೂ ತಮ್ಮ ಮಗುವಿಗೆ ಅವಳು ಹಾಡುವುದೆಂದರೆ

'ಮುರುಕ ತೊಟ್ಟಿಲಿಗೊಂದು ಹರಕು ಬಾಪಿಯ ಹಾಸಿ
ಅಂಚು ಪಾಪನ ಮಲಗಿಸಿ । ಅದರಂತೆ
ಕಲಕೇತ ಹಾಡಿ ಹಿಗ್ಯಾಳು॥'

ಚಿತ್ರದ ಅಂತಿಮ ದೃಶ್ಯ ಮಂಗಳೆ ಮಗುವನ್ನು ದುರ್ಗಿ ಹತ್ತಿರ ಬಿಟ್ಟು ಅಟ್ಟಿಗೆ ಬಂದ ಮೇಲೆ ಎರಿಯಪ್ಪನನ್ನು ಮಾಡಿಕೊಡ್ತೀನಿ. ಈಗ ಹೊಲಕ್ಕೆ ಹೋಗಿ ಬರ್ತಿನಿ ಎಂದು ಹೇಳಿ ಹೊಲಕ್ಕೆ ಮಂಗಳೆ ಹೊರಡುತ್ತಾಳೆ.

ಮಾರ್ಗಮಧ್ಯದಲ್ಲಿಯೇ ಆಕಸ್ಮಿಕವಾಗಿ ಕಾರ್ಮೋಡ ಅಬ್ಬರಿಸುತ್ತದೆ. ಗುಡುಗು ಸಿಡಿಲು ಬಡಿಯುತ್ತದೆ. ಆಕಾಶವೇ ಕಳಚಿ ಬಿದ್ದಂತೆ ಮಳೆ ಅಬ್ಬರಿಸುತ್ತದೆ. ಅದರ ಸೂಚನೆ ತಿಳಿದ ಮಂಗಳೆ ಹೊಲಕ್ಕೆ ಓಡುತ್ತಾಳೆ. ಅಲ್ಲಿ ರಾಗಿ ಫಸಲನ್ನು ಕಟಾವು ಮಾಡಿ ಗುಡ್ಡೆ ಹಾಕಿದ್ದಾರೆ. ಮಾರನೆಯ ದಿನ ಅದನ್ನು ಒಗ್ಗೂಡಿಸಿ ಕಟ್ಟಿ ಮನೆಗೆ



ತರಬೇಕಿತ್ತು. ಮಂಗಳೆ ಒಬ್ಬಳೇ ಕುಯಿದು ಹಾಕಿರುವ ರಾಗಿ ಫಸಲನ್ನು ಒಗ್ಗೂಡಿಸಿ ಹರಿದು ಹೋಗದಂತೆ ಗುಡ್ಡೆ ಹಾಕುತ್ತಾಳೆ. ಮಳೆ ಉಯ್ದು ರಾಗಿ ತೊನೆ ಮಳೆಯಲ್ಲಿ ಕೊಚ್ಚಿ ಹೋಗಬಹುದಿತ್ತು. ಅದಕ್ಕೆ ಮುನ್ನ ಇಡೀ ಹೊಲದ ರಾಗಿ ಗುಡ್ಡೆ ಹಾಕುತ್ತಾಳೆ. ೧೦ ಜನ ಮಾಡೋ ಕೆಲಸವನ್ನು ಒಬ್ಬಳೇ ಮಾಡಿ ಇಡೀ ರಾಗಿ ಫಸಲು ಮಳೆ ನೀರಲ್ಲಿ ಕೊಚ್ಚಿಹೋಗುವುದನ್ನು ತಪ್ಪಿಸುತ್ತಾಳೆ. ಆಳು ಹೊನ್ನನ ಜೊತೆ ಬಂದ ಪುಟ್ಟರಾಯಿ ಆಶ್ಚರ್ಯದಿಂದ ನೊಡ್ತಾನೆ. ಅಲ್ಲೆ ದುಡಿದು, ದಣಿದು, ಕುಸಿದು ಬಿದ್ದಿದ್ದ ಮಂಗಳೆಯನ್ನು ಕಂಡು ದು:ಖಿಸಿ ಅಲ್ಲಿಂದ ಮನೆಗೆ ಕರೆದೊಯ್ಯುತ್ತಾನೆ.

ಆರ್‍ಯಾಣ ದಡವ್ಯಾಗ ಯಾರಾಣೆ ಕೂಡಲೆವ್ವ
ಸೂರ್ಯ ನಿನ್ನಾಣೆ ಶಿವನಾಣೆ । ಕೊಟ್ಟೀನ
ಆರ್‍ಯಾಣ ಗೆದ್ದು ಬರುವೇನೆ॥ ದುಡಿಮೆಗೆ ಒಲಿಸಿಕೊಂಡ ಜೀತ ॥

ಇಲ್ಲಿಯೂ ಸಹ ಮನೆತನಕ್ಕೆ ತನ್ನ ಗಂಡನ ಆಸ್ತಿ ಉಳಿಸಲು ತನ್ನ ಪ್ರಾಣವನ್ನು ಬಲಿಕೊಟ್ಟ ತ್ಯಾಗಿ ಗರತಿ ಎನಿಸಿಕೊಳ್ಳುತ್ತಾಳೆ. ಗಂಡನ ಸುಖ ದು:ಖದಲ್ಲೇ ತನ್ನ ಸುಖ ದು:ಖವಿದೆ ಎಂದು ಅಂತಹ ಹೆಣ್ಣುಮಗಳು ಅಂದು ರಾತ್ರಿ ಇಡೀ ರಾಗಿ ಫಸಲನ್ನು ಉಳಿಸಿ ಇಡೀ ವರ್ಷದ ಬೆಳೆ ನೀರಿನ ಪಾಲಾಗದಂತೆ ತಡೆಯುತ್ತಾಳೆ. ಹಿಂದಿನ ಜನ್ಮದ ಋಣ ತೀರಿಸುತ್ತಾಳೆ. ಗಂಡ ಸಾಲಗಾರ ಆಗದಂತೆ ಕಾಪಾಡುತ್ತಾಳೆ.

(ನಿಜಜೀವನದಲ್ಲಿ ಸಂಸಾರ ಗಂಡ ಮಗು ತಾಯ್ತನಕ್ಕಾಗಿ ಹಂಬಲಿಸಿ ಏನೂ ಸಿಗದೇ ಅತ್ಯಂತ ಕೆಟ್ಟ ದಿನಗಳನ್ನು ಕಂಡು, ಅದರಲ್ಲಿಯೂ ತನ್ನ ಜೀವನದ ಕೊನೆಯ ದಿನಗಳನ್ನು ಅವಮಾನಗಳಿಂದ ಕಳೆದು, ಪತ್ನಿಯ ಸ್ಥಾನಮಾನ ಸಿಗದೆ, ತಾಯ್ತನದ ಸುಖ ಅನುಭವಿಸದೆ ಸಮಾಜದ ನಿಂದನೆಗೆ ಬಲಿಯಾದ ಹೆಣ್ಣುಮಗಳು ಕಲ್ಪನಾ ಅವರ ಜೀವನವೇ ಗೋಳು. ಅವರು ಬಯಸಿದ್ದು ಅವರಿಗೆ ಏನೂ ಸಿಗಲಿಲ್ಲ. ಕೇವಲ ಸಿನೆಮಾದಲ್ಲಿ ಕಂಡ ಯಶಸ್ಸು ಮಾತ್ರ ಬೆಳ್ಳಿ ಪರದೆಯಲ್ಲಿ ಸುಖಿ ಹೊರಗೆ ದು:ಖಿ. ಹೆಣ್ಣಿಗೆ ಕೇವಲ ಹಣ ಗೌರವ ಯಶಸ್ಸು ಸಿಕ್ಕರೆ ಸಾಲದು, ಸುಖ, ಶಾಂತಿ, ಗೌರವ ಸಿಗಬೇಕು. ಅದಿಲ್ಲದೆ ಅವರು ಪಟ್ಟ ಪಾಡು ನಿಜಕ್ಕೂ ಕಣ್ಣೀರು ತರುವಂಥಹುದು. ಯಾವುದಕ್ಕಾಗಿಯೋ ಹಂಬಲಿಸಿ ಏನೂ ಸಿಗದೆ ಕೊನೆ ಉಸಿರು ಎಳೆದ ಕಲ್ಪನಾ ಅವರ ಬದುಕು ಎಲ್ಲಾ ಸಿನೆಮಾ ಕಲಾವಿದೆಯರಿಗೂ ಪಾಠ ಅದನ್ನು ನೋಡಿ ಕಲಿಯಬೇಕಾಗಿದೆ.)

ಅಂದಿನಿಂದ ಮಂಗಳೆ ಖಾಯಿಲೆ ಬೀಳುತ್ತಾಳೆ. ಕಾಲಿಗೆ ಮುಳ್ಳು ಚುಚ್ಚಿ ಅಪಾರ ನೋವಾಗಿ, ಬೆನ್ನ ಹುರಿ ನೋವು, ಆಯಾಸ, ಜ್ವರಗಳಿಂದ ಹೊರಬರಲಾರದೆ ಹಾಸಿಗೆ ಹಿಡಿಯುತ್ತಾಳೆ. ಆಗಲೂ ಸುಬ್ಬರಾಯಿ "ಮಾದೇಶ್ವರನ ಪ್ರಸಾದ ತಿನ್ನು, ಬೇಗ ವಾಸಿ ಆಗ್ತೀಯಾ" ಎಂದೇ ಆಶ್ವಾಸನೆ ತುಂಬುತ್ತಾನೆ. "ಧೂಳ್ತ ಇಟ್ಕೊಂಡ್ರೆ ನಿನ್ನ

ಖಾಯಿಲೆ ಎಲ್ಲಾ ಲಾಜಾದೊಳಗೆ ಮಂಗಳಮಾಯಾ ಆಗ್ತಾ ಹೋಗುತ್ತದೆ" ಎಂದು ದೇವರ ಪ್ರಸಾದ ಕೊಡುತ್ತಾನೆ. ಆಗ ಇಂಥಹವೇ ದೇವರ ಪ್ರಸಾದ ಬಹಳ ಪ್ರಯೋಜನ ನೀಡಿದ್ದು ಉಂಟು, ಆದರೆ ಹಲವರು ಪ್ರಾಣ ತೆತ್ತಿದ್ದು ಉಂಟು. ದೇವರ ಪ್ರಸಾದದ ಮೇಲೆ ಹಳ್ಳಿಗರಿಗೆ ಅಪಾರ ನಂಬಿಕೆ. ಅದರಲ್ಲೂ ಕೆ.ಆರ್. ಪೇಟೆ, ಮೈಸೂರು, ಕೊಳ್ಳೇಗಾಲದ ಜನರಿಗೆ ಮಲೆ ಮಹದೇಶ್ವರ ಎಂದರೆ ಬಲು ಭಕ್ತಿ. ಈ ಸಲ ಮಾದೇಶ್ವರನೂ ಮಂಗಳೆಯ ಕೈ ಬಿಡುತ್ತಾನೆ. ತಾನೂ ತೀರಿಕೊಂಡರೆ ಕಲ್ಲ ಹಳ್ಳಿಯ ಕಾಡಿನಲ್ಲಿ ಮಣ್ಣು ಮಾಡಿ ಎಂದು ತನ್ನ ಕೊನೆ ಆಸೆ ತಿಳಿಸುತ್ತಾಳೆ. ಗಿರಿಜೆಗೆ ೩ ತಿಂಗಳು ಅವಳನ್ನು ಚೆನ್ನಾಗಿ ನೋಡಿಕೋ, ಅವಳಿಂದಲೇ ಈ ಹಟ್ಟಿ ಬೆಳೆಯೋದು ಎಂದು ಬೇಡಿಕೊಳ್ಳುತ್ತಾಳೆ.

ಜೀವನದ ಕೊನೆ ದಿನ ಎಣಿಸುವ ಜನರ ಕೊನೆ ಆಸೆಯನ್ನು ಬಹಳ ನಿಷ್ಠೆಯಿಂದ ನೆರವೇರಿಸಿ ಕೊಡಲಾಗುವುದು. ಪಂಡಿತರ ಔಷಧಿಯಿಂದ ಯಾವ ಉಪಯೋಗವೂ ಇಲ್ಲ. ಹುಣಸೂರು ಆಸ್ಪತ್ರೆಗೆ ಕರೆದುಕೊಂಡು ಹೋಗು ಎಂದು ನಾಗತ್ತೆ ಹೇಳುತ್ತಾಳೆ. ಆ ಸಮಯಕ್ಕೆ ಗಿರಿಜಳ ಮತ್ತು ನಾಗತ್ತೆಯ ಮನಸ್ಸು ಪರಿವರ್ತನೆ ಆಗಿರುತ್ತದೆ. ಎತ್ತಿನ ಗಾಡಿಯಲ್ಲಿ ಮಂಗಳೆಯನ್ನು ಹಾಕಿಕೊಂಡು ಹುಣಸೂರಿಗೆ ಹೊರಡುವ ಸುಬ್ಬರಾಯನನ್ನು ಎಲ್ಲರೂ ಬೀಳ್ಕೊಡುತ್ತಾರೆ. ಗಿರಿಜಾ ನಾಗತ್ತೆ ಕಣ್ಣೀರಿಡುತ್ತಾರೆ.

ದಾರಿಯಲ್ಲಿ ಮಂಗಳೆಗೆ ನಟರಾಜವನ್ನು ಕಂಡ ಅನುಭವ "ಬದುಕಿದ್ದಾಗ ಒಂದಾಗಲಿಲ್ಲ, ಬಾ ಆಲಂಗಿಸಿಕೋ, ಸತ್ತ ಮೇಲಾದ್ರೂ ಒಂದಾಗೋಣ" ಎಂಬಂತೆ ಕರೆದಂತೆ ಆಗುತ್ತದೆ. ಅವನ ಕರೆಗೆ ಓಗೊಟ್ಟು ಮಂಗಳೆ ಪ್ರಾಣ ಬಿಡುತ್ತಾಳೆ. ಇದೊಂದು ಮೂಢನಂಬಿಕೆ. ಸತ್ತಮೇಲೆ ಯಾರೂ ಒಂದಾಗುವುದಿಲ್ಲ. ಸ್ವರ್ಗ ನರಕಗಳಿಲ್ಲ. ಇಲ್ಲೇ ಅವೆಲ್ಲವೂ ಇವೆ. ಕೊನೆ ಗಳಿಗೆಯಲ್ಲಿ ಮಂಗಳೆ ವಿಲವಿಲನೆ ಒದ್ದಾಡಿ ರೋಗದಿಂದ ಮಾನಸಿಕ ಯಾತನೆಯಿಂದ ನರಳಿ ಸಾಯುತ್ತಾಳೆ. ಇದನ್ನು ತಿಳಿಯದ ಗಂಡನಿಂಗೆ ಬೇರೆ ಅಟ್ಟಿ ಮಾಡಿ ಇಡ್ತೀನಿ ಇದೊಂದು ಕಿತ ಸರಿಯಾಗಿ ಬಂದು ಬಿಡು ಎಂದೆಲ್ಲಾ ಹೇಳುತ್ತಾ ಗಾಡಿ ಹೊಡೆಯುತ್ತಿದ್ದಾನೆ. ಹಿಂತಿರುಗಿ ಬಂದು ನೋಡಿದಾಗ ಮಂಗಳೆ ಇಲ್ಲ, ತೀವ್ರ ದು:ಖದಿಂದ ರೋದಿಸುತ್ತಾನೆ.

"ಜವರಾಯಿ ಬಂದರೆ ಬರಿಕೈಲಿ ಬರಲಿಲ್ಲ,
ಕುಡಕೋಲು, ಕೊಡಲಿ ಒಂದು ಹೆಗಲೇರಿ ಜವರಾಯ
ಬಳ್ಳೀನೂ ಮರಾನೇ ಕಡಿ ಬಂದ
ಬೆಲೆಯುಳ್ಳ ಕಾಡಿ ಬಂದ ಜವರಾಯ
ಎಂದೂ ಬಾರದ ಜವರಾಯಿ ಇಂದಾಕೆ ಬಂದಿರಿ,
ಕೊಳ್ಳಲು ನೇರ ಕೂಡಿ ನೇರ ಜಮಾ ಬಂದಂತೆ
ಕೂರೋಕೋ ಬಂದಿಲ್ಲ, ನಿಲ್ಲೋಕೋ ಬಂದಿಲ್ಲ.
ಗಂಡನ ಮಡದಿ ನಡಿ ಮುಂದೆ ನಡಿ ಮುಂದೆ"

ಎಂದು ಸಾಹೇಬ ಹಾಡುತ್ತಾ ಹೋಗುತ್ತಿದ್ದಾನೆ. ಮಂಗಳೆ ಇನ್ನಿಲ್ಲ, ನಟರಾಜ ಇನ್ನಿಲ್ಲ. ಆದರೂ ಒಲುಮೆಯೊಳಗೊಂದು ನಾವು ನಮಗೆಲ್ಲ ನೋವು ನಲಿವು ಎಂದು ಹಾಡುವ ನಟರಾಜ ಮಂಗಳೆ ಬೆಳ್ಳಿ ಪರದೆಯಲ್ಲಿ ನಗುತ್ತ ಕಾಣುತ್ತಾರೆ. ಈ ಕೊನೆ ದೃಶ್ಯ ನೋಡಿ ಅದೆಷ್ಟು ಜನ ಕಣ್ಣೀರು ಹಾಕಿದ್ದರು. ಇದೊಂದು ಸಂಪೂರ್ಣ ಹಳ್ಳಿ ಕೇಂದ್ರಿತ ಕಥೆ. ಆ ಕಾರಣಕ್ಕೆ ಎಲ್ಲರ ಹೃದಯ ಸೂರೆಗೊಂಡಿದೆ. ಮನಸ್ಸು ಗೆದ್ದಿದೆ.

## ೫. ಗಿರಿಕನ್ಯೆ : ವಿಶ್ಲೇಷಣಾತ್ಮಕ ಚಿಂತನೆ

ಗಿರಿಕನ್ಯೆ ಸಿನೆಮಾ ಭಾರತೀಸುತ ಅವರ "ಗಿರಿಕನ್ನಿಕೆ" ಕಾದಂಬರಿ ಆಧಾರಿತ ಚಿತ್ರ. ಗಿರಿಕನ್ನಿಕೆ ಇಂತಹ ಅತ್ಯಂತ ಕಷ್ಟಕರ ಕಾದಂಬರಿಯನ್ನು ಬೆಳ್ಳಿತೆರೆಗೆ ತರುವುದು ನಾಲ್ಕು ಸಿನೆಮಾ ಮಾಡಿದ ಹಾಗೆ ಅಲ್ಲಿ ನಾಯಕ ನಾಯಕಿಯರು ಖಳನಾಯಕನಿಗೆ ಹೆದರಿ ಕೊನೆಯಲ್ಲಿ ಊರು ಬಿಟ್ಟು ಹೋಗುತ್ತಾರೆ. ಆದರೆ ಗಿರಿಕನ್ಯೆ ಸಿನೆಮಾ ಒಂದು ಜನಪ್ರಿಯ ಚಿತ್ರವಾಗಿ ಖಳನಾಯಕನನ್ನು ಜೈಲಿಗೆ ಕಳುಹಿಸುವ ಕಥೆಯಾಗಿದೆ. ಮೂಲ ಕಾದಂಬರಿಗೆ ಸಿನೆಮಾ ಅಷ್ಟು ಹತ್ತಿರವಾಗಿಲ್ಲ. ಸ್ವಲ್ಪ ದೂರ ಉಳಿದು ಮನೋರಂಜನೆಯ ನಾಯಕ ಗೆಲ್ಲುವ, ಖಳನಾಯಕ ಸೋಲುವ ವ್ಯಾವಾಹಾರಿಕ ಚಿತ್ರವಾಗಿದೆ.

ಆದರೆ ಕಾದಂಬರಿ ವಾಸ್ತವಕ್ಕೆ ಹತ್ತಿರವಾಗಿದ್ದು ತನ್ನ ಹೆಂಡತಿಯ ಮೇಲೆ ಕಣ್ಣು ಹಾಕಿದ ಮಾಲೀಕನಿಗೆ ಬುದ್ಧಿ ಕಲಿಸಿ ಆಮೇಲೆ ಅದೇ ಹಾದಿಯಲ್ಲಿ ಇರಲು ಸಾಧ್ಯವಿಲ್ಲ ಎಂಬ ಸತ್ಯ ಗೊತ್ತಾಗಿ ನಾಯಕ ನಾಯಕಿ ಊರು ಬಿಡುತ್ತಾರೆ. ಇದು ವಾಸ್ತವ. ನಿಜ ಜೀವನದಲ್ಲೂ ಎಲ್ಲರೂ ಹೀರೋಗಳಂತೆ ಹೊಡೆದಾಡಿ ಬಡಿದಾಡಿ ಗೆಲ್ಲಲು ಸಾಧ್ಯವಿಲ್ಲ. ನಮ್ಮ ಅಸಹಾಯಕತೆ ದೌರ್ಬಲ್ಯಗಳನ್ನು ಒಪ್ಪಿಕೊಳ್ಳಬೇಕು, ಸ್ವೀಕರಿಸಬೇಕು.



ಚೆಲುವಿ ಹೆಸರಿಗಷ್ಟೆ ಚೆಲುವಿಯಲ್ಲ. ನಿಜ ನೋಡಲು ಚೆಂದುಳ್ಳಿ ಚೆಲುವೆ, ದೊಡ್ಡ ಕಣ್ಣುಗಳುಳ್ಳ ತೆಳ್ಳಗೆ ಬೆಳ್ಳನೆಯ ಚೆಲುವಿ. ಆದರೆ ಚೆಲುವಿಯ ಅಮ್ಮ ಬೇರೆ ಜನಾಂಗದವರ ಹಿಂದೆ ಓಡಿಹೋಗಿ ಚೆಲುವಿಯನ್ನು ಹೆತ್ತು ಕಣ್ಣು ಮುಚ್ಚಿ ಕೊಂಡಿರುತ್ತಾಳೆ. ಅಂದಿನಿಂದ ಅವಳ ಅಜ್ಜಿ ಚೆಲುವಿಯನ್ನು ಬೆಳೆಸಿದ್ದಾಳೆ. ಇವಳು ಅನಿಷ್ಟ ಈ ಹೆಣ್ಣನ್ನು ಮುಟ್ಟಿದರೆ ಕೇಡು, ನಾಡಿಗೆ ನಾಡೇ ಬೂದಿಯಾಗುತ್ತದೆ. ಫಣೀಯರ ಕುಲದಲ್ಲಿ ಬೆಂದು ಹೋಗುತ್ತದೆ ಎಂದು ಕೊಡಗಿನ ದೇವತೆ ಶಾಂತಿಕಾರನ ರೂಪದಲ್ಲಿ ಬಂದು ಹೇಳುತ್ತಾಳೆ. ಇವಳು ಮೇಲು ಜಾತಿಗೆ ಹುಟ್ಟಿದ ಹೆಣ್ಣು. ಭೂತಪ್ಪ ಈ ರೀತಿ ಹೇಳಿದ ಮೇಲೆ ಯಾರೂ ಚೆಲುವಿಯನ್ನು ಮದುವೆಯಾಗಲು ಬರುವುದಿಲ್ಲ.



ಅದೇ ಹಾಡಿಗೆ ಬಂದ ಚೆನ್ನ ಎಂಬ ಯುವಕ ಚೆಲುವಿಯನ್ನು ಪ್ರೀತಿಸುತ್ತಾನೆ. ಅವಳನ್ನೇ ಮದುವೆ ಆಗುತ್ತೇನೆ ಎಂದು ಹೇಳುತ್ತಾನೆ. ಅದೇ ತೋಟದ ಮಾಲೀಕನ ಅಳಿಯ ಚಿಕ್ಕಧಣಿಗೆ ಚೆಲುವೆಯ ಮೇಲೆ ಕಣ್ಣು. ಅವಳನ್ನು ಪಡೆಯಲು ಅವನು ಇನ್ನಿಲ್ಲದ ಪ್ರಯತ್ನ ಮಾಡುತ್ತಾನೆ. ಹಿರಿ ಧಣಿಯನ್ನು ಕೊಲ್ಲಿಸಿ ತಾನೇ ಎಸ್ಟೇಟ್ ಮಾಲೀಕನಾಗುತ್ತಾನೆ. ಆದರೆ ಅವನ ಬಲೆಯಿಂದ ಚೆಲುವಿಯನ್ನು ಬಿಡಿಸಿ ಕಿರಿಧಣಿಗೆ ಬುದ್ಧಿ ಕಲಿಸುವ ನಾಯಕನಾಗಿ ಚೆಲುವ ಹೊರಹೊಮ್ಮುವ ಕಥೇ ಗಿರಿಕನ್ಯೆ.

ಗೀತೆಗಳ ಸನ್ನಿವೇಶ ಬಂದಾಗ, ಒಂದು ಸುಗ್ಗಿ ಗೀತೆಯನ್ನು ಬಳಸಲಾಗಿದೆ. ಕಳಸ, ಹೊಂಬಾಳೆ, ಮಾವಿನ ತೋರಣ ಬಯಲಲ್ಲಿ ಹುಗ್ಗಿ ಮಾಡುವ, ಮುಂತಾದ ಜಾನಪದ ಹಬ್ಬಗಳ ಸನ್ನಿವೇಶ ಸೃಷ್ಟಿಮಾಡಲಾಗಿದೆ. ಭೂಮಿ ತಾಯಿಯನ್ನು ಹಾಡಿ ಹೊಗಳುವ ಗೀತೆ ಈಗಲೂ ಹಚ್ಚ ಹಸಿರಾಗಿದೆ.





"ನೆಲವ ನಂಬಿ ಬಾಳೋರು ನಾವುಗಳೆಲ್ಲ,
ಮಳೆಯ ನಂಬಿ ಬದುಕೋರು ಇಲ್ಲಿ ಎಲ್ಲಾ
ಹಸಿರೇ ಉಸಿರು ನಮಗೆಲ್ಲಾ
ದುಡಿವ ಜನರ ಈ ತಾಯಿ ಮಡಿಯುವುದಿಲ್ಲ,
ಮಣ್ಣೇ ಹೊನ್ನು ನಮಗೆಲ್ಲಾ
ದುಡಿಮೆಗೆ ಫಲವ ಕಂಡೇ ಕಾಣುವೆ
ಬೆವರಿಗೆ ಬೆಲೆಯನು ನೀ ಪಡೆವೆ"

ಎನ್ನುವ ಸಾಹಿತ್ಯ ರೈತನಿಗೂ ಭೂಮಿಗೂ ಇರುವ ನಂಟನ್ನು ಮತ್ತಷ್ಟು ಹೆಚ್ಚಿಸುತ್ತದೆ. ಈ ಭೂಮಿಯನ್ನು ದುಡಿಮೆ ಮಾಡುವ ಸಾಮಾನ್ಯ ರೈತನಾಗಿ, ಚೆನ್ನ ಆ ಪಾತ್ರದಲ್ಲಿ ರಾಜಣ್ಣನವರು ಜನರಿಗೆ ಹತ್ತಿರವಾಗಿದ್ದಾರೆ. ಇಂಪಾದ ಸಂಗೀತ ಮನಸ್ಸಿಗೆ ಮುದ ನೀಡುತ್ತದೆ. "ನಗು ನಗುತಾ ನೀ ಬರುವೆ" ಈ ಗೀತೆಯಲ್ಲಿ ಮಡಿಕೇರಿ, ಹೊನ್ನೀರು, ತೆಂಗಿನತೋಟ, ನದಿಯಲ್ಲಿ ದೋಣಿಗಳ ಸಾಲು, ಬೆಸ್ತರು, ಬಲೆ ಮೀನು, ಮಲ್ಪೆ, ಅಲ್ಲಿನ ಸೇಂಟ್ ಮೇರೀಸ್ ದ್ವೀಪ ಎಲ್ಲವೂ ಸ್ಥಳೀಯ ಸೌಂದರ್ಯವನ್ನು ಮತ್ತಷ್ಟು ಇಮ್ಮಡಿಗೊಳಿಸಿದೆ. ಹಿರಿಧಣಿ ತೀರಿಕೊಂಡು ಅವರ ಅಳಿಯ ಮೋಸದಿಂದ ಆಸ್ತಿ ಲಪಟಾಯಿಸಿ ತಾನೇ ಮಾಲೀಕನಾಗುತ್ತಾನೆ. ಅಲ್ಲಿ ಕೂಲಿಯಾಳುಗಳಿಗೆ ಮೋಸ ಮಾಡುವ ಹೊಸ ಮೇಸ್ತ್ರಿ ದಬ್ಬಾಳಿಕೆ ಮಾಡುತ್ತಾನೆ. ಚೆನ್ನನಿಗೆ "ಮೇಸ್ತ್ರಿ ಕೆಲಸ ಇಲ್ಲ ಕೂಲಿ ಕೆಲಸ ಮಾಡು" ಎನ್ನುವ ಆಜ್ಞೆಗೆ ಬಂದಾಗ ಅವನು ಕೂಲಿಯಾಗಿಯೂ ಸಹಾ

ಕೆಲಸ ಮಾಡುತ್ತಾನೆ. ದುಡಿಯುವವನಿಗೆ ಮೇಸ್ತ್ರಿ ಆದರೇನು, ಕೂಲಿಯಾದರೇನು? ಆದರೂ ಅವನನ್ನು ಮೋಸ ಮಾಡಿ ಕೆಲಸದಿಂದ ಹೊರಹಾಕುತ್ತಾರೆ. ಇನ್ನಿತರ ಕೂಲಿಯಾಳುಗಳು ಚೆನ್ನನನ್ನು ಬೆಂಬಲಿಸುತ್ತಾರೆ. ಕೋಪಗೊಂಡ ಮೇಸ್ತ್ರಿ ಎಲ್ಲ ಕೆಲಸಗಾರರನ್ನು ಕೆಲಸದಿಂದ ತೆಗೆದು ಹಾಕಿ ಬೇರೆ ಊರಿನಿಂದ ಕೆಲಸಗಾರರನ್ನು ಕರೆಸುತ್ತಾನೆ. ಅಲ್ಲಿನ ಜನರಿಗೆ ಅನ್ಯಾಯವಾಗುತ್ತದೆ. ಇಂದಿನ ದಿನಗಳಲ್ಲಿ ಹಳ್ಳಿ ಕಡೆ ಕೂಲಿಯಾಳುಗಳೇ ಸಿಗುತ್ತಿಲ್ಲ. ಸ್ಥಳೀಯರಿಗೆ ಮೋಸ ಆಗಬಾರದೆಂದು ಬೇರೆ ಹಳ್ಳಿಯಿಂದ ಬಂದ ಕೂಲಿ ರೈತರು ಅಲ್ಲಿಂದ ವಾಪಸ್ಸಾಗುತ್ತಾರೆ. ಇದು ರೈತರಿಗೆ ಸಂಬಂಧಪಟ್ಟ ಸಮಸ್ಯೆ. ಸ್ಥಳೀಯರಿಗೆ ಆದ್ಯತೆ ಕೊಡಬೇಕು ಎಂಬ ಪಾಠವನ್ನು ಚೆನ್ನ ಮತ್ತು ಸಂಗಡಿಗರು ಹೊಸ ಮೇಸ್ತ್ರಿಗೆ ಕಲಿಸುತ್ತಾರೆ. ಜಾನಪದ ದೈವ ಕೊರತಿಯ ಆಚಾರ ವಿಚಾರಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.





ಸಿನೆಮಾದ ಕೊನೆಯಲ್ಲಿ ಚೆಲುವೆಯ ಅಪಹರಣ ಅಲ್ಲಿ ಚೆನ್ನ ಬಂದು ಹೊಡೆದಾಡಿ ಅವಳನ್ನು ಬಿಡಿಸಿಕೊಂಡು ಧಣಿಗೆ ಬುದ್ಧಿ ಕಲಿಸುವುದು, ಸಂಸಾರದ ಲಕ್ಷ್ಮಣ ರೇಖೆಯನ್ನು ದಾಟದಂತೆ ಬುದ್ಧಿ ಹೇಳುವ ಚೆಲುವಿ, ಹೊಡೆದಾಟ, ಬಡಿದಾಟ, ಆದರೂ ಕೊನೆಯಲ್ಲಿ ಕೆಟ್ಟ ಧಣಿಯನ್ನು ಬೆಂಕಿಯಿಂದ ರಕ್ಷಿಸಿದ ಚೆನ್ನ, ಧಣಿಯ ಪಶ್ಚಾತ್ತಾಪ, ಆತ ಜೈಲ್ ಸೇರುವುದು, ಸಿನೆಮಾ ಚೆಲುವಿ ಚೆನ್ನರ ಸಮಾಗಮದಲ್ಲಿ ಸುಖಾಂತ್ಯ ಕಾಣುತ್ತದೆ.





ಮಡಿಕೇರಿಯ ಎಸ್ಟೇಟ್‌ಗಳಲ್ಲಿ ಹೊಲ ಗದ್ದೆಗಳಲ್ಲಿ ದುಡಿಯುವ ಸಾಮಾನ್ಯ ರೈತರಂತೆ ಚೆನ್ನ ಚೆಲುವಿಯ ವಸ್ತ್ರ ವಿನ್ಯಾಸ ರೂಪಗೊಳಿಸಲಾಗಿದೆ. ಕೂಡಿ ಬಾಳೋಣ, ಸೇರಿ ದುಡಿಯೋಣ ಎನ್ನುವ ಸುಂದರ ಗೀತೆ ಸಮೂಹ ಪ್ರಜ್ಞೆಯನ್ನು ಬಿಳಸುತ್ತದೆ. ಒಟ್ಟಾಗಿ ದುಡಿದಾಗ ಸಂತೋಷ ಇದೆ ಎಂಬುದನ್ನು





ಚಿತ್ರ ಬಿಂಬಿಸುತ್ತದೆ. ಈ ಹಾಡಿನ ಚಿತ್ರಿಕರಣದಲ್ಲಿ ಜಾನಪದ ಶೈಲಿಯ ಉಡುಗು ತೊಡುಗೆಗಳನ್ನು ಬಳಸಲಾಗಿದೆ.

ಸ್ಥಳೀಯ ಪರಿಕರಗಳಾದ ಹಾಡಿ, ಹುಲ್ಲಿನ ಮನೆ, ಬಲೆ, ಕೃಷಿ, ಪರಿಕರಗಳನ್ನು ಬಳಸಲಾಗಿದೆ. ಅಲ್ಲಿನ ಕೃಷಿ ಹೆಚ್ಚಾಗಿ ಕಾಫಿ ತೋಟ. ಆದ ಕಾರಣ ಕಾಫಿ ಪಲ್ಪ್, ಫ್ಲಾಕ್ಸರಿ, ಹಾರೆ, ಗುದ್ದಲಿ, ಮರದ ಸಾಮಾನು, ಕೋಲು ಸಹಾ ಬಳಸಲಾಗಿದೆ. ಚಿತ್ರೀಕರಣ ಕಥೆಗೆ ತಕ್ಕಂತೆ ದೇಸಿ ನೆಲವೇ ಆಗಿದೆ. ಈ ಸಿನಿಮಾದಲ್ಲಿ ಜಮೀನ್ದಾರಿ ದಬ್ಬಾಳಿಕೆ, ಹೆಣ್ಣಿನ ಮೋಹ, ಸಾಹುಕಾರರಿಗೆ ಹೇಗೆ ಹೆಣ್ಣಿನ ಗೀಳು ಆಗಿರುತ್ತದೆ ಎಂಬುದನ್ನು ಪ್ರಶ್ನೆ ಮಾಡುತ್ತದೆ. ಕೆಲಸಗಾರರಿಗೆ ಮೋಸವಾಗಬಾರದು. ದುಡಿದವನಿಗೆ ಸರಿಯಾಗಿ ಅನ್ನ ಸಿಗಬೇಕು ಎಂಬುದು ಸಿನಿಮಾದ ಆಶಯವಾಗಿದೆ.

## ೬. ಸಂಪತ್ತಿಗೆ ಸವಾಲ್ : ವಿಶ್ಲೇಷಣಾತ್ಮಕ ಚಿಂತನೆ

ಬಿ.ಪಿ. ಧುತ್ತರಗಿ ಅವರ ನಾಟಕ ಆಧಾರಿತ ಚಿತ್ರ. ಈ ಸಿನಿಮಾದಲ್ಲಿ ಸಾಹುಕಾರ ಅಥವಾ ಜಮೀನ್ದಾರರು ಕೂಲಿ ಆಳುಗಳನ್ನು ಜೀತದ ದೃಷ್ಟಿಯಿಂದ ನೋಡುವ, ದುಡಿಯುವವರನ್ನು ಶೋಷಣೆಗೆ ಈಡುಮಾಡುವ ಚಿತ್ರಣವನ್ನು ಒಳಗೊಂಡಿದೆ. ಹಳ್ಳಿಯೊಂದರಲ್ಲಿ ಜಮೀನುದಾರನ ಬಳಿಯಲ್ಲಿ ದಿನಗೂಲಿ ಮಾಡುವ ಬಡಕೂಲಿಯೊಬ್ಬ ಮರ ಉರುಳಿ ಸಾವನ್ನಪ್ಪುತ್ತಾನೆ. ಅವನ ವಿಧವೆ ಹೆಂಡತಿ ಇಬ್ಬರು ಗಂಡು ಮಕ್ಕಳು ಸಾಹುಕಾರನ ಹತ್ತಿರ ಗಂಜಿಗಾಗಿ ಬದುಕಿಕೊಳ್ಳಲು ಹಣದ ಸಹಾಯ ಕೇಳಿಕೊಂಡು ಬಂದಾಗ ಸಾಹುಕಾರ ಅವರನ್ನು ಬೈದು ಹೊರದಬ್ಬುತ್ತಾನೆ. ಹಿರಿಮಗ ಅದನ್ನು ಸಹಿಸಿಕೊಂಡರೂ ಕಿರಿ ಮಗ ಭದ್ರ ಸಾಹುಕಾರನ ಸಂಪತ್ತಿಗೆ ತನ್ನ ಸವಾಲ್ ಹಾಕಿ ಸಾಹುಕಾರನನ್ನು ಎದುರು ಹಾಕಿಕೊಂಡು ಆತನ ಅಹಂಕಾರ ಮೆಟ್ಟಿ ಅವನ ಮಗಳನ್ನೇ ವರಿಸುವ ಸಂಪೂರ್ಣ ಹಳ್ಳಿಯ ದೇಸಿ ಸೊಗಡಿನ ಚಿತ್ರ ಸಂಪತ್ತಿಗೆ ಸವಾಲ್.

ಕಿರಿಮಗನಾಗಿ ರಾಜಣ್ಣನವರು ವಿಧವೆ ತಾಯಿಯಾಗಿ ಎಂ.ಪಿ. ರಾಜಮ್ಮ, ಹಿರಿಮಗನಾಗಿ ರಾಜಾ ಶಂಕರ್, ಸಾಹುಕಾರನಾಗಿ ವಜ್ರಮುನಿ, ಅವನ ಮಗಳು ದುರ್ಗಿಯಾಗಿ ಮಂಜುಳಾ ಅಭಿನಯಿಸಿದ್ದಾರೆ. ಇದು ಮೂಲತಃ ಒಂದು ಪ್ರಸಿದ್ಧ ನಾಟಕದ ಸಿನೆಮಾ ರೂಪ. ಈ ನಾಟಕ ಎಷ್ಟು ಜನಪ್ರಿಯಗೊಂಡಿತ್ತು ಎಂದರೆ

ಅದರ ಜನಪ್ರಿಯತೆ ಅದನ್ನು ಸಿನೆಮಾ ಆಗಿ ಮಾಡಿ ಅಲ್ಲಿಯೂ ಜನಪ್ರಿಯತೆಯ ತುತ್ತ ತುದಿಗೆ ಏರಿದ ಯಶಸ್ವಿ ಚಿತ್ರ. ರಾಜಣ್ಣನವರನ್ನು ಮೊದಲ ಬಾರಿ ಕನ್ನಡ ಸಂಗೀತ ಕ್ಷೇತ್ರಕ್ಕೆ ಕೊಡುಗೆಯನ್ನಾಗಿ ನೀಡಿದ ಚಿತ್ರ ರಾಜಣ್ಣನವರು ಗಾಯಕರಾಗಿ ಮಿಂಚಿದ್ದಾರೆ. ಅವರ ಸ್ವಕ್ಷೇತ್ರ ಚಾಮರಾಜನಗರ, ಸಿಂಗಿನಲ್ಲೂರು, ಗಾಜನೂರಿನಲ್ಲಿ ಚಿತ್ರೀಕರಣ ನಡೆದಿದೆ. ಶೀರ್ಷಿಕೆಯೊಂದಿಗೆ ಹಳ್ಳಿಯ ಸಂಪೂರ್ಣ ದರ್ಶನವಾಗುತ್ತದೆ. ಹೊಲ ಗದ್ದೆ, ತೋಟ, ಕೆರೆ ಕಟ್ಟೆಗಳು, ಭತ್ತದ ಸಸಿ ನೆಟ್ಟು ಅವು ಬೆಳೆದು ಭತ್ತ ಬಲಿಯುವವರೆವಿಗೂ ಫಸಲು ಬರುವ ಹೊತ್ತಿಗೆ ಶೀರ್ಷಿಕೆಗಳು ಮುಕ್ತಾಯವಾಗುತ್ತವೆ.

ಇದೇ ಮಧ್ಯೆ ವಿಶ್ವ, ಭದ್ರ ಇಬ್ಬರು ಗಂಡುಮಕ್ಕಳು ಬೆಳೆದು ದೊಡ್ಡವರಾಗಿದ್ದಾರೆ. ಮೊದಲಿನಿಂದಲೂ ಭದ್ರನಿಗೆ ಸಾಹುಕಾರನನ್ನು ಕಂಡರೆ ಸಿಡಿಮಿಡಿ. ಚಿಕ್ಕವನಿರುವಾಗಲೇ ಗೋಲಿಯಿಂದ ಹೊಡೆದು ಶಾಶ್ವತ ದ್ವೇಷ ಕಟ್ಟಿಕೊಂಡಿದ್ದ. ಈಗಲೂ ಅಷ್ಟೆ ಸಾಹುಕಾರನ ಜಮೀನಿನಲ್ಲಿ ಕೆಲಸ ಮಾಡಲು ಭದ್ರ ಬರೊಲ್ಲ ಭದ್ರನ ಹೆಡೆ ಮುರಿ ಕಟ್ಟಿ ಅವನನ್ನು ತಮ್ಮ ಜಮೀನಿನಲ್ಲಿ ಜೀತದಾಳಾಗಿ ಮಾಡಿಕೊಳ್ಳಬೇಕೆಂಬುದು ಸಾಹುಕಾರನ ಹಾಗೂ ಆತನ ಮಗಳು ದುರ್ಗಿಯ ಇಚ್ಛೆ. ತಲೆ ಕತ್ತರಿಸಿಕೊಳ್ಳಲು ಸಿದ್ಧ ಆದರೆ ತಲೆ ತಗ್ಗಿಸಲು ಸಿದ್ದನಿಲ್ಲ ಎನ್ನುವ ನಮ್ಮ ಭದ್ರ ಮಹಾನ್ ಆತ್ಮಗೌರವಿ. ಯಾವುದೇ ಕಾರಣಕ್ಕೂ ಸಾಹುಕಾರನ ಹತ್ತಿರ ಆಳಾಗಿ ಕೆಲಸ ಮಾಡಲು ಸಿದ್ಧನಲ್ಲ. ತನ್ನ ತಂದೆ ಸತ್ತಾಗ ತಾಯಿ ಕಣ್ಣೀರು ಹಾಕಿಕೊಂಡು ಸಹಾಯ ಕೇಳಲು ಹೋದಾಗ ಅವರನ್ನು ಗದರಿ ಹೊರಹಾಕಿದ ಘಟನೆ ನಮ್ಮ ಭದ್ರನಲ್ಲಿ ಈಗಲೂ ನೆನಪಿದೆ. ನಮ್ಮಲ್ಲಿ ಹಣವಿಲ್ಲದಿರಬಹುದು, ಆದರೆ ಆತ್ಮಸಾಕ್ಷಿ, ಆತ್ಮಗೌರವ ಇರಬೇಕು. ಸಾಹುಕಾರನ ಹತ್ತಿರ ಹಣ ಇದ್ದರೆ ಅದು ಅವನ ಮನೆಯಲ್ಲಿ, ಅವನ ಸಂಪತ್ತು ಅವನ ಹತ್ತಿರ ಇರುತ್ತದೆ ಅದರಿಂದ ನಮಗೇನು. ಅವನು ತನ್ನ ಹಣದಿಂದ ಸವಾಲ್ ಹಾಕಿದರೆ ಅವನ ಸಂಪತ್ತಿಗೆ ನನ್ನ ಸವಾಲ್ ಎನ್ನುವುದು ಭದ್ರನ ತರ್ಕ.

ಭದ್ರ ಮೂಲತಃ ರೈತನ ಮಗ. ದುಡಿಮೆಯೇ ದೇವರು ಎಂದು ನಂಬಿದಾನೆ. ಭೂಮಿ ತಾಯಿಯನ್ನು ನಂಬಿದವರನ್ನು ಅವಳು ಕೊನೆತನಕ ಕೈ ಬಿಡೊಲ್ಲ ಎನ್ನುವುದು ಅವನ ನಂಬಿಕೆ. ಊರಿಗೇ ಉಪಕಾರಿ, ಅವನಿಗೆ ಹಲವರು ಶಿಷ್ಯರು. ಮನೆಗೆ ಸರಿಯಾದ ಸಮಯಕ್ಕೆ ಬರದೇ ದುಡಿಮೆಯಲ್ಲೇ ಮೈಮರೆಯುತ್ತಾನೆ. ಅವನಿಗೆ ತಾಯಿ ಮೇಲೆ ಅಪಾರ ಪ್ರೀತಿ, ಗೌರವ. ಅಣ್ಣ ಎಂದರೆ, ಅತ್ತಿಗೆ ಎಂದರೆ ಪ್ರಾಣ. ಯಾರಾದರೂ ಎಂಥಹ ಹೊತ್ತಿನಲ್ಲೂ ಯಾವುದೇ ಸಹಾಯ ಕೇಳಿದರೂ ಮಾಡಲು ಸಿದ್ಧ. ಆದರೆ ಊರಿಗೆ ಉಪಕಾರಿ ಮನೆಗೆ ಮಾರಿ ಎನ್ನುವುದು ಅವರ ಅಮ್ಮನ ವಾದ. ಇಡೀ ಚಿತ್ರಕಥೆ ಹಳ್ಳಿಯಲ್ಲಿ ನಡೆಯುತ್ತದೆ. ಎಂದಿನಂತೆ ಹೊರಾಂಗಣ ಚಿತ್ರೀಕರಣವನ್ನು ಹಳ್ಳಿಯ ಅಕ್ಕಪಕ್ಕದಲ್ಲಿ ಒಳಾಂಗಣ ದೃಶ್ಯವನ್ನು ಸ್ಟುಡಿಯೋದಲ್ಲಿ ಚಿತ್ರೀಕರಿಸಲಾಗಿದೆ.

ಈ ಸಿನೆಮಾದಲ್ಲಿ ಬರುವ ಸಾಹುಕಾರನಂತಹವರು ನಮ್ಮ ಹಳ್ಳಿಯಲ್ಲಿ ಆ ಕಾಲದಿಂದ ಹಿಡಿದು ಈ ಕಾಲದವರೆವಿಗೂ ಇದ್ದಾರೆ. ಬಡವನ ಹೊಟ್ಟೆಯ ಮೇಲೆ ಹೊಡೆದು ಅವರಿಂದ ಕೆಲಸ ಮಾಡಿಸಿಕೊಂಡು ಸರಿಯಾದ ಕೂಲಿ ನೀಡದೆ ಹಿಂಸಿಸುವ ಸಾಲ ನೀಡಿ ಅದಕ್ಕೆ ಬಡ್ಡಿ ಚಕ್ರಬಡ್ಡಿ ಸೇರಿಸಿ ಹಳ್ಳಿ ರೈತರ ಹೊಲ ಮನೆ, ಹಸುಕರುಗಳನ್ನು ನಿರ್ದಾಕ್ಷಿಣ್ಯವಾಗಿ ಅವರಿಂದ ಬಲವಂತವಾಗಿ ಕಿತ್ತುಕೊಳ್ಳುವುದು ಇವರ ಹುಟ್ಟುಗುಣ. ವಿದ್ಯೆ, ಹಣ, ಅಧಿಕಾರ, ಜನಬಲ ಯಾವುದೂ ಇಲ್ಲದೆ ಬಡ ಬೋರೇಗೌಡ ಇಂಥಹವರ ಕಪಿಮುಷ್ಠಿಗೆ ಸಿಲುಕಿ ಪ್ರಾಣ ಬಿಟ್ಟ ಉದಾಹರಣೆಯೂ ಇದೆ. ಸಾಲ ತೀರಿಸಲಾರದೆ ತನ್ನ ಜೀವನ ಆ ನಂತರ ತನ್ನ ಮಕ್ಕಳ ಜೀವನವನ್ನು

ಜಮೀನ್ದಾರನ ಕೊಟ್ಟಿಗೆಯಲ್ಲಿ ಕಳೆದ ಎರಡು ಮೂರು ಪೀಳಿಗೆಗಳಿವೆ. (ಬಹುಶಃ ಈಗ ಜೀತದಾಳುಗಳಿಗೆ ಮುಕ್ತಿ ಸಿಕ್ಕಿದೆ). ಸ್ವಾತಂತ್ರ್ಯ ಪೂರ್ವದ ಜೀತದಾಳುಗಳು ಸಮಸ್ಯೆಯನ್ನು ಈ ಸಿನೆಮಾ ನೆನಪಿಸುತ್ತದೆ.

ಸಾಹುಕಾರರ ಮತ್ತೊಂದು ದುಷ್ಟ ಬುದ್ಧಿ ಎಂದರೆ ಪರಸ್ತ್ರೀ ಮೋಹ. ಬಡ ಹೆಣ್ಣು ಮಕ್ಕಳ ಮೇಲೆ ಕಣ್ಣುಹಾಕುವುದು, ಅವರನ್ನು ಬಲಾತ್ಕಾರಗೊಳಿಸುವುದು ತಮ್ಮ ಹಕ್ಕು ಎಂದು ಭಾವಿಸುತ್ತಾನೆ. ಇಂಥಹ ದುಷ್ಟ ಸಾಹುಕಾರರಿಗೆ ಬುದ್ಧಿ ಕಲಿಸಲೆಂದೇ ಬಡವನಾದರೂ ಧೈರ್ಯವಂತನಾದ ಭದ್ರನಂತ ಯುವ ಪೀಳಿಗೆ ಬರಬೇಕು ಎಂಬ ಹೋರಾಟದ ಸಂದೇಶವನ್ನು ಸಿನೆಮಾ ನೀಡುತ್ತದೆ. ಚಿತ್ರದ ಆರಂಭದಲ್ಲಿಯೇ ಹಳ್ಳಿಯ ಚಿತ್ರಣ ನಮ್ಮ ಕಣ್ಮನವನ್ನು ಸೆಳೆಯುತ್ತದೆ. ಶೀರ್ಷಿಕೆಯಲ್ಲಿಯೇ ಹೊಲ ರಾಗಿ ಬೆಳೆದ ತೋಟ, ಕೆರೆ ಕಟ್ಟೆ, ಭತ್ತದ ಸಸಿಯ ಹಸಿರು ಕಂಗೊಳಿಸುತ್ತದೆ. ರಾಜಣ್ಣನವರ ಊರಿನಲ್ಲಿಯೇ ಈ ಚಿತ್ರಣ ನಡೆದಿದೆ ಎಂಬುದು ಚಿತ್ರದ ವಿಶೇಷ. ಗಾಯಕರಾಗಿ ಮಿಂಚಿದ್ದು ಇನ್ನೊಂದು ವಿಶೇಷ.

ವಿಶ್ವ ಭದ್ರ ಬೆಳೆದು ದೊಡ್ಡವರಾಗಿದ್ದಾರೆ. ಬಾಲ್ಯದಲ್ಲಿ ವಿಧವೆ ಸಾಹುಕಾರನ ಬಳಿ ಹಣದ ಸಹಾಯ ಕೇಳಿದಾಗ, ಅವಮಾನಿಸಿ ಕಳುಹಿಸಿದ ಸಾಹುಕಾರನಿಗೂ ಈಗ ವಯಸ್ಸಾಗಿದೆ. ವಯಸ್ಸಿಗೆ ಬಂದ ಮಗಳಿದ್ದಾಳೆ. ಆದರೂ ಹೆಣ್ಣಿನ ಚಪಲ ಅವನನ್ನು ಬಿಟ್ಟಿಲ್ಲ. ವಿಶ್ವನ ಮದುವೆ ನಿಶ್ಚಯವಾಗಿದೆ. ಮದುವೆ ಖರ್ಚಿಗೆ ಒಂದಿಷ್ಟು ಹಣ ಕೇಳಲು ಸಾಹುಕಾರನ ಹತ್ತಿರ ವಿಶ್ವ ಬರುತ್ತಾನೆ. ನಂಜಪ್ಪನ ಮಗಳು ಮಹಾಲಕ್ಷ್ಮಿ ಜೊತೆ ಮದುವೆ ನಿಶ್ಚಯವಾಗಿದೆ ಎಂಬ ಸುದ್ದಿ ಸಾಹುಕಾರನ ಕಿವಿಗೆ ಬಿದ್ದಾಗ ಜೊಲ್ಲು ಸುರಿಸುತ್ತಾ ಗೌಡ ಮಹಾಲಕ್ಷ್ಮಿ "ಮೈ ಕೈ ತುಂಬಿಕೊಂಡು ಒಳ್ಳೆ ರಸಪುರಿ ಹಣ್ಣಿನಂತೆ ಇದ್ದಾಳೆ" ಎಂದು ತನ್ನ ಕಚ್ಚೆ ಹರುಕ ಬುದ್ಧಿ ತೋರಿಸುತ್ತಾನೆ. ಉದಾರವಾಗಿ ೧೦೦೦ ರೂಪಾಯಿ ವಿಶ್ವನಿಗೆ ನೀಡುತ್ತಾನೆ. ನಿಮ್ಮ ತಂದೆ ಸತ್ತಾಗ ಏನೂ ಕೊಡಲಿಲ್ಲ, ನಿಮಗೆ ದುಡಿಮೆಯ ಬೆಲೆ ಗೊತ್ತಾಗಲಿ ಎಂದು ಬುರುಡೆ ಬಿಡುತ್ತಾನೆ. ಅದನ್ನೆ ಸತ್ಯ ಎಂದು ನಂಬುವ ವಿಶ್ವ ನಿಜಕ್ಕೂ ತುಂಬಾ ಮುಗ್ಧ. ಗೌಡನ ಒಳ ಮರ್ಮ ಅವನಿಗೆ ತಿಳಿಯುವುದಿಲ್ಲ.

ವಿಶ್ವ ಕಚ್ಚೆ ಪಂಚೆ, ಕಿವಿಗೆ ಓಲೆ, ಹೆಗಲ ಮೇಲೆ ಒಂದು ಟವೆಲ್, ನೋಡಿದ ತಕ್ಷಣ ಹಳ್ಳಿಯವ ಎಂದು ತಿಳಿಯುತ್ತದೆ. ರಾಜಾಶಂಕರ್ ವಿಶ್ವನ ಪಾತ್ರದಲ್ಲಿ ಬಹಳ ಸಹಜ ಅಭಿನಯದಿಂದ ಎಲ್ಲರ ಗಮನ ಸೆಳೆಯುತ್ತಾರೆ. ಗೌಡನ ದರ್ಪದ ನಡಿಗೆ , ರೇಷ್ಮೆ ಷರ್ಟು, ಕೈಯಲ್ಲಿ ಕಡಗ, ಹುರಿಮೀಸೆ, ಕತ್ತಿಗೆ ಚಿನ್ನದ ಸರ, ಬೆರಳುಗಳಲ್ಲಿ ಉಂಗುರ, ಕೈಯಲ್ಲಿ ಕೋಲು ಹಿಡಿದಿದ್ದಾನೆ. ದುಡ್ಡು ತೆಗೆದುಕೊಂಡು ಹೊರಡುವ ಸಮಯಕ್ಕೆ ಸಾಹುಕಾರನ ಮಗಳು ದುರ್ಗಿ ರೇಷ್ಮೆ ಲಂಗ ದಾವಣಿ ತೊಟ್ಟು ಚಿನ್ನದ ಒಡವೆಗಳನ್ನು ಹೇರಿಕೊಂಡು ಬೆಳ್ಳಿ ಕೊಡ ಹಿಡಿದು ನೀರು ತರಲು ಊರ ಕೆರೆಗೆ ಹೊರಟಿದ್ದಾಳೆ. ಸಾಹುಕಾರನ ಮನೆ ಸಮೃದ್ಧವಾಗಿದೆ, ಅಲ್ಲಲ್ಲಿ ಧಾನ್ಯದ ಮೂಟೆ ಪೇರಿಸಿ ಇಡಲಾಗಿದೆ. ಕಂಬದ ಮನೆ. ಗುಮಾಸ್ತನಿಗೆ ಕುಳಿತುಕೊಳ್ಳಲು ಒಂದು ಗಾದಿ. ಅದರ ಮುಂದೆ ಸಣ್ಣ ಮೇಜು, ಗೌಡ ಕುಳಿತುಕೊಳ್ಳಲು ಹಳೆಯ ಕಾಲದ ಮರದ ಚೇರು, ದೊಡ್ಡ ಮನೆ ಅಲ್ಲಲ್ಲಿ ಗೋಡೆಗೆ ದೇವರ ಫೋಟೋ ಹಾಕಿದೆ, ಶ್ರೀಮಂತಿಕೆ ಎದ್ದುಕಾಣುತ್ತಿದೆ.

ಮನೆಯಲ್ಲಿ ನೀರು ತರಲು ಆಳು ಕಾಳು ಇದ್ದರೂ ದುರ್ಗಿ ತನ್ನ ಒಡವೆ ಬೆಳ್ಳಿ ಕೊಡ ಜನರ ಕಣ್ಣು ಕುಕ್ಕಲಿ ಎಂದು ಊರ ಕೆರೆಗೆ ಹೋಗುತ್ತಾಳೆ. ವಿಶ್ವನನ್ನು ಕಂಡು ನಿನ್ನ ತಮ್ಮನನ್ನು ತಂದು ನಮ್ಮ ಮನೆ ಜೀತಕ್ಕೆ ಹಾಕು

ಅವನ ಅಹಂಕಾರ ಅಡಗುತ್ತದೆ ಎಂದು ಆಜ್ಞಾಪಿಸುತ್ತಾಳೆ. ಭದ್ರನ ವಿಚಾರವೇ ಬೇರೆ ಏನೇ ಆದರೂ ಸಾಹುಕಾರನ ಹತ್ತಿರ ಕೆಲಸ ಮಾಡುವುದಿಲ್ಲ ಎನ್ನುವುದು ಭದ್ರನ ಹಠ. ಅವನೊಬ್ಬ ಪುಂಡ ಎಂದು ವಿಶ್ವ ಹೇಳಿದರೆ ನಮ್ಮ ಅಪ್ಪ ಪುಂಡರ ಪಾಲಿಗೆ ಯಮ ಎಂದು ದುರ್ಗಿ ಹೇಳುತ್ತಾಳೆ. ಅಲ್ಲೆ ಭಕ್ತ ಮಾರ್ಕಂಡೇಯ, ಯಮ, ಎಮ್ಮೆಯ ಚಿತ್ರ ಇಡಲಾಗಿದೆ. ಏನೇ ಆದರೂ ಭದ್ರ ವೀರಭದ್ರನೇ ಸರಿ.

ಇಂಥಹ ಸನ್ನಿವೇಶಗಳು ನಮ್ಮ ಜನಪದ ಕಥೆಯಲ್ಲಿ ಕಂಡು ಬರುತ್ತವೆ. ಗೌಡನನ್ನು ಎದುರು ಹಾಕಿಕೊಳ್ಳುವ ಬಡವ ಯಾವಾಗಲೂ ಕಷ್ಟಕ್ಕೆ ಸಿಲುಕಿಹಾಕಿಕೊಳ್ಳುತ್ತಾನೆ. ಕೊಬ್ಬಿದ ಧಣಿ ಬಡವನಿಂದ ಕೆಲಸ ತೆಗೆದುಕೊಳ್ಳುತ್ತಾನೆ. ಜೀತ ಪದ್ಧತಿಯೇ ನಮ್ಮ ದೇಶದ ಒಂದು ದುರಂತ. ಅಪ್ಪ ಮಾಡಿದ ಸಾಲವನ್ನು ಮಗ, ಮೊಮ್ಮಗ ತಮ್ಮ ಜೀವನ ಪರ್ಯಂತ ದುಡಿದರೂ ಬಡ್ಡಿ, ಚಕ್ರಬಡ್ಡಿ ಎಂದು ಇಡೀ ಜೀವನ ದುಡಿಮೆಯಲ್ಲಿ ಕಳೆದುಹೋಗುತ್ತದೆ. ಧಣಿಗಳ ಹೊಲದಲ್ಲಿ ಇಡೀ ಜೀವನ ದುಡಿದರೂ ಬೆಳೆಯೂ ತನ್ನದಲ್ಲ, ಭೂಮಿಯೂ ತನ್ನದಲ್ಲ ಇದೇ ಈ ದೇಶದ ಒಂದು ದುರ್ದೈವದ ಸಂಗತಿ. ಈ ಕಾರಣಕ್ಕೆ ಸರ್ಕಾರ ಉಳುವವನಿಗೆ ಭೂಮಿ ಎಂದು ಕಾನೂನು ಮಾಡಿದ್ದು.

ರಾಜಣ್ಣನವರದು ಸಿರಿಕಂಠ. ಎಂಥಹ ಅದ್ಭುತ ಗಾಯಕ ಅವರಲ್ಲಿ ಹುದುಗಿದ್ದಾನೆ ಎಂಬ ಸತ್ಯ ಸ್ವತಃ ಅವರಿಗೇ ಗೊತ್ತಿರಲಿಲ್ಲ. ಅವರ ಧ್ವನಿ ಪಿ.ಬಿ. ಶ್ರೀನಿವಾಸ್ ಅವರದ್ದು. ರಾಜಣ್ಣನವರ ಬಹುತೇಕ ಚಿತ್ರಗಳಲ್ಲಿ ಪಿ.ಬಿ. ಶ್ರೀನಿವಾಸ್ ಹಾಡಿದ್ದಾರೆ. ಗಾಯಕರಾಗಿ ರಾಜಣ್ಣನವರು ಅದ್ಭುತ ಯಶಸ್ಸು ಕಂಡ ಚಿತ್ರ ಸಂಪತ್ತಿಗೆ ಸವಾಲ್. ಚಿತ್ರದ ಆರಂಭದಲ್ಲಿ ನಾಯಕನ ಪ್ರವೇಶಕ್ಕೆ ನಿರ್ದೇಶಕರು ಒಂದು ಒಳ್ಳೆ ಆರಂಭ ಕೊಟ್ಟಿದ್ದಾರೆ. ಅವರೇ ಹಾಡಿದ ಗೀತೆಗೆ ರಾಜಣ್ಣನವರ ವಿಭಿನ್ನ ಎಂಟ್ರಿ ಅವರ ಅಭಿಮಾನಿಗಳಲ್ಲಿ ಹೊಸ ಹುರುಪನ್ನು ಮೂಡಿಸುತ್ತದೆ. ಎಮ್ಮೆ ಮೇಲೆ ಕುಳಿತ ಭದ್ರ "ಯಾರೇ ಕೂಗಾಡಲಿ ಊರೇ ಹೋರಾಡಲಿ ಅಳುಕದೇ .. .. .. .. ನೀ ಮುಂದೆ ಸಾಗುವೆ" ಎನ್ನುತ್ತಾ ಅಭಿಮಾನಿಗಳಿಗೆ ತಮ್ಮ ಹೊಸ ರೂಪ ತೋರಿಸುತ್ತಾರೆ. ಭದ್ರನ ಸ್ವಭಾವ ಸಹಾ ಸ್ವಲ್ಪ ಹಾಗೆಯೇ ಇದೆ. ಯಾರೇ ಏನೆಂದರೂ ತನ್ನ ಪಾಡಿಗೆ ತನ್ನದೇ ಜೀವನ ಶೈಲಿ ಯಾರಿಗೂ ಅಂಜದ ಅಳುಕದ ಸ್ವಲ್ಪ ಒರಟು ಸ್ವಭಾವ. ಆದರೆ ಹೃದಯ ಹೂವಿನ ಹಾಗೆ. ಅಮ್ಮ ಅಂದರೆ ಭಕ್ತಿ ಗೌರವ.

"ಸಾಹುಕಾರನ ಮನೆಯಲ್ಲಿ ಸತ್ತರೂ ಆಳಾಗಿ ದುಡಿಯಲು ಹೋಗಲು ಅವನು ಸಿದ್ಧನಿಲ್ಲ" ಹಳ್ಳಿಯಲ್ಲಿ ಬೇರೆಯವರ ಹೊಲದಲ್ಲಿ ಕೂಲಿಯಾಳು ಆಗಿ ದುಡಿಯಲು ಸಿದ್ಧ. ಅತ್ಯಂತ ಸ್ವಾಭಿಮಾನಿ. ಈ ಗೀತೆ ಚಿತ್ರಕ್ಕೆ ಅತ್ಯಂತ ಪೂರಕವಾಗಿದೆ. ಇಲ್ಲಿರುವ ಸಾಹಿತ್ಯ ಭದ್ರನ ಸ್ವಭಾವವನ್ನು ಬಣ್ಣಿಸುತ್ತದೆ. ಕೆಟ್ಟ ಮನುಷ್ಯರ ಕೆಟ್ಟ ಗುಣಗಳನ್ನು ಅವಲೋಕಿಸುತ್ತದೆ. ಭದ್ರ ತನ್ನ ಹಾಡಿನಲ್ಲಿ "ಕಸವನ್ನು ತಿಂದರೂ ಕೊನೆಗೆ ಹಾಲು ನೀಡುವೆ ನಮಗೆ, ಹಾಲನ್ನು ಕುಡಿದ ಜನರು ವಿಷವನ್ನು ಕಕ್ಕುತಲಿಹರು ಸದಾ ದ್ವೇಷ, ಸದಾ ರೋಷ ಅದಕ್ಕೆ ಹೀಗಿದೆ ಈ ದೇಶ" ಎಂದು ಹಳ್ಳಿಗರ ಸಿದ್ಧಾಂತವನ್ನು ಹೇಳುತ್ತಾನೆ.

ಹಳ್ಳಿಗರ ನಡುವೆಯೂ ದ್ವೇಷ ರೋಷ ಹೊಟ್ಟೆ ಕಿಚ್ಚು ಇದ್ದದ್ದೆ. ಒಬ್ಬನು ಒಳ್ಳೆಯ ಬೆಳೆ ಬೆಳೆದರೆ ಅದನ್ನು ಸಹಿಸದವ ರಾತ್ರೋ ರಾತ್ರಿ ಬೆಳೆಗೆ ಬೆಂಕಿ ಹಾಕಿದ ನೈಜ ಉದಾಹರಣೆಗಳಿವೆ. ಮನುಷ್ಯರ ಸ್ವಭಾವವನ್ನು ಭದ್ರ ಚೆನ್ನಾಗಿಯೇ ಹಾಡಿ ತೋರಿಸಿದ್ದಾನೆ. ಗೀತೆಗಳ ರಚನೆಕಾರರಾದ ಚಿ. ಉದಯಶಂಕರ್ ಕನ್ನಡಿಗರ ನಾಡಿ ಮಿಡಿತವನ್ನು ಚೆನ್ನಾಗಿಯೇ ಬಲ್ಲರು. ರಾಜಣ್ಣನವರ ಯಾವ ಭಾವ, ಶೈಲಿ, ಅಭಿನಯ ಪ್ರೇಕ್ಷಕರನ್ನು ಮುಟ್ಟುತ್ತದೆ ಎಂದು ತಿಳಿದ ಚಿ. ಉದಯ ಶಂಕರ್ ಹಾಡಿನಲ್ಲಿ ಭದ್ರನ ಸ್ವಭಾವವನ್ನು ಚಿತ್ರಿಸಿದ್ದಾರೆ. ಈ ಹಾಡು ಈಗಲೂ

ಜನಮಾನಸದಲ್ಲಿ ಎಷ್ಟು ಹಸಿರಾಗಿದೆ ಎಂದರೆ ಸದಾ ಕಾಲ ಅಲ್ಲಿ ಇಲ್ಲಿ ಕೇಳ ಸಿಗುತ್ತದೆ. ಇಡೀ ಹಾಡಿನಲ್ಲೇ ಅವನ ಒಳ್ಳೆಯ ಗುಣ ಸಾಹುಕಾರನ ಕೆಟ್ಟ ಗುಣಗಳ ಪರಿಚಯವಾಗುತ್ತದೆ. ಹಸುಪಿನ ಹಾಲು ಶ್ರೇಷ್ಠ ಕಸವನ್ನೇ ತಿಂದರೂ ಕೊನೆಗೆ ಹಾಲನ್ನೇ ನೀಡುವೆ ನಮಗೆ ಎನ್ನುತ್ತಾ ಒಳ್ಳೆ ಜನರ ಗುಣ ಕೆಟ್ಟ ಜನರ ಗುಣವನ್ನು ಧೈರ್ಯವಾಗೇ ಹೇಳುವ ವೀರಭದ್ರ ಗುಣದಲ್ಲಿ ಅತ್ಯಂತ ಚಿನ್ನ. ಹೊರಗೆ ಘಟಿಂಗನಂತೆ ಕಂಡರೂ ಮನಸ್ಸು ಬೆಣ್ಣೆಯಂತೆ ಮೃದು. ಹೆಣ್ಣು ಮಕ್ಕಳಿಗೆ ಗೌರವ ನೀಡುವ ಭದ್ರ, ಅತ್ತಿಗೆ, ಅಮ್ಮನಿಗೆ ಅಪಾರ ಗೌರವ ನೀಡುತ್ತಾನೆ.

ದೇಸಿ ಸೊಗಡನ್ನು ನೋಡಬೇಕಾದರೆ ಸಂಪತ್ತಿಗೆ ಸವಾಲ್ ಸಿನೆಮಾ ನೋಡಬೇಕು. ಆರಂಭದಿಂದ ಅಂತ್ಯದವರೆವಿಗೂ ಸಿನೆಮಾ ಹಳ್ಳಿಯಲ್ಲಿಯೇ ನಡೆಯುತ್ತದೆ. ಕಿವಿಗೆ ಓಲೆ, ಕಾಲಿನಲ್ಲಿ ಕಾನ್ಪುರ ಚಪ್ಪಲಿ, ಕಚ್ಚೆ ಪಂಚೆ, ಕೆಂಪು ಷರ್ಟು, ಸೊಂಟಕ್ಕೆ ಕೊಡಲಿ ಸಿಕ್ಕಿಸಿಕೊಂಡಿದ್ದಾನೆ. ನೋಡಿದ ತಕ್ಷಣ ಘಟಿಂಗ ಅನ್ನಿಸಿದರೂ ನಿಜವಾದ ಘಟಿಂಗನಲ್ಲ ಕಡಿದರೆ ಎರಡಾಳಾಗುತ್ತಾನೆ. ತೋಳಿನಲ್ಲಿ ಕಸುವು, ಬೆಟ್ಟವನ್ನೆ ಕಡಿದು ಉರುಳಿಸುವ ಛಲ. ಕೂಲಿ ಮಾಡಿ ತಿಂದರೂ ಆತ್ಮಾಭಿಮಾನಕ್ಕೇನೂ ಕೊರತೆಯಿಲ್ಲ. ಅವನದು ಸಂಪೂರ್ಣ ಹಳ್ಳಿ ಸೊಗಡಿನ ಭಾಷೆ, ಏಟಿಗೆ ಎದಿರೇಟು, ಮಾತಿಗೆ ಮಾತು, ಊಟ ಬಲ್ಲವನಿಗೆ ರೋಗವಿಲ್ಲ, ಆತು ಬಲ್ಲವನಿಗೆ ಜಗಳವಿಲ್ಲ ಎನ್ನುವ ಹಾಗೆ ಮಾತಿನಲ್ಲಿ ಯಾರೂ ಅವನನ್ನು ಸೋಲಿಸಲಾರರು. ಮಾತಿಗೆ ಮಾತಾಡಿ ನಾಟಕ ಸಿನೆಮಾ ಆದದ್ದು. ಮೂಲತಃ ರಂಗಭೂಮಿ ಹಿನ್ನೆಲೆಯಿಂದ ಬಂದ ರಾಜಣ್ಣನವರಿಗೆ ಎದುರಿಗೆ ಸ್ವತಃ ನಿಂತ ಕಲಾವಿದ ಹೇಗೆ ಮಾತಾಡುತ್ತಾನೆ. ಅವನ ದೇಹ ಭಾಷೆ ಹೇಗೆ ಯಾವಾಗ ಪ್ರೇಕ್ಷಕ ನಗುತ್ತಾನೆ, ಚಪ್ಪಾಳೆ ಹೊಡೆಯುತ್ತಾನೆ, ಸೀಟಿ ಹೊಡೆಯುತ್ತಾನೆ, ಎಲ್ಲಾ ತಿಳಿಸಿದೆ. ಅದನ್ನು ಬಂಡವಾಗಿಸಿಕೊಂಡು ಪ್ರೇಕ್ಷಕರ ನಾಡಿ ಮಿಡಿತ ಬಲ್ಲ ರಾಜಣ್ಣನವರು ನಾಟಕ ಜನಪ್ರಿಯತೆ ಪಡೆದ ಹಾಗೆ ಸಿನೆಮಾವನ್ನು ಜನಪ್ರಿಯತೆಯ ತುತ್ತತುದಿಗೆ ಏರಿಸಿದ್ದಾರೆ. ಬಡವರ ಕಣ್ಣೀರಿಗೆ ಮಿಡಿಯುವ ಅವರಿಗಾಗಿ ದುಡಿಯುವ, ಪರೋಪಕಾರಿ ಮನಸ್ಸಿನವನು. ರುದ್ರಿ ಬೆಳ್ಳಿ ಕೊಡ ಹಿಡಿದು ತನ್ನ ಒಡವೆ ವಸ್ತ್ರ ಎಲ್ಲಾ ಜನರ ಕಣ್ಣು ಕುಕ್ಕಲಿ ಎಂದು ಊರಿನ ಕೆರೆಗೆ ನೀರು ತರಲು ಹೋಗುತ್ತಾಳೆ. ಕೆರೆಯಲ್ಲಿ ಸ್ನಾನ ಮಾಡುತ್ತಿದ್ದ ಕಪ್ಪು ಬಣ್ಣದ ಹುಡುಗಿಗೆ

"ಎಷ್ಟು ತಿಕ್ಕಿದರೂ ನಿನ್ನ ಬಣ್ಣ ಅಷ್ಟೇ ಹೋಗೆ ಆ ಕಡೆಗೆ"

ಎಂದು ಹಂಗಿಸುತ್ತ ನೀರು ತುಂಬಿಕೊಂಡು ಬರುವಾಗ ಬಾಳೆಹಣ್ಣಿನ ಸಿಪ್ಪೆ ದಾರಿಯಲ್ಲಿ ಬಿದ್ದಿರುತ್ತದೆ. ಅದನ್ನು ನೋಡದೆ ತುಳಿದ ಅವಳು ಜಾರಿ ಬೀಳುತ್ತಾಳೆ. ನನ್ನ ದಾರಿಗೆ ಯಾರು ಬಾಳೆ ಹಣ್ಣಿನ ಸಿಪ್ಪೆ ಬಿಸಾಕಿದ್ದಾರೆ ಎಂದು ಬಾಯಿಗೆ ಬಂದ ಹಾಗೆ ಬೈಯುತ್ತಾಳೆ. ಹಣ್ಣು ತಿಂದು ಸಿಪ್ಪೆ ಬಿಸಾಕಿದ ಭದ್ರ ತನ್ನದೇನೂ ತಪ್ಪಿಲ್ಲ ದಾರಿಯಲ್ಲಿ ನಡೆಯುವವರು ಕಣ್ಣು ಬಿಟ್ಟು ನೋಡಿಕೊಂಡು ಬರಬೇಕು ಎಂದು ವಾದಿಸುತ್ತಾರೆ. ಸರಿ ಇಬ್ಬರಿಗೂ ಜಗಳ ಶುರು. ಉರಿಯುವ ಬೆಂಕಿಗೆ ತುಪ್ಪ ಸುರಿದಂತೆ ಜಗಳದ ಬಿಸಿ ಕಾವು ಮತ್ತಷ್ಟು



ಏರುತ್ತದೆ. ಇಲ್ಲಿ ನಾವು ಗಮನಿಸಬೇಕಾದದ್ದು ಇಬ್ಬರ ಕೋಳಿ ಜಗಳ ಹಾಗೂ ಅವರ ಭಾಷೆಯ ಸೊಗಡು. ಅವಳು ಬೇವರ್ಸಿ ಎಂದರೆ ಇವನು ಬಿಕನಾಸಿ ಎನ್ನುತ್ತಾನೆ. ಅವಳು ಹಾಳಾದವನೆ ಎಂದರೆ ಇವನು ನಿಮ್ಮ ಅಪ್ಪ, ನಿಮ್ಮ ತಾತ ಎನ್ನುತ್ತಾನೆ. ಈ ಎಲ್ಲ ಮಾತುಗಳು ಸಿನೆಮಾ ನೋಡುಗರಿಗೆ ಅತ್ಯಂತ ಮಜಕೊಡುತ್ತದೆ. ಅಲ್ಲಿ ಜನಪದ ಶೈಲಿಯ ಬೈಗುಳ ಜನಪ್ರಿಯವಾಗುತ್ತದೆ. ಕಲೆ, ಸಂಸ್ಕೃತಿ, ಸಮಾಜವನ್ನು ತಿದ್ದುವ ಯಾವ ಗೋಜಿಗೂ ಹೋಗದ ನಾಯಕ ನಾಲಿಗೆ ಉದ್ದ ಹರಿಬಿಡುತ್ತಾನೆ. ಅವಳು ಚಂಡಿ ಆದರೆ ಇವನು ಮೊಂಡ. ಅವಳು ಬಾಯಿ ಬಡಕಿ ಇವನೂ ಸಹಾ ಬಾಯಿಬಡಕ. ರಾಜಣ್ಣನವರ ಚಿತ್ರಗಳು ಹೆಚ್ಚು ಮನೋರಂಜನೆಗೆ ಪ್ರಾಧಾನ್ಯತೆ ನೀಡುತ್ತ ಜನತೆಗೆ ಹತ್ತಿರವಾಗುತ್ತವೆ.

ರುದ್ರಿ ಸಾಹುಕಾರನ ಜಂಭದ ಮಗಳು. ರೇಷ್ಮೆ ಲಂಗ ದಾವಣಿ ಮೈತುಂಬಾ ಒಡವೆ, ಹಣೆಯಲ್ಲಿ ಕುಂಕುಮ, ಕೈತುಂಬಾ ಬಳೆ, ಓಲೆ ಜುಮುಕಿ, ಕೆನ್ನೆ ಸರಪಳಿ ಉದ್ದ ಜಡೆ, ಚೌಲಿ, ಕುಚ್ಚು ಹಾಕಿದ್ದಾಳೆ. ಕನಕಾಂಬರ ಹೂ ಮುಡಿದಿದ್ದಾಳೆ. ಬೇವರ್ಸಿ, ಬಿಕನಾಸಿ, ಹಳೇಬೇವರ್ಸಿ ಎಂದು ನಿರರ್ಗಳವಾಗಿ ಬೈಗುಳದ ನುಡಿ ಮುತ್ತುಗಳನ್ನು ಉದುರಿಸುತ್ತಾಳೆ. ಇವಳ ಭಾಷೆಯಲ್ಲಿಯೇ ದೇಸಿತನ ಅಡಗಿದೆ. ಜನಪದ ನುಡಿ ತಂತಾನೆ ಹೊರಬಂದಿದೆ. ಈ ಎಲ್ಲಾ ಸಣ್ಣ ಪುಟ್ಟ ಅಂಶಗಳು ರಾಜಣ್ಣನವರ ಚಿತ್ರಗಳಲ್ಲಿ ತಂತಾನೆ ಕಂಡು ಬರುತ್ತವೆ. ಏನೇ ಬಂದರೂ ಹೆದರದ ಭದ್ರ ರುದ್ರಿಗೆ ಬಾಯಿ ಮುಚ್ಚಿಕೊಂಡು ಹೋಗೆಲೆ ಎಂದು ಬೈದು ಹೇಳುತ್ತಾನೆ. ನಮ್ಮ ಅಪ್ಪನಿಗೆ ಹೇಳಿ ಮಾಡಿಸುತ್ತೇನೆ ಎಂದು ಸಿಟ್ಟು ಕೋಪ ಅಸಹಾಯಕತೆಯಿಂದ ರುದ್ರಿ ಕೊತಕೊತ ಎಂದು ಕುದಿಯತ್ತ ಹೋಗುತ್ತಾಳೆ.

ಭದ್ರನ ಅಣ್ಣ ವಿಶ್ವ (ರವಿಶಂಕರ್) ಸಾಹುಕಾರನಲ್ಲಿ ಮದುವೆಗೆ ಸಹಾಯ ಕೇಳುವ ಪ್ರಸಂಗ, ಸಹಾಯ ಎಂದು ಒಂದು ಸಾವಿರ ಪಡೆದ ವಿಷಯ ತಿಳಿದ ಭದ್ರ ಇದರಲ್ಲಿ ಏನೋ ಮಸಲತ್ತು ಇದೆ. ಯಾರಿಗೂ ಒಂದು ಆಣೆ ಕೊಡದ ಸಾಹುಕಾರ ಈ ದಿನ ೧೦೦೦ ರೂಪಾಯಿ ಕೊಟ್ಟಿದ್ದಾನೆ ಎಂದರೆ ನಂಬಲು ಸಾಧ್ಯವಿಲ್ಲ ಎನ್ನುವ ಭದ್ರನ ಬಾಯಿಗೆ ಬೀಗ ಹಾಕಲು ಅವನ ಅಣ್ಣ, ಅಮ್ಮ ಪ್ರಯತ್ನಿಸುತ್ತಾರೆ. ಭದ್ರನ ಮನೆ ಒಂದು ಸೆಟ್. ಸಾಧಾರಣ ಬಡವರ ಮನೆ, ಮನೆ ಮುಂದೆ ಹಸು ಕಟ್ಟಿದ್ದಾರೆ. ಗೋಡಗೆ ಮಂಕರಿ ನೇತುಹಾಕಲಾಗಿದೆ. ಮನೆ ಮುಂದೆ ಕಲಗಚ್ಚು ಇಟ್ಟಿದ್ದಾರೆ. ಸಣ್ಣ ಬಾಗಿಲು ಒಳಗಡೆ ಬಚ್ಚಲುಮನೆ, ಅಲ್ಲಿ ಹಿತ್ತಾಳೆ ಚೊಂಬು, ಕೊಳಗ ಇಟ್ಟಿದ್ದಾರೆ. ಮನೆಯ ಗೋಡೆಯಲ್ಲಿ ರಾಮಲಕ್ಷ್ಮಣ ಸೀತೆ ಫೋಟೋ ಹಾಕಲಾಗಿದೆ. ಮನೆಯ ಮಧ್ಯೆ ಮರದ ಕಂಬಗಳಿವೆ. ಬಟ್ಟೆ ನೇತುಹಾಕಲು ಮರದ ಪಟ್ಟಿ ಇದೆ. ಅಲ್ಲಿ ಕೆಲವು ಬಟ್ಟೆ ನೇತು ಹಾಕಲಾಗಿದೆ. ಇನ್ನಿತರ ದಿನನಿತ್ಯದ ವಸ್ತುಗಳು.

ಮನೆಗೆ ಬಂದ ಬಾಲಕೃಷ್ಣ ಸಾಹುಕಾರನ ಮನೆಯಲ್ಲಿ ನಡೆದ ಸಂಗತಿಯನ್ನು ಉಪ್ಪು ಖಾರ ಹಚ್ಚಿ ಹೇಳುತ್ತಾನೆ. "ಊರಿಗೊಂದು ನಂದಿಕಂಭ" ಅನ್ನೋ ಹಾಗೆ ನಿನ್ನ ಮಗ. ಭದ್ರ ಗೌಡರ ಹತ್ತಿರ ಏಕೆ ಜೀತ ಮಾಡಬಾರದು" ಎಂದು ಭದ್ರನನ್ನು ಕೆಣಕುತ್ತಾನೆ. ಅದಕ್ಕೆ ಭದ್ರ ಪ್ರಾಣ ಹೋದರೂ ಸಾಹುಕಾರನ ಆಳಾಗಲು ಸಾಧ್ಯವಿಲ್ಲ ಎಂದು ಖಡಾಖಂಡಿತವಾಗಿ ಹೇಳುತ್ತಾನೆ. ಸಾಹುಕಾರನ ಮನೆ ಮಾತು ಚೆಂದ ಬಡವನ ಮನೆ ಊಟ ಚೆಂದ ಎಂದು ನಮ್ಮ ಹಿರಿಕರು ಹೇಳುತ್ತಾರೆ. ಶ್ರೀಮಂತರ ಮನೆಗೆ ಹೋದರೆ ಅವರು ಬರೇ ಬಾಯಿ

ತುಂಬಾ ಮಾತಾಡಿ ಮೂಗಿಗೆ ತುಪ್ಪ ಸವರಿ ಕಳುಹಿಸುತ್ತಾರೆ. ಆದರೆ ಬಡವ ತನ್ನ ಮನೆಗೆ ಬಂದವರಿಗೆ ಹೊಟ್ಟೆ ತುಂಬಾ ಊಟ ಹಾಕಿ ಕಳುಹಿಸುತ್ತಾನೆ. ಹಸಿದವನಿಗೆ ಗೊತ್ತು ಹಸಿವಿನ ಬೆಲೆ.

ಊರಿನ ತುಂಬಾ ಭದ್ರನ ಬೆಂಗಲಿಗರಿದ್ದಾರೆ. ಅದರಲ್ಲಿ ಸಾಹುಕಾರನ ಮನೆಯಲ್ಲಿ ಗುಮಾಸ್ತನಾಗಿ ಕೆಲಸ ಮಾಡುವ ಗುಮಾಸ್ತನ ಮಗ ಸಹ ಒಬ್ಬ. ಭದ್ರನಿಗೆ ಜನಬಲ ಇದೆ. ಸಾಹುಕಾರನಿಗೆ ಹಣ ಬಲ ಮಾತ್ರ ಇದೆ. ಬಡವನೊಬ್ಬ ಚಳಿಜ್ವರ ಬಂದು ಕೆಲಸ ಮಾಡಲು ಆಗದೆ ಹೋದಾಗ ಅವನ ಪಾಲಿನ ಕೆಲಸ ಮಾಡಿಕೊಟ್ಟು ಬಂದ ಕೂಲಿ ಹಣವನ್ನು ಬಡವನ ಕೈಲಿ ಇಟ್ಟು ಬಂದ ಭದ್ರ ತನ್ನ ಅಣ್ಣನ ಮದುವೆಗೆ ಹೋಗದ ಪರಿಸ್ಥಿತಿ ಬರುತ್ತದೆ. ಅಲ್ಲಿ ತಾಯಿ ಅವನಿಗಾಗಿ ಕಾಯುತ್ತಿದ್ದಾಳೆ. ಆದರೆ ಭದ್ರ ಇಲ್ಲಿ ಕಾಡಿನಲ್ಲಿ ಮರ ಕಡಿಯುತ್ತಿದ್ದಾನೆ. ತಾಯಿಯ ತಳಮಳ ಬೇರೆಲ್ಲೂ ಕಾಣ ಸಿಗುವುದಿಲ್ಲ. ತಾಯಿ ತನ್ನ ಮಗನಿಗಾಗಿ ಕಾದು ಕಾದು ಸುಸ್ತಾದರೂ ಮಗ ಬರುವುದಿಲ್ಲ. ಹೊರಗಡೆ ಬಾಯಿಗೆ ಬಂದಂತೆ ಬೈಯ್ಯುವ ಅಮ್ಮನಿಗೆ

"ಅಣ್ಣನ ಮದುವೆಗೆ ಬರಲಿಲ್ಲ ಭದ್ರ, ಎಲ್ಲಿಗೆ ಹೋದನೋ, ಯಾರೊಂದಿಗೆ ಜಗಳಕ್ಕೂ ನಿಂತನೋ" ಎನ್ನುವ ತವಕ. ಹೆತ್ತ ಕರಳು. ಹೆತ್ತವರಿಗೆ ಹೆಗ್ಗಣ ಮುದ್ದು ಎನ್ನುವ ಹಾಗೆ. ಮಗನನ್ನು ಕಂಡರೆ ಅಪಾರ ಪ್ರೀತಿ. ಹೊರಗಡೆ ತೋರಿಸಿಕೊಳ್ಳದ ಒಳಗಡೆ ಮುಚ್ಚಿಡಲೂ ಆಗದ ಪ್ರೀತಿ. ಕೊನೆಗೂ ಕಿರಿಮಗ ಬರಲಿಲ್ಲ ಮದುವೆ ಆಗಿಹೋಯ್ತು. ತಾಯಿ ಕಣ್ಣೀರು ಹಾಕುತ್ತಾಳೆ. ಸ್ವಂತ ಅಣ್ಣನ ಮದುವೆಗೆ ಬರಲು ಆಗದ ಘನಕಾರ್ಯ ಇವನಿಗೇನದೆ ಎಂಬುದೇ ಪ್ರಶ್ನೆ. ಮನೆಗೆ ಮಾರಿ ಊರಿಗೆ ಉಪಕಾರಿ ಎನ್ನುವಂತೆ ಭದ್ರ ಬೇರೆ ಯಾರಿಗೋ ಸಹಾಯ ಮಾಡಲು ಹೋಗಿದ್ದಾನೆ. ಅಣ್ಣನ ಮದುವೆಗೆ ಬರಲಾಗದೆ ಹೋದಾಗ ತಾಯಿ "ಮುಂಡೇ ಮಗನೇ ಎಲ್ಲಿ ಹೋಗಿದ್ದೆ ಸಾಯೋಕೇ" ಎಂದು ಬಡಕೋತಾಳೆ. ಬೊಗಳೋ ಎಂದಾಗ ಭದ್ರ "ಬೌ ಬೌ ಬೌ" ಎಂದು ಬೊಗಳಿ ಅಮ್ಮನನ್ನು ಮತ್ತಷ್ಟು ಕೆರಳಿಸುತ್ತಾನೆ.

ರಾತ್ರಿ ಕದ್ದು ಮನೆಗೆ ಬರುವ ಭದ್ರನನ್ನು ತಾಯಿ ಕಾಲುಹಿಡಿದುಕೊಂಡು ಪ್ರಸ್ತದ ಮನೆಗೆ ಕರೆದುಕೊಂಡು ಬಂದು ಸೊಸೆಯ ಕೈಯಿಂದ ಮೈದುನನಿಗೆ ಹಾಲು ಕುಡಿಸುತ್ತಾಳೆ. ಇವತ್ತಿನಿಂದ ಇವನು ನಿನ್ನ ಮಗ ಇವನ ಜವಾಬ್ದಾರಿ ನಿನ್ನ ಮೇಲೆ ಎಂದು ಹೇಳುವ ಪ್ರಸಂಗ ನಿಜಕ್ಕೂ ಮನ ಮಿಡಿಯುತ್ತದೆ. ಅತ್ತಿಗೆ ತನ್ನ ನಾದಿನಿ ಮೈದುನರನ್ನು ತನ್ನ ಮಕ್ಕಳಂತೆ ನೋಡಿಕೊಳ್ಳಲು ನಮ್ಮ ಸಮಾಜ ಬಯಸುತ್ತದೆ. ಅಣ್ಣ ತಂದೆ ಇದ್ದ ಹಾಗೆ ಇಂತಹ ಒಂದು ಸಂಸ್ಕೃತಿ ನಮ್ಮ ಜನರಲ್ಲಿ ಇದೆ. ಅತ್ತಿಗೆ ಮೈದುನರನ್ನು ಚೆನ್ನಾಗಿ ನೋಡಿಕೊಂಡ ನೋಡಿಕೊಳ್ಳದ ಹಲವಾರು ಕಥೆಗಳಿವೆ. ಕೆಲವು ಅತ್ತಿಗೆಯರು ಮೈದುನನನ್ನು ಸರಿಯಾಗಿ ನೋಡಿಕೊಳ್ಳದೆ ಮನೆಯಿಂದ ಹೊರಹಾಕಿ ಅನ್ನ ನೀರು ಕೊಡದೆ ಆಸ್ತಿ ಪಾಸ್ತಿ ಕೊಡದೆ ಸತಾಯಿಸಿದ್ದು ಇದೆ. ಆದರೂ ಹಲವು ಜನಪದ ಕಥೆಗಳಲ್ಲಿ ಅತ್ತಿಗೆ-ಮೈದುನರ ಬಗ್ಗೆ ಒಳ್ಳೆ ಪ್ರೀತಿ ಸ್ನೇಹ ವಾತ್ಸಲ್ಯದ ಕಥೆಗಳಿವೆ. ಗಂಡನಿಗೆ ಹಾಲು ಕೊಡುವ ಮುನ್ನ ಮೈದುನನಿಗೆ ಹಾಲು ನೀಡುವುದು ವಾತ್ಸಲ್ಯದ ಸಂಕೇತವೇ ಹೌದು. ಮನೆಗೆ ಬಂದ ಭದ್ರನನ್ನು ಕಾಲು ತೊಳೆದು ಬಾ, ಹಿಮ್ಮಡಿ ತೊಳೆದುಕೊಂಡು ಬಾ ಎಂದು ಗದರುವ ಅಮ್ಮ ಜನಪದ ನಂಬಿಕೆಯನ್ನು ಮಗನಿಗೂ ಕಲಿಸಿಕೊಡುತ್ತಾಳೆ. ಅವತ್ತಿನಿಂದ ಸೊಸೆಯ ಮಡಿಲಿಗೆ ಮೈದುನನನ್ನು ಹಾಕುತ್ತಾಳೆ. ಭದ್ರನಿಗೂ ಅತ್ತಿಗೆ ಮೇಲೆ ಅಪಾರ ಗೌರವ, ತಾಯಿಯಷ್ಟೇ ಮಮತೆ ವಾತ್ಸಲ್ಯ. ಭದ್ರನಿಗೆ ಅಂದಿನಿಂದ ಎರಡನೇ ತಾಯಿ ಸಿಕ್ಕಂತೆ ಆಯಿತು.

ತಾಯಿ ಮಗನನ್ನು ಗಣೆಮರ, ಕೆಟ್ಟ ಮೇಲೆ ಬುದ್ಧಿ ಬಂತು ಅಟ್ಟಿದ ಮೇಲೆ ಒಲೆ ಉರಿಯಿತು. ನಿನಗೆ ಯಾವಾಗ ಬುದ್ಧಿ ಬರುತ್ತೋ ಆ ನಂಜನಗೂಡಿನ ನಂಜುಂಡೇಶ್ವರನಿಗೆ ಗೊತ್ತು ಎಂದು ಹಣೆ ಹಣೆ ಚಚ್ಚಿಕೊಳ್ಳುತ್ತಾಳೆ. ಈ ಪಾತ್ರದಲ್ಲಿ ರಂಗಭೂಮಿ ಕಲಾವಿದೆ. ಎಂ.ವಿ. ರಾಜಮ್ಮ ಬಹಳ ಚೆನ್ನಾಗಿ ಅಭಿನಯಿಸಿದ್ದಾರೆ. (ಸತಿ ಶಕ್ತಿ ಮುಂತಾದ ಚಿತ್ರಗಳಲ್ಲಿ ತಾಯಿಯಾಗಿ ನಟಿಸಿದ್ದವರು, ಒಂದು ಕಾಲಕ್ಕೆ ನಾಯಕಿ ಈಗ ಅಮ್ಮ. ಇದು ಸಿನೆಮಾ ಲೀಲೆ. ಇಲ್ಲಿ ಹೆಣ್ಣು ಮಕ್ಕಳ ವಯಸ್ಸಿಗೆ ನಿರ್ಬಂಧ ಇದೆ. ಗಂಡಸರಿಗೆ ಎಷ್ಟೇ ವಯಸ್ಸಾದರೂ ಪರವಾಗಿಲ್ಲ. ಅವರು ಚಿರತರುಣರು ಪುರುಷ ಪ್ರಧಾನ ಸಿನೆಮಾ) ಹಳ್ಳಿಯ ಚಿತ್ರಣ, ಹಳ್ಳಿಯ ಸೊಗಡು ಎದ್ದು ಕಾಣುವ ಚಿತ್ರ "ಸಂಪತ್ತಿಗೆ ಸವಾಲ್" ಹಳ್ಳಿ ಹಾದಿಯಲ್ಲಿ ಹೆಣ್ಣು ಮಕ್ಕಳು ಬಿಂದಿಗೆ ಹಿಡಿದು ಸಾಗಿದ್ದಾರೆ. ಮಕ್ಕಳು ಬುಗುರಿ ಆಡುತ್ತಿದ್ದಾರೆ. ಹುಲ್ಲಿನ ಹೊರೆ ಹೊತ್ತ ಹೆಣ್ಣು ಮಕ್ಕಳು ಅಲ್ಲೆ ಎತ್ತಿನ ಗಾಡಿಮುಂದೆ ಸಾಗಿದೆ. ಹುಲ್ಲಿನ ಬಣೆ, ರಾಗಿ ತೂರುವ ರೈತರು, ಅಡಿಕೆ ತೋಟ, ಕಲ್ಲಂಗಡಿ ತೋಟ, ನೆಲದಲ್ಲಿ ಸೊಂಪಾಗಿ ಬೆಳೆದ ಹಣ್ಣು, ಎಲೆ ಎಲೆಗೂ ಕಾಯಿ.

ಇಲ್ಲೆ ಭದ್ರ ಹಾಗೂ ರುದ್ರಿಗೆ ಜಗಳ ಆರಂಭ. ಅವಳು ನೀನು ಗಂಡಸೇ ಆಗಿದ್ರೆ ನಮ್ಮ ಹೊಲದಲ್ಲಿ ಕಾಲು ಇಡು, ಕಾಯಿ ಕೀಳು, ತಿನ್ನು ನೋಡವಾ ಎಂದು ಸವಾಲು ಹಾಕಿ ಅವನ ಗಂಡಸುತನಕ್ಕೆ ಸವಾಲು ಒಡ್ಡುತ್ತಾಳೆ. ಮೊದಲೇ ಅವನು ಒಡ್ಡ, ಮೊಂಡು ತೋಟಕ್ಕೆ ನುಗ್ಗಿ ಕಾಯಿ ಕಿತ್ತು ತಿಂದೇ ಬಿಡುತ್ತಾನೆ. ತನ್ನ ಸ್ನೇಹಿತರಿಗೂ ಕೊಡುತ್ತಾನೆ ತಿಂದವರು ಸಾಹುಕಾರನನ್ನು ನೋಡಿ ಹೆದರಿ ಓಡಿಹೋಗುತ್ತಾರೆ. ಸಿಲ್ಕ್ ಜುಬ್ಬ, ಚಿನ್ನದ ಸರ, ಡಾಲರ್, ದಪ್ಪ ಮೀಸೆ ಕೈಗಳ ತುಂಬಾ ಉಂಗುರ ತನ್ನ ಶ್ರೀಮಂತಿಕೆ ಪ್ರದರ್ಶನ ಮಾಡುತ್ತ ಬಂದ ಗೌಡ ಭದ್ರನಿಗೆ ಚೆನ್ನಾಗಿ ಬೈಯುತ್ತಾನೆ. "ಬಡ್ಡಿಮಗನೆ ಹೊಡೆದರೆ ಬುರುಡೆ ಬಿಚ್ಚಿ ಹೋಗಬೇಕು" ಎನ್ನುತ್ತಾನೆ. ಕತ್ತಾಳೆ ಮುಳ್ಳು ಸುತ್ತ ಬೆಳೆದಿದೆ, ಅದರಲ್ಲಿಯೂ ಮುಳ್ಳಿದೆ ಗೌಡನ ಮಾತಿನಲ್ಲೂ ಮುಳ್ಳಿದೆ. ಮತ್ತದೆ ಜಗಳ, ಮನಸ್ತಾಪ.

ನಮ್ಮ ದೇಶದ ಅತಿ ದೊಡ್ಡ ಸಮಸ್ಯೆ ಸಂಪನ್ಮೂಲಗಳ ಅಸಮರ್ಪಕ ಹಂಚಿಕೆ. ಬಡವ ಶ್ರೀಮಂತ ಎಂಬ ಎರಡು ವರ್ಗಗಳು, ಬಡವ ದಿನೇ ದಿನೇ ಮತ್ತಷ್ಟು ಬಡವನಾದರೆ ಶ್ರೀಮಂತ ಮತ್ತಷ್ಟು ಶ್ರೀಮಂತನಾಗುತ್ತಾನೆ. ಇವರಿಬ್ಬರ ಮಧ್ಯೆ ಒಂದು ದೊಡ್ಡ ಕಂದಕ. ಆಸ್ತಿ ಕಾರಣ ಬಡವ ಶ್ರೀಮಂತರ ಮಧ್ಯೆ ಸದಾ ಮನಸ್ತಾಪ. ಉಳ್ಳವನು ಇಲ್ಲದವನ ಮೇಲೆ ಸದಾ ತನ್ನ ಹಕ್ಕು ಚಲಾಯಿಸುತ್ತಿರುತ್ತಾನೆ. ಬಡವ ಶ್ರೀಮಂತನ ಅಗತ್ಯಗಳನ್ನು ಪೂರೈಸುವುದರಲ್ಲೇ ತನ್ನ ಜೀವನ ಕಳೆಯುತ್ತಾನೆ.

ಈ ಸಾಹುಕಾರ ತನ್ನ ಹಳ್ಳಿಯಲ್ಲಿ ಬಡಜನರನ್ನೆಲ್ಲಾ ತನ್ನ ಜೀತದಾಳುಗಳಾಗಿ ಇರಲಿ ಎಂದು ಬಯಸುವವನು. ತಮ್ಮ ಕೆಳಗೆ ಕೆಲಸ ಮಾಡುವ ಹಲವಾರು ಕೂಲಿಯಾಳುಗಳ ಜೀವನವನ್ನು ನಾಶ ಮಾಡಿದ್ದಾರೆ. ಅವರ ದಾಸ್ಯಕ್ಕೆ ಸಹಿಸಿಕೊಂಡವರು ಎಷ್ಟೋ ಇಂತಹ ವಿಷಯಗಳನ್ನುಳ್ಳ ಜನಪದ ಕತೆಗಳು ನಮ್ಮಲ್ಲಿವೆ. ಗೌಡನನ್ನು ಎದುರಿಸಿದ ಅವರ ಅಧಿಕಾರವನ್ನು ಮೊಟಕುಗೊಳಿಸಿದ ಧೈರ್ಯ ಸಾಹಸದ ಕಥೆ ಸಂಪತ್ತಿಗೆ ಸವಾಲ್. ಸಂಪತ್ತು ಇದ್ದವನೇ ಎಲ್ಲಾ ಅಲ್ಲ, ಅವನು ತನ್ನ ಆಸ್ತಿಯ ಅಹಂಕಾರವನ್ನು ತನ್ನ ಮನೆಯಲ್ಲಿ ಇಟ್ಟುಕೊಳ್ಳಲಿ

ಜನಸಾಮಾನ್ಯರ ಮೇಲೆ ಅಹಂಕಾರ ತೋರಿಸುವ ಹಾಗಿಲ್ಲ ಎಂದು ಒಬ್ಬ ಸಾಮಾನ್ಯ ಕೂಲಿಯವನು ಸಾಹುಕಾರನನ್ನು ಎದುರು ಹಾಕಿಕೊಳ್ಳುವ ಅವನ ವಿರುದ್ಧ ಹೋರಾಡಿ ಗೆಲ್ಲುವ ಕಥೆ ಇದು. ಇಲ್ಲಿ ಭದ್ರ ಕೇವಲ ಒಬ್ಬ ವ್ಯಕ್ತಿಯಲ್ಲ, ಅವನು ಬಡರೈತನ ಪ್ರತಿನಿಧಿ. ಕೂಲಿಯಾಳುಗಳ ಪ್ರತಿನಿಧಿ ಅವನ ಗೆಲುವು ಒಬ್ಬ ಬಡವನ ಗೆಲುವಾಗಿರದೆ ಎಲ್ಲಾ ಬಡವರ್ಗದ ರೈತರ ಗೆಲುವು. ಒಂದೊಂದು ಬಾರಿಯೂ ಭದ್ರ ಸಾಹುಕಾರನನ್ನು ಎದುರಿಸಿದಾಗ ಮಾತಿಗೆ ಮಾತು ಬೆಳೆದಾಗ ಭದ್ರ ಮಾತಿನಲ್ಲಿ ಸಾಹುಕಾರನನ್ನು ಸೋಲಿಸಿದಾಗ ಸಾಮಾನ್ಯ ವರ್ಗ ಭದ್ರನಿಗೆ ಚಪ್ಪಾಳೆ ಸಿಳ್ಳೆ ಮೂಲಕ ತಮ್ಮವರನ್ನಾಗಿ ಮಾಡಿಕೊಳ್ಳುತ್ತವೆ. ತಮ್ಮ ಜೀವನದಲ್ಲಿ ಮಾಡಲಾಗದ ಕಾಣಲಾಗದ ಯಶಸ್ಸು ಭದ್ರನಲ್ಲಿ ಕಂಡಾಗ ಅವರಿಗೆ ಹಾಲು ಕುಡಿದಷ್ಟು ಸಂತಸ, ತಾವೇ ಗೆದ್ದ ಸಂಭ್ರಮ.

ರಾಜ್‌ಕುಮಾರ್ ಅವರು ರಾಜನಾಗದೆ ಸದಾ ಕುಮಾರನಾಗಿ ಉಳಿದರು. ಸಾಮಾನ್ಯರ ಪಾಲಿಗೆ ಸಾಮಾನ್ಯರಾದರು. ಜಮೀನುದಾರನಾಗದೆ ಬಡ ಕೂಲಿ ರೈತನಾಗಿ ರೈತನ ಮನೆ ಮಗನಾದರು. ಜನಮಾನಸದಲ್ಲಿ ಸದಾ ಚಿಮ್ಮುವ ಚಿಲುಮೆಯಂತೆ ಹರಿಯುವ ಗಂಗೆಯಂತೆ ಸಿಹಿನೀರಿಗೆ ಇವರನ್ನು ಹೋಲಿಸಬಹುದು. ತಾನೇ ರಾಜಣ್ಣ ಎಂದು ಭಾವಿಸುವ ಒಂದು ಬಡವರ್ಗವಿದೆ. ಈ ರಾಜಣ್ಣನವರ ಎ.ಕೆ. ೪೭ ಹಿಡಿದು ಧನಾಧನ್ ಎಂದು ಎಲ್ಲರನ್ನೂ ಕೊಲ್ಲುವ ಜೇಮ್ಸ್ ಬಾಂಡ್ ಅಲ್ಲ, ಸಾಮಾನ್ಯ ಜನರ ದೌರ್ಬಲ್ಯಗಳು ರಾಜಣ್ಣನವರ ಪಾತ್ರಗಳಲ್ಲಿ ಇವೆ.

ಅಣ್ಣ ವಿಶ್ವನಿಗೆ ತಮ್ಮ ಭದ್ರನ ಮೇಲೆ ಪ್ರೀತಿ ವಾತ್ಸಲ್ಯ ಇಲ್ಲವೂ ಇದೆ. ಆದರೆ ಭದ್ರನ ಕೋಪ ಹಠವನ್ನು ಅವನು ಸಹಿಸಿಕೊಳ್ಳುವುದಿಲ್ಲ. ರಾತ್ರಿ ಎಷ್ಟು ಹೊತ್ತಾದರೂ ತಮ್ಮ ಮನೆಗೆ ಬರದಿದ್ದಾಗ ತಾಯಿ ಚಿಂತೆ ಮಾಡುತ್ತಾಳೆ. ಅತ್ತಿಗೆ ಲಾಟೀನು ಹಿಡಿದು ಕಾಡಿಗೆ ಹೋಗುತ್ತಾಳೆ. ಅಣ್ಣ ಸಹಾ ಹಿಂಬಾಲಿಸುತ್ತಾನೆ. ಪ್ರೀತಿಯಿಂದ ಮನೆಗೆ ಕರೆತರುತ್ತಾನೆ. ತಮ್ಮನ ಚಪ್ಪಲಿಯನ್ನು ಅಣ್ಣ ಕೈಯಲ್ಲಿ ಹಿಡಿದು ತಂದು ತಮ್ಮನ ಮುಂದೆ ಹಾಕುತ್ತಾನೆ. ರಾತ್ರಿ ಆಯಿತು ಮನೆಗೆ ನಡಿ ಕೆಲಸ ಸಾಕು ಎಂದು ಪ್ರೀತಿಯಿಂದ ಗದರುತ್ತಾನೆ. ಅಣ್ಣ ತಮ್ಮಂದಿರ ಇಂತಹ ಅನ್ಯೋನ್ಯತೆ ಎಷ್ಟು ಜನರ ಮಧ್ಯೆ ಇದೆ ಒಂದು ಅಡಿ ಜಾಗಕ್ಕಾಗಿ ಒಂದು ಹಸು, ಒಂದು ಹಿತ್ತಾಳೆ ಪಾತ್ರೆಗಾಗಿ ದೊಡ್ಡ ಜಗಳವೇ ನಡೆದುಹೋಗುತ್ತದೆ. ನಿರ್ದೇಶಕರೂ ಇಲ್ಲಿ ಅಣ್ಣ ತಮ್ಮನ ಪ್ರೀತಿಯನ್ನು ದೃಶ್ಯದಲ್ಲಿ ತಂದಿದ್ದಾರೆ. ರಾತ್ರಿ ಭದ್ರ ಇನ್ನೂ ಬಂದಿಲ್ಲ ಎಂದಾಗ 'ಚಟ್ಟಳ್ಳಿ ದಾಸಯ್ಯ ಹಿಟ್ಟಿನ ಹೊತ್ತಿಗೆ ಹಾಜರ್' 'ಅವನು ಎಲ್ಲೂ ಹೋಗಲ್ಲ ಬರುತ್ತಾನೆ' ಎಂದ ಅಣ್ಣ ತಮ್ಮನನ್ನು ಹುಡುಕುತ್ತ ಕಾಡಿಗೆ ಹೋಗುತ್ತಾನೆ. ಇಂತಹ ಸೆಂಟಿಮೆಂಟ್ ಸನ್ನಿವೇಶಗಳು ಹಲವಾರು ರಾಜಣ್ಣನವರ ಚಿತ್ರಗಳಲ್ಲಿ ಕಾಣಸಿಗುತ್ತವೆ. ತಾಯಿ ಮಗನ ಮೇಲೆ ಪ್ರಾರಬ್ಧ, ಮುಂಡೆ ಮಗ, ಹೀಗೆ ಪ್ರಾದೇಶಿಕ ಬೈಗುಳಗಳ ಸುರಿಮಳೆ ಸುರಿಸುತ್ತಾಳೆ.

ರಾಮ ಲಕ್ಷ್ಮಣ ಸೀತೆಯ ಗುಡಿಯಲ್ಲಿ ಭದ್ರನ ಹೆಸರಿನಲ್ಲಿ ಪೂಜೆ ಅರ್ಚನೆ ಮಾಡಿಸಲು ಬಂದ ಸಂದರ್ಭಧಲ್ಲಿ ಸಾಹುಕಾರ ತನ್ನ ಮಗಳ ಹೆಸರಿನಲ್ಲಿ ಮೊದಲು ಪೂಜೆ ಆಗಬೇಕೆಂದು ಕ್ಯಾತೆ ತೆಗೆಯುತ್ತಾನೆ. ಪೂಜಾರಿಯ ಮೇಲೆ ಕೋಪಗೊಂಡು ಅವನನ್ನು ಕೆಲಸದಿಂದ ತೆಗೆಯುವ ಬೆದರಿಕೆ ಹಾಕುತ್ತಾನೆ. ಆದರೂ ಪೂಜಾರಿ "ಎಲ್ಲರ ಅಪ್ಪ ರಾಮಪ್ಪ, ಇಲ್ಲಿ ಇಲ್ಲ ಅಂದರೆ ಇನ್ನೊಂದು ಕಡೆ" ಎಂದು ಹೊರಡಲು ಸಿದ್ಧನಾದಾಗ

ಗುಮಾಸ್ತ ಅದನ್ನು ಸರಿಪಡಿಸಿ ಅದೇ ಪೂಜಾರಿ ಮುಂದುವರಿಯುವಂತೆ ಮಾಡುತ್ತಾನೆ. ರಾತ್ರಿ ಹೊತ್ತು ಹೆರಿಗೆ ನೋವಿನಿಂದ ಬಳಲುತ್ತಿದ್ದ ಹೆಣ್ಣು ಮಗಳ ರಕ್ಷಣೆಗೆಂದು ಸಾಹುಕಾರನ ಎತ್ತಿನ ಗಾಡಿ ತೆಗೆದುಕೊಂಡು ಹೋದ ಭದ್ರ ಹೆಣ್ಣು ಮಗಳೊಬ್ಬಳನ್ನು ರಕ್ಷಿಸುತ್ತಾನೆ. ಸುಸೂತ್ರ ಹೆರಿಗೆ ಆದ ನಂತರ ಗಾಡಿ ಬಿಟ್ಟು ಬರಲು ಹೋದ ಭದ್ರನಿಗೆ ೧೫ ಛಡಿ ಏಟು ಕೊಟ್ಟು ತಮ್ಮ ಹೀನ ಬುದ್ಧಿಯನ್ನು ಸಾಹುಕಾರ ಪ್ರದರ್ಶಿಸುತ್ತಾನೆ. ಅಂದಿನಿಂದ ಭದ್ರ ಮತ್ತಷ್ಟು ಕೆರಳುತ್ತಾನೆ. ಮಲಗಿದ ಸರ್ಪದ ಹೆಡೆಯನ್ನು ಮುಟ್ಟಿ ಸರ್ಪ ಕೆರಳುವಂತೆ ಮಾಡಿದ್ದಾನೆ ಅವನ ಸಂಪತ್ತಿಗೆ ನನ್ನ ಸವಾಲ್ ಎಂದು ಭದ್ರ ಅತ್ತಿಗೆ ಬಳಿ ತನ್ನ ಕೋಪವನ್ನು ಹೊರಹಾಕುತ್ತಾನೆ.



ರಾಜಣ್ಣನವರ ಪ್ರತಿ ಚಿತ್ರದಲ್ಲೂ ಜಾತ್ರೆ ರಥೋತ್ಸವ, ತೇರು, ಸಂತೆ ಇದ್ದೇ ಇರುತ್ತದೆ. ಇಲ್ಲಿಯೂ ಸಹಾ ಜಾತ್ರೆಯ ಸಮಯದಲ್ಲಿ ಊರ ಜನರು ಸಾಹುಕಾರನಿಗೆ ಹಾರ ಹಾಕಿ ಸನ್ಮಾನಿಸುತ್ತಾರೆ. ಸಂತಸಗೊಂಡ ಸಾಹುಕಾರ ನೀವೆಲ್ಲಾ ನನ್ನ ಮಕ್ಕಳು ಇದ್ದ ಹಾಗೆ ಎಂದು ಜಂಭ ಕೊಚ್ಚಿಕೊಳ್ಳುತ್ತಾನೆ. ಅಲ್ಲಿಗೆ ಬಂದ ಭದ್ರನ ಸ್ನೇಹಿತರು ಅವನನ್ನುಎತ್ತಿಕೊಂಡು ಭುಜದ ಮೇಲೆ ಕೂರಿಸಿಕೊಳ್ಳುತ್ತಾರೆ. ಆಗ ಭದ್ರ "ನಾವು ನಮ್ಮ ತಂದೆ ತಾಯಿಂದರಿಗೆ ಮಕ್ಕಳಾಗಿದ್ದೆ ಸಾಕು" ಅಲ್ಲವೇ ಎಂದಾಗ ಜನ ಹೌದು ಹೌದು ಎನ್ನುತ್ತಾರೆ. ಇದು ಸಾಹುಕಾರನಿಗೆ





ಆದ ಒಂದು ಅವಮಾನ. ಅಂದಿನಿಂದ ಭದ್ರನ ಕಂಡರೆ ಕೆಂಡ ಕಾರುತ್ತಾನೆ. ಒಬ್ಬ ಕೂಲಿಯಾಳು ಜನರ ಜಾತ್ರೆಯ ಮಧ್ಯೆ ನನ್ನ ಗೌರವ ಕಳೆದನಲ್ಲಾ ಎಂದು ಸಿಟ್ಟಾಗಿ ಸಾಹುಕಾರ ಪ್ರತೀಕಾರ ತೀರಿಸಿಕೊಳ್ಳಲು ಕಾಯುತ್ತಾನೆ.

ಚಿತ್ರದ ಕಥೆ ಮುಂದುವರೆದು ಬೆಳೆದಂತೆ ಖಳನಾಯಕ ಅಂತಾ ಒಬ್ಬ ಇರಬೇಕು ಇಲ್ಲದಿದ್ದರೆ ಸಿನೆಮಾ ಸಪ್ಪೆ. ಈ ವಿಚಾರದಲ್ಲಿ ವಜ್ರಮುನಿಯವರು ಸಾಹುಕಾರನ ಪಾತ್ರದಲ್ಲಿ ಬಹಳ ಮಿಂಚಿದ್ದಾರೆ. ಮಲ್ಲಮ್ಮನ ಪವಾಡದಿಂದ ಹಿಡಿದು ಆಕಸ್ಮಿಕ ಮುಂತಾದ ಚಿತ್ರಗಳ ವರೆವಿಗೂ ರಾಜಣ್ಣನವರ ಚಿತ್ರದಲ್ಲಿ



ವಜ್ರಮುನಿ ಅವರದು ಅಬ್ಬರದ ಅಭಿನಯ. ಅವರ ವಾಕ್ಚಾತುರ್ಯ, ಕೆಂಪಗೆ ಕಣ್ಣು, ಕಟಕಟ ಎಂದು ಹಲ್ಲು ಕಡಿಯುತ್ತಾರೆ. ಬಾಯಿ ಮಾತಿನಲ್ಲಿ ಬಾಂಬ್ ಸಿಡಿಸುತ್ತಾರೆ. ಚಿಕ್ಕ ಪುಟ್ಟ ಮಕ್ಕಳು ಕುಂತಲ್ಲೇ ಹೆದರಬೇಕು ಅಂತಹ ಭಾರಿಕುಳ. ಕಂಡವರ ಗಂಟು ನುಂಗಿದ ಸಾಹುಕಾರ ಶ್ರೀಮಂತರ ಬಗ್ಗೆ ಕೂಲಿಯಾಳುಗಳಲ್ಲಿ ಒಂದು ತರಹದ ಹೇಳಲಾಗದ ಸಿಟ್ಟು ಅಸಹಾಯಕತೆ ಇದ್ದೇ ಇರುತ್ತದೆ. ಇಂತಹ ಸಿಟ್ಟನ್ನು ಹೊರಹಾಕುವ ವ್ಯಕ್ತಿ ಹೀರೋ ಆಗುತ್ತಾನೆ. ಹಾಗೆ ಭದ್ರ ಜನರ ಮಟ್ಟಿನ ನಾಯಕ. ರಾಜಣ್ಣ ಜನಸಾಮಾನ್ಯನ ನಾಯಕ.

ಈ ಚಿತ್ರದ ಪ್ರಮುಖ ಅಂಶವೆಂದರೆ ಭದ್ರ ಹಾಗೂ ದುರ್ಗಿಯ ಜಗಳ ಸಂಪೂರ್ಣ ದೇಸಿಮಯವಾಗಿ ಚಿತ್ರೀಕರಿಸಿರುವುದು. ದುರ್ಗಿಯ ತೋಟಕ್ಕೆ ನುಗ್ಗಿ ಕಾಯಿಕದ್ದ ಹೆಣ್ಣು ಮಕ್ಕಳನ್ನು ದುರ್ಗಿಯ ಆಳುಗಳು ಮರಕ್ಕೆ ಕಟ್ಟಿಹಾಕಿದ್ದಾರೆ. ಆ ಹೆಣ್ಣು ಮಕ್ಕಳ ಮುಂದೆಲೆ ಕತ್ತರಿಸಿ ಅವರನ್ನು ಕುರೂಪ ಮಾಡಲು ದುರ್ಗಿ ಪ್ರಯತ್ನಿಸಿದಾಗ ಭದ್ರ ಅದನ್ನು ತಡೆದು ದುರ್ಗಿಯ ಮುಂದೆಲೆ ಕತ್ತರಿಸುತ್ತಾನೆ. ಇದನ್ನೇ ದೊಡ್ಡದು ಮಾಡಿದ ದುರ್ಗಿ ಅಪ್ಪನಲ್ಲಿ ದೂರುತ್ತಾಳೆ. ಅಲ್ಲಿದ್ದ ಗುಮಾಸ್ತ ಭದ್ರ ದುರ್ಗಿಯ ಅತ್ಯಾಚಾರಕ್ಕೆ ಪ್ರಯತ್ನಿಸಿದ ಎಂದು ಭದ್ರನ ತಾಯಿಗೆ ದೂರುತ್ತಾರೆ. ಭದ್ರ ಬಡವ ಸರಿ ಆದರೆ ಹೆಣ್ಣು ಮಕ್ಕಳ ಮೇಲೆ ಇಂತಹ ದುರಾಚಾರ ಮಾಡಲು ಸಾಧ್ಯವಿಲ್ಲ. ಅವನು ವಾಚಾಮಗೋಚರ ಬೈದಿರಬಹುದು, ಬಿಕಾರಿ, ಹಳೆಬಿಕಾರಿ, ತೊತ್ತಿನ ಮಗಳೆ, ಕತ್ತೆ ಮಗನೆ, ಹಳೇ ಬೇವಾರ್ಸಿ, ಒಂದೇ ಎರಡೇ ಆದರೆ ಅವನ ಮನಸ್ಸು ಶುದ್ಧ ಬಿಳಿ ಹಾಳೆ. ಸಾಹುಕಾರನ ಮಾತನ್ನು ನಂಬಿ ಭದ್ರನನ್ನು ಬೈದು ಹೊರಹಾಕುವ ಅಣ್ಣ, ಬೇಡ ಎನ್ನುವ ಅತ್ತಿಗೆ, ಕಣ್ಣೀರಿಡುವ ತಾಯಿ. ಭದ್ರನಿಗೆ ಇಂತಹ ಅಪವಾದವನ್ನು ಸಹಿಸಿಲಾಗುವುದಿಲ್ಲ. ಮನೆ ಬಿಟ್ಟು ಹೊರಬರುತ್ತಾನೆ.

"ನಗುವುದೋ ಅಳುವುದೋ" ಎನ್ನುವ ಹಾಡು ಸನ್ನಿವೇಶಕ್ಕೆ ತಕ್ಕಂತೆ ಬಳಸಲಾಗಿದೆ. ಸಾವನ ದುರ್ಗ, ಮೇಲುಕೋಟೆ, ಮುಂತಾದ ಸ್ಥಳಗಳಲ್ಲಿ ಈ ಹಾಡನ್ನು ಚಿತ್ರೀಕರಿಸಲಾಗಿದೆ. ಗೌಡನ ಮನೆಗೆ ಬಂದ ಭದ್ರ ಸಾಹುಕಾರನ ಕೊಬ್ಬು ಇಳಿಸುತ್ತಾನೆ. ನಿಜ ಸ್ಥಿತಿ ದುರ್ಗಿಗೂ ತಿಳಿಯುತ್ತದೆ. ಅವನು ನನ್ನ ಮೇಲೆ ಮಾನಭಂಗಕ್ಕೆ ಪ್ರಯತ್ನಿಸಿಲ್ಲ ಎಂದು ತಂದೆಗೆ ಹೇಳುತ್ತಾಳೆ. ಸಮಯ ಸಿಕ್ಕಾಗ ಹೆಣ್ಣು ಮಕ್ಕಳೊಂದಿಗೆ ಸರಸ ಆಡುವ ಸಾಹುಕಾರನಿಗೆ ಇದು ನುಂಗಲಾರದ ತುತ್ತಾಗುತ್ತದೆ. ವಿನಾಕಾರಣ ಭದ್ರನ ಮೇಲೆ ಅಪಾದನೆ ಹೊರಿಸಲಾಗಿದೆ. ಭದ್ರ ಹೆಂಗಸರನ್ನು ಗೌರವಿಸುತ್ತಾನೆ. ದುರ್ಗಿಯ ಬಾಯಿಬಡುಕತನದಿಂದ ಅವಳನ್ನು ಬೈದಿರಬಹುದು ಆದರೆ ಇಂತಹ ನೀಚ ಕೃತ್ಯ ಅವನಿಂದ ಸಾಧ್ಯವಿಲ್ಲ. ಸಂದರ್ಭ ಸಿಕ್ಕಾಗ ಅದರ ದುರುಪಯೋಗ ಮಾಡಿಕೊಳ್ಳದ ಭದ್ರನ ಗುಣ ದುರ್ಗಿಗೆ ಇಷ್ಟವಾಗುತ್ತದೆ ಅಲ್ಲಿಯೇ ಪ್ರೀತಿ ಹುಟ್ಟುತ್ತದೆ.

ಗೌಡನ ಕಾರಣ ಭದ್ರನ ಕೆಲಸ ಹೋಗುತ್ತದೆ. ಭದ್ರ ಜಾಡಮಾಲಿ ಕೆಲಸ ಮಾಡುತ್ತಾನೆ. ಮಗ ಮನೆ ಬಾರದಿದ್ದಕ್ಕೆ ನೊಂದ ತಾಯಿ ಖಾಯಿಲೆ ಬೀಳುತ್ತಾಳೆ. ಮಗ ನೋಡಲು ಬಂದರೂ ಹೊಸಲು ದಾಟಿ ಒಳಗೆ ಬರುವುದಿಲ್ಲ. ಕಿಟಕಿಯಲ್ಲಿ ನೋಡಿ ಕಣ್ಣೀರಿಡುತ್ತಾನೆ. ಕಿಟಕಿಯಲ್ಲಿ ತಾಯಿ ಕೈ ತುತ್ತು ನೀಡುತ್ತಾಳೆ. ಮಗನ ಬಗ್ಗೆ ಯಾರೇ ಏನೇ ಹೇಳಿದರೂ ತಾಯಿ ಪ್ರೀತಿ ಕಮ್ಮಿಯಾಗುವುದಿಲ್ಲ. ಅವನು ನಿರಪರಾಧಿ ಎನ್ನುವುದೇ ಅವಳ ನಿರ್ಧಾರ. "ಊರಿಗೆ ರಾಜನಾದರೂ ತಾಯಿಗೆ ಮಗ" ಮಗ ಯಾವತ್ತಿಗೂ ಮಗ. ತಾಯಿ ಮಕ್ಕಳ ಪ್ರೀತಿ ಬಂಧವನ್ನು ಇವೆಲ್ಲವನ್ನೂ ರಾಜಣ್ಣನವರ ಚಿತ್ರ ನೋಡಿಯೇ ತಿಳಿಯಬೇಕು. ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು ಎನ್ನುವ ಹಾಗೆ ಮನೆಗೆ ಕಾಲಿಡಬೇಡ ಎನ್ನುವ ಅಣ್ಣನ ಮಾತಿನಂತೆ ಮನೆಗೆ ಬರದೆ ಹೊರಗೆ ನಿಂತೇ ತಾಯಿಯನ್ನು ನೋಡಿಕೊಂಡು ಹೋಗುತ್ತಾನೆ. ಅಮ್ಮನ ಕೈ ತುತ್ತು ಅಮೃತಕ್ಕೆ ಸಮಾನ.



ಇಂಥಹ ಸೆಂಟಿಮೆಂಟ್ ದೃಶ್ಯಗಳು ಚಿತ್ರದಲ್ಲಿ ಬಹಳ ಜನಪ್ರಿಯತೆ ತಂದುಕೊಟ್ಟಿವೆ. ಈ ಕತೆ ನಮ್ಮ ಮನೆಯಲ್ಲಿಯೇ ಅಥವಾ ನಮ್ಮ ಮನೆಯ ಅಕ್ಕಪಕ್ಕದಲ್ಲಿಯೂ ನಡೆಯುತ್ತಿರುವಂತೆ ಭಾಸವಾಗುತ್ತದೆ. ರಾಜಣ್ಣ ಅತ್ತರೆ ತಾವು ಅಳುವ ಪ್ರೇಕ್ಷಕ ವರ್ಗವಿದೆ. ಖಳನಾಯಕನನ್ನು ದ್ವೇಷಿಸುವ ಅವರನ್ನು ಹೊಡೆಯುವ ಬೈಯುವ ಅತಿರೇಕ ಅಭಿಮಾನಿ ಬಳಗ ಕೆಲವೊಮ್ಮೆ ಮಾಡಿದೆ. ಒಟ್ಟಿನಲ್ಲಿ ರಾಜಣ್ಣ ಅಂದರೆ ನಾಯಕ ಗೆಲ್ಲಬೇಕು. ಖಳನಾಯಕ ಸೋಲಬೇಕು ಇದು ನಮ್ಮ ಭಾರತೀಯ ಸಿನೆಮಾ ಸಿದ್ಧಾಂತ.

ಭದ್ರನ ಮೇಲಿನ ಪ್ರೀತಿಯಿಂದ ದುರ್ಗಿ ಮನೆಗೆ ಬಂದ ಗಂಡನ್ನು ನಿರಾಕರಿಸುತ್ತಾಳೆ. ಮದುವೆ ಅಂತ ಆದ್ರೆ ಭದ್ರನನ್ನೇ ಎಂದು ದಿಟ್ಟವಾಗಿ ನುಡಿಯುತ್ತಾಳೆ. ಸಾಹುಕಾರನಿಗೆ ಹುಚ್ಚೆ ಹಿಡಿದಂತೆ ಆಗುತ್ತಾರೆ. ತನ್ನ ಶತ್ರು ನನ್ನ ಅಳಿಯ ಆಗಲು ಹೊರಟಿದ್ದಾನೆ. ಭದ್ರನನ್ನೇ ಮುಗಿಸಲು ಸಾಹುಕಾರ ಹೊಂಚು ಹಾಕುತ್ತಾನೆ. ಭದ್ರ ನಿರಾಕರಿಸಿದರೂ ದುರ್ಗಿ ಅವನಲ್ಲಿ ಅನುರಕ್ತಳಾಗುತ್ತಾಳೆ. ಬದಲಾದ ದುರ್ಗಿಯನ್ನು ಭದ್ರ ಸ್ವೀಕರಿಸುತ್ತಾನೆ. ಭದ್ರನನ್ನು ಮುಗಿಸಲು ಹಾಕಿದ್ದ ತಂತ್ರಕ್ಕೆ ಭದ್ರನ ಅತ್ತಿಗೆ ಬಲಿಯಾಗಬೇಕಾಗುತ್ತದೆ. ವಿಶ್ವ ಹಾರಿಸಿದ ಗುಂಡು ಅತ್ತಿಗೆಯ ಭುಜಕ್ಕೆ ತಗಲುತ್ತದೆ. ಅವಳಿಗೆ ಗುಂಡು ತಗುಲಿದರೂ ಪ್ರಾಣಾಪಾಯದಿಂದ ಅವಳು ಪಾರಾಗುತ್ತಾಳೆ.

ಸಿನೆಮಾದ ಕೊನೆಯಲ್ಲಿ ಸಾಹುಕಾರನ ಬಣ್ಣ ಬಯಲಾಗಿ ದುರ್ಗಿಯನ್ನು ಭದ್ರನ ಕೈಯಲ್ಲಿ ಇಟ್ಟು ಅವನು ಪೊಲೀಸರಿಗೆ ಶರಣಾಗುತ್ತಾರೆ. ಸಿನೆಮಾ ಕಥೆ ಅತ್ಯಂತ ಮನೋರಂಜನೆಯಾಗಿರುವುದರೊಂದಿಗೆ ಬಡವ ಶ್ರೀಮಂತರ ನಡುವಿನ ಕಂದರವನ್ನು ಬೇರೆ ಮಾಡುತ್ತದೆ. ಒಬ್ಬ ಬಡವ ಬಲ್ಲಿದನಿಗೆ ಸವಾಲು ಹಾಕಬಲ್ಲ ಗೆಲ್ಲಬಲ್ಲ ಎನ್ನುವ ನೀತಿ ಸಿನೆಮಾದಲ್ಲಿದೆ. ನ್ಯಾಯಕ್ಕೆ ಗೆಲುವು ಎನ್ನುವ ಸಿನೆಮಾ ಸಿದ್ಧಾಂತ ಸಿನೆಮಾವನ್ನು ಗೆಲ್ಲಿಸಿದೆ.



ಸಿನೆಮಾದ ನಿರ್ಮಾಣದಲ್ಲಿ ಬಹುತೇಕ ಎಲ್ಲ ಕಡೆ ಜನಪದ ಶೈಲಿಯ ಭಾಷೆ, ಉಡುಗೆ ತೊಡಿಗೆ, ಜನಪದ ಪರಿಕರ (ರಾಗಿಕಲ್ಲು ಮುಂತಾದವು) ಗಳನ್ನು ಬಳಸಲಾಗಿದೆ. ಹೋರಾಟ ಹೊಡೆದಾಟ ಎಂದು ಬಂದಾಗಲೂ ರಾಜಣ್ಣನವರು ಕೊಡಲಿ, ಕೋಲು, ಪಂಜು, ಕುಡುಗೋಲು ಮುಂತಾದವನ್ನು ಬಳಸಿ ದೇಸಿತನ ಮೆರೆದಿದ್ದಾರೆ. ಹಾಡುಗಳಂತೂ ಇಂಪಾಗಿದ್ದು ಗ್ರಾಮೀಣ ಸೊಗಡಿನಿಂದ ಕೂಡಿದ್ದು ಪ್ರೇಕ್ಷಕರಿಗೆ ಆಪ್ತವೆನಿಸಿದೆ. ಯಾವುದೇ ಕಾಲದಲ್ಲೂ ನೋಡಬಹುದಾದ ವಿಮರ್ಶೆಗಳಿಗೆ ಒಳಪಡಬಹುದಾದ ಅತ್ಯುತ್ತಮ ಚಿತ್ರ ಇದಾಗಿದೆ.

### ೪.೨ ಉಡುಪು ಮತ್ತು ಭಾಷೆ :

ಡಾ.ರಾಜ್ ಅವರ ಸಿನಿಮಾ ಅತಿ ಹೆಚ್ಚು ಜನಪ್ರಿಯಗೊಂಡಿವೆ. ಡಾ.ರಾಜ್ ಅವರ ಚಿತ್ರಗಳಲ್ಲಿ ಜನಪದೀಯ ಅಂಶಗಳು ಕಣ್ಣಿಗೆ ರಾಚುವಷ್ಟು ಸಮೃದ್ಧವಾಗಿ ಸಿಗುತ್ತವೆ. ಚಿತ್ರಕಥೆಗಳಲ್ಲಿ ಒಂದಕ್ಕೊಂದು ಸುಂದರವಾಗಿ ಹೆಣೆದಿರುವ ದೃಶ್ಯಗಳು ಅಲ್ಲಿ ಉಪಯೋಗಿಸುವ ಸಲಕರಣೆಗಳು ವಿಭಿನ್ನವಾಗಿ ಕಂಡುಬಂದಿವೆ. ಮಂಗಳೂರು ಕನ್ನಡ, ಧಾರವಾಡ ಕನ್ನಡ, ಮೈಸೂರು ಕನ್ನಡ, ಮಂಡ್ಯ ಕನ್ನಡ, ಬೆಂಗಳೂರು ಕನ್ನಡ, ಈ ಎಲ್ಲಾ ಸೊಗಡನ್ನು ಒಳಗೊಳ್ಳುವ ನಿರೂಪಣಾತ್ಮಕ ಶೈಲಿ ರಾಜ್ ಅವರಲ್ಲಿದೆ. ಬಭ್ರುವಾಹನ ಚಿತ್ರದ ದೃಶ್ಯದಲ್ಲಿ ಭಾಷಾ ಕಲಾತ್ಮಕ ಹೇಗೆ ಬರುತ್ತದೆ ಎನ್ನುವುದನ್ನು "ಯಾರು ತಿಳಿಯರು ನಿನ್ನ ಭುಜಬಲದ ಪರಾಕ್ರಮ" ಎಂಬ ಹಾಡಿನಲ್ಲಿ ಸ್ವಾರಸ್ಯಕರವಾಗಿ ನಿರೂಪಿಸಲಾಗಿದೆ. 'ಚಂದವಳ್ಳಿಯ ತೋಟ'ದ ಕಥೆ ತ.ರಾ.ಸು. ಅವರ ಕಾದಂಬರಿಯನ್ನು ನಿರ್ಮಾಣ ಮಾಡುವಾಗ ಅಲ್ಲಿಯ ನಿರೂಪಣಾ ಮಾದರಿಯನ್ನು ಹಳ್ಳಿಯ ಗ್ರಾಮೀಣ ಭಾಷೆಯಾಗಿ ಜೊತೆಗೆ ಜನಪದ ಸೊಲ್ಲಾಗಿ ಬಳಸಿಕೊಳ್ಳಲಾಗಿದೆ. "ನೆಕ್ಕು ನಾಯಿಗೆ ಲಿಂಗ ಆದ್ರೇನು ಪಾನು ಬಟ್ಟೆಲಾದ್ರೇನು" "ನಾಗರಹಾವು ಮನುಷ್ಯರನ್ನು ಕಚ್ಚುತ್ತೆ. ಇನ್ನೊಂದು ಹಾವನ್ನು ಕಚ್ಚಲ್ಲ. ಬಾಯಿ ಮುಚ್ಚಿ ಕೊಂಡಿದ್ರೆ ಬಾಗಿಲ ಗುಟಾನು ದರ್ಬಾರು ಮಾಡುತ್ತೆ". ಹೀಗೆ ಜಾನಪದ ಒಗಟು ನಾಣ್ಣುಡಿಗಳಾಗಿ ನಟನೆಯಲ್ಲಿ ಸಮಾಜದ ಪ್ರಮುಖ ಸಂಗತಿಯಾಗಿ ರಾಜ್ ಅವರ ಚಿತ್ರಗಳು ಮೂಡಿಬಂದಿವೆ.

ರಾಜ್ ಅವರ ಚಿತ್ರಗಳು ಹಳ್ಳಿಯ ಮನೆತನ ಮತ್ತು ಸಿರಿತನ. ಬುಡಕಟ್ಟು ಸಮುದಾಯಗಳ ಜಾನಪದೀಯ ಅಂಶಗಳನ್ನು ಒಳಗೊಂಡಿದೆ. 'ಒಂದು ಮುತ್ತಿನ ಕಥೆ' ಚಿತ್ರದಲ್ಲಿ ರಾಜ್ ಅವರ ಉಡುಪು ವಿಶೇಷವಾಗಿ ಕಂಡುಬಂದಿದೆ. ಮನೆಯ ಚಿತ್ರಗಳು ಬಂದಾಗ ಅಲ್ಲಿಯ ಅಡಿಗೆ ಮನೆ ಇದ್ದು, ಮಣ್ಣಿನ ಮಡಿಕೆ, ಕುಡಿಕೆ, ಬಂದಿಗೆ, ಓತ್ತಾಳೆ ಚೆಂಬು, ಗುಂಡಿ, ಕೊಳಗ, ಗೋಡೆಯ ಮೊಳೆಗೆ ನೇತು ಹಾಕಿರುವ

ಮಂಕರಿ, ತಟ್ಟೆ, ಲೋಟ, ಕಟ್ಟಿಗೆ ಹತ್ತಿಸಿ ಉರಿಯುತ್ತಿರುವ ಒಲೆ, ಇತ್ಯಾದಿಯಾಗಿ ಹಳ್ಳಿಯ ವಾತಾವರಣ ದೃಶ್ಯ ಕಂಡು ಬರುತ್ತದೆ. ಇದಕ್ಕೆ ಪೂರಕವಾಗಿ ಮನೆಯ ಮುಂದೆ, ಪಡಸಾಲೆ, ಎತ್ತುಗಳನ್ನು ಕಟ್ಟುವ ಕೊಟ್ಟಿಗೆ, ಹೀಗೆ ಹಲವಾರು ಜಾನಪದ ಪರಿಕರಗಳನ್ನು ಬಳಸಲಾಗಿದೆ.

'ಕೃಷ್ಣದೇವರಾಯ' ಚಿತ್ರದಲ್ಲಿ ಕೃಷ್ಣದೇವರಾಯ ಹೀಗೆ ಇದ್ದ ಎಂಬ ಚಿತ್ರ ಭ್ರಮೆ ನಮ್ಮಲ್ಲಿ ಮೂಡುತ್ತದೆ. ಇದಕ್ಕೆ ಪೂರಕ ಉಡುಪು, ಭಾಷೆಯ ವಾಕ್ಚಾತುರ್ಯ ಎಂಬುದನ್ನು ಮರೆಯಲಾಗದು. ಡಾ.ರಾಜ್ ಅವರ ಸಿನಿಮಾಗಳು ಒಂದು ಹಳ್ಳಿಯ ಬದುಕಿನಲ್ಲಿ ಸಾಮಾನ್ಯವಾಗಿ ಕಂಡುಬರುವ ಮತ್ತು ಬಹುತೇಕ ಸನ್ನಿವೇಶಗಳನ್ನು ಚಿತ್ರದಲ್ಲಿ ಸಹಜವಾಗಿ ಚಿತ್ರಿಸಲಾಗುತ್ತದೆ. ಆದರೆ ೧೯೬೦-೭೦ರ ದಶಕದಲ್ಲಿ ಕಂಡುಬರುವಂತೆ ನಾಡು, ನುಡಿ ಹಾಗೂ ಸ್ವಾತಂತ್ರ್ಯದ ಪರಿಕಲ್ಪನೆಯ ಚಿತ್ರಗಳು ಕನ್ನಡದಲ್ಲಿ ಬಂದಿದ್ದು ಕಡಿಮೆ. ಪುರೋಹಿತ ನೆಲೆಯ ಚಿಂತನೆ ಎಲ್ಲಾ ಧರ್ಮಿಯರಲ್ಲಿ ಅಡಗಿತ್ತು ಇವನ್ನು ಉಳಿಸಬೇಕೆನ್ನುವ ನೆಪದಲ್ಲಿ ನಂಬಿಕೆಯ ಮತ್ತು ಜಾನಪದೀಯ ಅಂಶಗಳನ್ನು ಹಾಗೂ ಮೂಲನೆಲೆಯ ಪರಿಕಲ್ಪನೆಯ ಚಿತ್ರಗಳು ಕನ್ನಡದಲ್ಲಿ ಮೂಡಿಬಂದಿವೆ. ದಲಿತ ಚಳುವಳಿ ಪ್ರಾರಂಭಗೊಂಡಾಗ ಸ್ವಾತಂತ್ರ್ಯದ ಪರಿಕಲ್ಪನೆಗಳು ಚಿತ್ರಗಳು ಬಂದಿದ್ದು ಕಡಿಮೆ. ಇದರಿಂದ ನಂಬಿಕೆ, ಸಂಪ್ರದಾಯ ಸಿನಿಮಾಗಳು ಬಂದವು. ದೇಶದಲ್ಲಿ ಅಸಮಾನತೆಯ ಎದ್ದಾಗ ಅದರ ಕುರಿತು ಪ್ರತಿಭಟಿಸುವ ಚಿತ್ರಗಳು ಬಂದಿದ್ದು ಕಡಿಮೆ. ಅಲ್ಲಿ ಅಸಮಾನತೆ ಎಬ್ಬಿಸುವವರೆಗೆ ನಿರ್ಮಾಪಕರು ಅಥವಾ ಆರ್ಥಿಕ ಸ್ಥಿತಿವಂತರು ಇರುವಾಗ ಅಸಮಾನತೆಗೊಳಗಾದವರು ಚಿತ್ರ ನಿರ್ಮಾಣ ಮಾಡಲು ಅಸಾಧ್ಯವಾಗಿದೆ. ಆದರೆ ಇತ್ತೀಚೆಗೆ ಸ್ವಾತಂತ್ರ್ಯದ ಪರಿಕಲ್ಪನೆ ಹಾಗೂ ಅಸಮಾಜಿಕ ಅಸಮಾನತೆ ಹೊಂದಿರುವ ಚಿತ್ರ ಬರುತ್ತಿರುವುದು ಸಂತಸವಾಗಿದೆ. ಇದರಲ್ಲಿ ರಾಜಕುಮಾರ ಅವರ ಚಿತ್ರಗಳು ಬಂದಿವೆ. ಹಾಗೆಯೇ ಇನ್ನೊಂದು ನೆಲೆಯಲ್ಲಿ ನಾಡುನುಡಿಯ ಬಗ್ಗೆ ಚಲನಚಿತ್ರಗಳು ಬಂದಿವೆ. ಕರುನಾಡು ಭಾಷೆ, ನೆಲ, ಜಲ, ಭಾಷೆ, ಜನರ ಅಭಿಮಾನದ ಕುರಿತು ಬಂದಿವೆ.

ಡಾ.ರಾಜ್ ಅವರ ಗಂಧದಗುಡಿ ಚಿತ್ರದಲ್ಲಿ "ನಾವಾಡುವ ನುಡಿಯೇ ಚೆಂದದ ಗುಡಿ, ಶ್ರೀಗಂಧದ ಗುಡಿ" ಈ ಹಾಡು ಭಾಷೆಯ ವೈಶಿಷ್ಟ್ಯವರೆ ಕುರಿತು ಹೇಳುತ್ತದೆ. ಇನ್ನೊಂದು "ಹುಟ್ಟಿದರೆ ಕನ್ನಡ ನಾಡಿನಲ್ಲಿ ಹುಟ್ಟಬೇಕು ಬದುಕಿದು ಜಟಕಾಬಂಡಿ" ಎನ್ನುವ ಹಾಡು ಕುವೆಂಪು ಅವರು ಎಲ್ಲಾದರೂ ಇರು ಎಂತಾದರೂ ಇರು ಮೊದಲು ಕನ್ನಡಿಗನಾಗಿರು' ಎನ್ನುವ ಮಾತು ನಾಡು, ನುಡಿ, ಭಾಷೆ, ವೈಶಿಷ್ಟ್ಯತೆ ಸಾರುತ್ತದೆ. ಡಾ.ರಾಜ್ ಅವರು ತಮ್ಮ ವೈಯಕ್ತಿಕ ಹಾಗೂ ಸಿನಿಮಾ ಸ್ತೋತ್ರದ ಮೂಲಕ ಅಪಾರ ಸೇವೆಯನ್ನು ಕನ್ನಡ ನಾಡು ನುಡಿ ನೀಡಿದ್ದಾರೆ.

ಬಂಗಾರದ ಮನುಷ್ಯ ಚಿತ್ರದಲ್ಲಿನ ಉಡುಪು ಮತ್ತು ಭಾಷೆಯನ್ನು ಗಮನಿಸುವುದಾದರೆ ಲಕ್ಷ್ಮಿಯ ನಾಡಿಗೆ ಉಡಿಗೆ ತೊಡಿಗೆ, ಹಾವ-ಭಾವ, ಭಾಷೆ, ಹಳ್ಳಿ ಸೊಗಡು ಸಮೃದ್ಧವಾಗಿ ಕಂಡುಬರುವಂತೆ ಪಾತ್ರ ಪೋಷಣೆ ಮಾಡಿದ್ದಾರೆ. ಕಥಾವಸ್ತು ಹಳ್ಳಿಯಲ್ಲಿಯೇ ನಡೆದು ಸಂಪೂರ್ಣ ಗ್ರಾಮೀಣ ಭಾಷೆಯನ್ನು ಸಿನೆಮಾದಲ್ಲಿ ಬಳಸಲಾಗಿದೆ. ಇಡೀ ಕರ್ನಾಟಕದಲ್ಲಿ ಚಿತ್ರ ತನ್ನ ಭಾಷೆಯ ಮೂಲಕ ಜನಪ್ರಿಯತೆ ಪಡೆಯಬೇಕೆಂಬ ಕಾರಣದಿಂದ ಸಂಪೂರ್ಣ ಸರಳ ಭಾಷೆಯನ್ನು ಬಳಸಲಾಗಿದೆ. ಕೈಗೆ ಮುಲಾಮು

ಹಚ್ಚಿದ ನಂತರದಲ್ಲಿ ಲಕ್ಷ್ಮಿ ಮನೆ ಮುಂದೆ ಪಾತ್ರೆ ತೊಳೆಯುತ್ತಾ ಕುಳಿತಿದ್ದಾಳೆ. ಅಲ್ಲೆ ಕಬ್ಬಿನ ಜಲ್ಲೆ ಬೆಳೆದಿದೆ. ಬಾಳೆ ಗಿಡ ಸಹಾ ಕಂಡುಬರುತ್ತದೆ. ತಟ್ಟೆಯಲ್ಲಿ ರಾಜೀವನ ಪ್ರತಿಬಿಂಬನ್ನು ಕಂಡು ನಾಚುತ್ತಾಳೆ.

"ಬಾಳ ಬಂಗಾರ ನೀನು,
ಹಣೆಯ ಸಿಂಗಾರ ನೀನು
ನಿನ್ನ ಕೈಲಾಡೋ ಬೊಂಬೆ ನಾನಯ್ಯ.. ..
ನೀ ದೂರ ಹೋದರೂ
ಬಿಡದಂತೆ ನಿನ್ನ
ನೆರಳಾಗಿ ಇರುವೆ"



ಎಂದು ಹಾಡುವ ಲಕ್ಷಿ ಅದೇ ಬೆಟ್ಟ ಗುಡ್ಡಗಳ ಪ್ರಕೃತಿ ನಡುವೆ ಹಾಡುತ್ತಾ ಕುಣಿಯುತ್ತ ಕ್ಷಣಕಾಲ ಮೈಮರೆಯುತ್ತಾಳೆ. ಬಂಜಾರಾ ಹೆಂಗಸಿನಂತೆ ಲಂಗ ಕುಪ್ಪಸ ತೊಟ್ಟು ಉದ್ದ ಜಡೆ ತಲೆ ತುಂಬಾ ಹೂ ಕೈತುಂಬಾ ಬಳೆ ಹಿಮ್ಮಡಿ ಮೇಲೆ ದೊಡ್ಡದಾದ ಕಾಲ್ಗೆಜ್ಜೆ ಎಲ್ಲವೂ ಜನಪದ ಶೈಲಿಯಲ್ಲದೇ ಆಧುನಿಕ ಶೈಲಿಎನ್ನಲು ಸಾಧ್ಯವಿಲ್ಲ. ಕಾಫಿ ತೋಟದ ಮಧ್ಯೆ ಟೀ ಎಸ್ಟೇಟ್‌ನಲ್ಲಿ ಚಿತ್ರೀಕರಣ ಮಾಡಲಾಗಿದ್ದು, ಹಸಿರಿನಿಂದ ಕಂಗೊಳಿಸುವ ತಾಣ, ಕಳಸಾಪುರ, ಕಗ್ಗಲಿಪುರದ ರಮಣೀಯ ಸ್ಥಳಗಳನ್ನು ಬಳಸಲಾಗಿದೆ. ಡಾ.ರಾಜ್‌ಕುಮಾರ್ ಅವರ ಚಿತ್ರಗಳಲ್ಲಿ ಬೈಗುಳ ಬಂದಾಗಲೂ ಅಲ್ಲಿಯೂ ಹಳ್ಳಿಯ ಸೊಗಡಿನ ಬೈಗುಳವಿದೆ. ಸಂಪತ್ತಿಗೆ ಸವಾಲಿನಲ್ಲಿ ಮಂಜುಳ "ಬೇವರ್ಸಿ, ಬಿಕನಾಸಿ, ಹಳೆ ಬೇವರ್ಸಿ, ದರವೇಸಿ, ನೀನು, ನಿಮ್ಮಪ್ಪ, ನಿಮ್ಮ ತಾತ"ಎಂಬ ಸಂಭಾಷಣೆ ಇದ್ದು ಕಥೆ ನಮ್ಮ ಮನೆ ಪಕ್ಕದಲ್ಲಿ ನಡೆಯುತ್ತಿದೆ ಎಂಬ ಭಾವನೆ ಮೂಡಿಸುತ್ತಿದ್ದವು.

ಕನ್ನಡ ಚಲನಚಿತ್ರಗಳು ಕನ್ನಡ ನುಡಿಗಾಗಿ ನೆಲ, ಜಲ, ಗಡಿ ಮೀಸಲು ಇಟ್ಟಿರುತ್ತವೆ ಎಂಬುದು ಮನಗಾಣಬೇಕಾಗಿದೆ. ಕನ್ನಡದಲ್ಲಿ ಹಂತ ಹಂತವಾಗಿ ಉತ್ತಮ ಚಿತ್ರಗಳು ಕನ್ನಡ ಭಾಷೆಯಲ್ಲಿ ತಯಾರಾಗ ತೊಡಗುತ್ತವೆ. ಹಲವು ಪ್ರಶಸ್ತಿಗಳು ಚಿತ್ರ ನಿರ್ಮಾಪಕರನ್ನು ಗೌರವಿಸುತ್ತವೆ. ೧೯೬೪ರಲ್ಲಿ ಮೊದಲ ವರ್ಣಚಿತ್ರ ಅಮರ ಶಿಲ್ಪಿ ಜಕಣಾಚಾರಿ ಚಿತ್ರ ಬಿಡುಗಡೆಯಾಗುತ್ತದೆ. ಜೊತೆಗೆ ಪ್ರೇಮದ ಪುತ್ರಿ ಚಿತ್ರಕ್ಕೆ ಈ ಚಿತ್ರಕ್ಕೆ ಕೇಂದ್ರ ಸರಕಾರದ ರಾಷ್ಟ್ರಪತಿ ಬೆಳ್ಳಿಪದಕ, ಭಕ್ತ ವಿಜಯ ಚಿತ್ರಕ್ಕೆ ಕೇಂದ್ರ ಸರ್ಕಾರದ ಅರ್ಹತಾ ಪತ್ರ ದೊರಕುತ್ತದೆ. ಇಲ್ಲಿ ಮುಖ್ಯವಾಗಿ ಕನ್ನಡ ನಾಡಿಗೆ ಸಿಕ್ಕ ಗೌರವ ಎಂದು ಹೇಳಬಹುದು. ಅ.ನ.ಕೃ., ವಾಟಾಳ್ ನಾಗರಾಜ್, ರಾಮಮೂರ್ತಿ ಮುಂತಾದವರು ಡಬ್ಬಿಂಗ್ ಚಿತ್ರಗಳು ಕನ್ನಡಕ್ಕೆ ಬಂದಂತೆ ಹೋರಾಟ ಮಾಡಿ ಕನ್ನಡ ಚಿತ್ರ ಬೆಳೆಯಲು ಸಹಕರಿಸಿದರು ಇದಕ್ಕೆ ರಾಜಕುಮಾರ ಅವರ ಬೆಂಬಲ ಇತ್ತು. ಡಾ.ರಾಜ್ ಅವರು ಕನ್ನಡದ ನೆಲದ ಬಗ್ಗೆ ಅಪಾರ ಗೌರವ ಇದ್ದಂತವರು. ಕಾವೇರಿ ಹೋರಾಟದಲ್ಲಿ ಕೂಡ ರಾಜ್ ಅವರು ಪಾಲ್ಗೊಂಡಿದ್ದರು.

ಡಾ.ರಾಜ್ ಅವರ ಬಂಗಾರದ ಮನುಷ್ಯ ಸಿನೆಮಾದಲ್ಲಿ ಸೀದಾ ಸಾದ ಜನಪ್ರಿಯ ಭಾಷೆಯ ಜೊತೆಗೆ ಜಾನಪದೀಯ ಉಡುಪುಗಳು ರಾರಾಜಿಸಿವೆ. "ನಗುನಗುತಾ ನಲಿ ನಲಿ ಎಲ್ಲಾ ದೇವನ ಕಲೆಯೆಂದೇ ನೀ ತಿಳಿ ಅದರಿಂದ ನೀ ಕಲಿ" ಎಂದು ಹೇಳುತ್ತಾ, ನಲಿಯುವ ನವ ಯುವಕನಾಗಿ

ಸಿನಿಮಾದಲ್ಲಿ ಕೆಂಪು ಅಂಗಿ ಬಿಳಿ ಪ್ಯಾಂಟ್ ಹೆಗಲಲ್ಲಿ ಒಂದು ಚೀಲ ಸಾಧಾರಣ ಚಪ್ಪಲಿ, ಆತ್ಮವಿಶ್ವಾಸದಿಂದ ಕಾಡು ಬೆಟ್ಟ, ಗುಡ್ಡ, ಸುತ್ತಿ ಬಂದ ರಾಜೀವ್ (ರಾಜ್) ಬಾಲ್ಯ ಯೌವ್ವನ ಮುಪ್ಪು ಮೃತ್ಯು ಎಲ್ಲವನ್ನು ಈ ಹಾಡಿನಲ್ಲಿ ಹೇಳಿಬಿಡುತ್ತಾನೆ. ಇಲ್ಲಿ ಪ್ರತಿಯೊಬ್ಬ ಜೀವನ ಮೌಲ್ಯವನ್ನು ತಿಳಿಸುವಲ್ಲಿ ಮನುಷ್ಯನ ಅರಿವಿನ ಪ್ರಜ್ಞೆಯನ್ನು ಎತ್ತಿ ಹಿಡಿಯಲಾಗಿದೆ.

ಬಂಗಾರದ ಮನುಷ್ಯ ಚಿತ್ರದಲ್ಲಿ ಬಂಜಾರ ಹೆಂಗಸಿನಂತೆ ಲಂಗ ಕುಪ್ಪಸ, ತೊಟ್ಟು, ಎರಡು ಜಡೆ, ತಲೆ ತುಂಬಾ ಹೂ ದೊಡ್ಡದಾದ ಕಾಲ್ಗೆಜ್ಜೆ ಎಲ್ಲವೂ ಜಾನಪದ ಶೈಲಿಯಲ್ಲಿದೇ ಆಧುನಿಕ ಶೈಲಿ ಎನ್ನುವುದು ಸಾಧ್ಯವಿಲ್ಲ. ಡಾ.ರಾಜ್ ಅವರ ಬಹುತೇಕ ಸಿನಿಮಾಗಳು ಉಡುಪು, ಭಾಷೆಯ ಶೈಲಿಯಿಂದಲೇ ಜನರನ್ನು ಆಕರ್ಷಿಸಿವೆ. ಬಬ್ರುವಾಹನ, ಬಂಗಾರದ ಮನುಷ್ಯ, ಕೃಷ್ಣದೇವರಾಯ, ಮಯೂರ, ಕವಿರತ್ನ ಕಾಳಿದಾಸ ಇದು ಕಥಾವಸ್ತು ಏನಾದರೂ ಅಲ್ಲಿ ಉಡುಪು ಭಾಷೆಗೆ ಪ್ರಾಧಾನ್ಯ ಕೊಡಲಾಗಿದೆ.

ಸರ್ವಮಂಗಳಾ ಚಿತ್ರದಲ್ಲಿ ಪಾರ್ವತಿಗೆ ತನ್ನ ತಮ್ಮನ ಮೇಲೆ ಅಪಾರ ಪ್ರೀತಿ. ಮಂಗಳೆಯನ್ನು ತಮ್ಮನಿಗೆ ತಂದುಕೊಳ್ಳಬೇಕೆಂಬ ಆಸೆ ಅವಳಿಗೆ. ಅವಳು ಗರತಿ ಹೆಣ್ಣುಮಗಳು, ಚೌಕುಳಿ ಸೀರೆ, ಓಲೆ ಜುಮುಕಿ, ಕೈ ಬಳೆಗಳ ಮಧ್ಯೆ ಕಡಗ, ಮಧ್ಯೆ ಬೈತಲೆ, ದೊಡ್ಡ ಕುಂಕುಮ, ತಲೆ ಗಂಟು, ಹೂ, ತೋಳುಬಂಧಿ, ಕಾಸಿನಸರ, ಮಹಾಲಕ್ಷ್ಮಿ ಇದ್ದಹಾಗೆ ಇದ್ದಾಳೆ. ರಾತ್ರಿ ಮಕ್ಕಳಿಗೆ ನಿದ್ದೆ ಬರುವುದಿಲ್ಲ. ಅಜ್ಜಿ ಸಹಾ ಒಂದು ಪದ ಹಾಡು ಎಂದಾಗ ಪಾರ್ವತಿ ಲಾಲಿಹಾಡು ಹಾಡುತ್ತಾ ಮಕ್ಕಳನ್ನು ಮಲಗಿಸುತ್ತಾಳೆ. ಈ ಸಮಯದಲ್ಲಿ ಒಂದು ಜನಪದ ಲಾಲಿ ಹಾಡನ್ನು ಬಳಸಲಾಗಿದೆ.

"ಲಾಲಿ ಲಾಲಿ ಕತ್ತೆಯ ಮರಿ
ಚೆಂದ ತುತ್ತಿನ ನುಡಿ ಚೆಂದ"

ಇದೊಂದು ಇಂಪಾದ ಹಾಡು ತಾಯ್ತನ ಎಂದರೆ ಒಂದು ಪ್ರಕೃತಿದತ್ತ ಅನುಭವ. ಈ ಲಾಲಿಯ ಪದಗಳನ್ನು ದೂರಿ ಪದಗಳು ಸಹಾ ಎಂದು ಕರೆಯಲಾಗಿದೆ. ಒಂದು ಉದಾಹರಣೆ

"ಆಡಿ ಬಾ ನನ್ನಯ್ಯ ಅಂಗಾಲ ತೊಳೆದೇನು,
ತೆಂಗಿನಕಾಯ ತಿಳಿನೀರ ತಕ್ಕೊಂಡು
ಬಂಗಾರದ ಮಾರೀ ತೊಳೆದನು."

ಈ ರೀತಿಯ ಹಾಡುಗಳು ಎಳೆಯ ಕಂದಮ್ಮಗಳ ಬಗ್ಗೆ ಇಂಥ ರಮ್ಯ ಮನೋಹರ ಚಿತ್ರಗಳನ್ನು ಕೊಡುವ ಅಪಾರ ಸಂಖ್ಯೆಯ ತ್ರಿಪದಿಗಳು ಲಾಲಿಯ ಪದಗಳ ಗುಂಪಿನಲ್ಲಿ ಸಿಗುತ್ತವೆ. ತಾಯಿ ತನ್ನ ಮಗುವನ್ನು ತೊಡೆ ಮೇಲೆಯೇ ತೊಟ್ಟಿಲಿನಲ್ಲಿಯೋ ಜೋಳಿಯಲ್ಲಿ ಹಾಕಿ ಕೂಗಿ ನಿದ್ದೆಬರುವವರೆಗೂ ತೂಗಿ ಹಾಡಿ ಮಲಗಿಸುತ್ತಾಳೆ. ತಾಯಿಯ ಗರ್ಭದಲ್ಲಿದ್ದಾಗಲೇ ಒಳ್ಳೆಯ ಸಂಗೀತ, ಭಜನೆ, ದೇವರನಾಮ ಮುಂತಾದವುಗಳನ್ನು ಸ್ತ್ರೀಯರು ಕೇಳಬೇಕು ಎಂದು ಶ್ರೀಮಂತದಲ್ಲಿಯೇ ಹಾಡು ಹಾಡಿ ಗರ್ಭಿಣಿ ಸ್ತ್ರೀಯರ ಮನಸ್ಸಂತೋಷ ಪಡಿಸುತ್ತಾರೆ.

ಲಾಲಿ ಹಾಡುಗಳಲ್ಲಿ ಉತ್ತಮ ಕಾವ್ಯ ಗುಣವಿದೆ. ಹೆಚ್ಚಾಗಿ ಗೇಯತೆ ತುಂಬಿದೆ. ಇದನ್ನು ಮನದುಂಬಿ ಹಾಡಬಹುದು. ಹೃದಯ ತುಂಬಿ ಕೇಳಬಹುದು. ತನ್ನ ಮಗನ ಬಾಲ ಲೀಲೆಗಳನ್ನು

ತಾಯಿಗೆ ಎಷ್ಟು ವರ್ಣಿಸಿದರು ಸಾಲದು. ಮಗನನ್ನು ಕೃಷ್ಣನ ವೇಷದಲ್ಲಿ ಅಲಂಕರಿಸುತ್ತಾಳೆ. ಅವನೊಂದಿಗೆ ಆಡುತ್ತಾಳೆ. ಊಟ ತಿನ್ನಿಸುವಾಗ, ಹಾಲು ಕುಡಿಸುವಾಗಲೂ ಸಹ ಹಾಡುತ್ತಾಳೆ. ಆದರೆ ಮಗುವನ್ನು ಮಲಗಿಸುವಾಗ ಅವಳು ಹಾಡುವ ಲಾಲಿಪದಗಳು ಅಪಾರವಾದ ಪ್ರೀತಿ ವಾತ್ಸಲ್ಯ, ಮಮತೆಯಿಂದ ಕೂಡಿರುತ್ತವೆ. ತನ್ನ ಪ್ರೀತಿಯನ್ನೆಲ್ಲಾ ಧಾರೆ ಎರೆದು ಸಾಹಿತ್ಯದ ಹಂಗು ತೊರೆದು ಕೇವಲ ತನ್ನ ವಾತ್ಸಲ್ಯದ ಪ್ರೇಮ ಧಾರೆಯಲ್ಲಿ ಮಗುವನ್ನು ಲಾಲಿಸಿ ಪಾಲಿಸುತ್ತಾಳೆ. ಈ ಅನುಭವದಲ್ಲಿಯೇ ತಾಯಿಯು ಬಾಯಿಯಲ್ಲಿ ತಂತಾನೆ ಸಾಹಿತ್ಯ ಹುಟ್ಟುತ್ತದೆ. ಅದಕ್ಕೆ ಅಕ್ಷರದ ಹಂಗಿಲ್ಲ. ಮಗುವಿನ ಮೇಲೆ ಅಪಾರ ಕನಸು ಕಟ್ಟುತ್ತಾಳೆ. ಮಗು ಬೆಳೆದು ಹೀಗೆ ಆಗುತ್ತಾನೆ. ಹಾಗೆ ಆಗುತ್ತಾನೆ ಅವಳ ಕನಸು ಸಮುದ್ರದಷ್ಟು ಆಳ, ಹಿಮಾಲಯದಷ್ಟು ಎತ್ತರ, ಆಕಾಶದಷ್ಟು ವಿಸ್ತಾರ ಎನ್ನುವುದನ್ನು ತೋರಿಸಲಾಗಿದೆ.

ಇಂಥಹದೇ ಒಂದು ಗೀತೆಯನ್ನು ಪಾರ್ವತಿ ನಟರಾಜ ಮಂಗಳೆಗೆ ಹಾಡಿ ಮಲಗಿಸುತ್ತಾಳೆ. (ಈ ಗೀತೆಯನ್ನು ಈಗಿನ ಒಂದು ಹಾಸಿಗೆಯ ಜಾಹಿರಾತಿನಲ್ಲಿ ಕಾಣಬಹುದು). ಸಿನೆಮಾದಲ್ಲಿ ಸಂಪೂರ್ಣ ಗ್ರಾಮೀಣ ಸೊಗಡಿನ ಮೈಸೂರು ಕನ್ನಡ ಬಳಸಲಾಗಿದೆ. ವೈನಾಗಿ, ಚೊಜುಗ (ಆಶ್ಚರ್ಯ) ಹಡೆದವ್ವ (ತಾಯಿ) ಮುಂತಾದವು.ವಿಷಕಂಠ ಹೆಂಡತಿಯನ್ನು ಹುಣಸೂರು ಸಂತೆಗೆ ಕರೆದಾಗೆ ಗರತಿ ಪಾರ್ವತಿ ಮನೆ ಕೆಲಸಬೆಟ್ಟದಷ್ಟಿದೆ. ಪಾತ್ರೆಗಳನ್ನು ಕಲಾಯಿ ಮಾಡಿಸಬೇಕು, ಮೇಯೋ ಎತ್ತುಗಳನ್ನು ಹೊಲಕ್ಕೆ ಅಟ್ಟಿಕೊಂಡು ಹೋಗಬೇಕು. ದನ ಕಟ್ಟಬೇಕು. ಎಂದು ಉದ್ದದ ಸಾಲು ಹೇಳುತ್ತಾಳೆ. ಅದಕ್ಕೆ ಗಂಡ ತಾನೊಬ್ಬನೆ ಸಂತೆಗೆ ಹೋಗುತ್ತಾನೆ. ಅವನೋ ಬಾರಿ ಜಿಪುಣ. ಮನೆ ಬೆಣ್ಣೆ ಸವಿಯಬಾರದು. ಮನೆ ಮಂದಿ ಉಣಬಾರದು ಎನ್ನುವವನು. ಅದನ್ನು ಮೈಸೂರು ಸಂತೆಯಲ್ಲಿ ಮಾರಿ ಗಂಟು ಮಾಡಿಕೊಳ್ಳುವ ದುರಾಸೆ ಅವನದು.

ವಿಷಕಂಠ ತನ್ನ ಮಗಳನ್ನು ನೋಡಲು ಬಂದಿದ್ದಾನೆ. ಭೀಮನಸ್ತೆ ಹೆಣ್ಣುಮಗಳಿಗೆ ತಿಂಡಿ ಹಣ್ಣು ತಂದಿದ್ದಾನೆ. ಮರದ ಬುಟ್ಟಿಯಲ್ಲಿ ಪದಾರ್ಥ ಹೊತ್ತು ಬಂದಿದ್ದಾನೆ. ಮೊರದಲ್ಲಿ ಬಾಳೆಹಣ್ಣು ತಂದು ಮಗಳಿಗೆ ಕೊಡಲು ಮುಂದೆ ಹೋದಾಗ ಮಂಗಳೆಗೆ ಮೈ ಇಳಿದ ವಿಷಯ ತಿಳಿಯುತ್ತದೆ. ಗರ್ಭಪಾತ ಎನ್ನುವ ಶಬ್ದಕ್ಕೆ ಇಲ್ಲಿ ಗ್ರಾಮ್ಯ ಭಾಷೆ, ಜನಪದ ಭಾಷೆ, ಆಡುಭಾಷೆ ಮೈ ಇಳಿದಿದೆ ಎಂದು ಬಳಸಲಾಗಿದೆ. ಮಗಳಿಗೆ ಬಟ್ಟೆ ತಂದುಕೊಟ್ಟು ಅಪ್ಪ ಹೊರಡುತ್ತಾನೆ. ತನಗೆ ತಾತನಾಗುವ ಭಾಗ್ಯ ಹೋಯಿತಲ್ಲ ಎಂದು ಕೊರಗುತ್ತಾನೆ.

ಗರ್ಭಿಣಿ ಮಹಿಳೆಯರಿಗೆ ತವರಿನಿಂದ ತಿಂಡಿ ತೀರ್ಥ, ಸೀರೆ ಕುಪ್ಪಸ, ಬಳೆ ಬಿಚ್ಚೋಲೆ ಬರುವುದು ಸಾಮಾನ್ಯ. ಅದು ಸಂಸಾರ ಬೆಳಗುವ, ವಂಶದ ಕುಡಿಗೆ ಕೊಡುವ ಮಾಡುವ ಉಪಚಾರ. ಮಗಳು ಬಸುರಿ ಆಗಿದ್ದಾಳೆ, ಎಂದು ತಿಳಿದ ತಕ್ಷಣ ತವರು ಮನೆಯಿಂದ ಊಟ ಉಪಚಾರ ಶುರು. ಪಾರ್ವತಿ ಕೆಲಸದಲ್ಲಿ ತೊಡಗಿದ್ದಾಳೆ. ನಟರಾಜ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿ ಹೋರಾಟಗಾರ ಎನಿಸಿಕೊಂಡಿದ್ದಾನೆ. ಪೊಲೀಸರು ಅವನನ್ನು ಹುಡುಕುತ್ತಿದ್ದಾರೆ. ನಟರಾಜನ ಮನೆಗೆ ಬಂದ ಪೊಲೀಸರು ಅವನನ್ನು ಹಿಡಿಯಲು ಬಲು ಪ್ರಯಾಸ ಪಡುತ್ತಾರೆ. ನಟರಾಜ ಹೆಂಗಸರ ಮಧ್ಯೆ ಪೊಲೀಸರಿಗೆ ಚಳ್ಳೆ ಹಣ್ಣು ತಿನ್ನಿಸಿ ಅಲ್ಲಿಂದ ಓಡಿಹೋಗುತ್ತಾನೆ.

ಗಿರಿಕನ್ಯೆ ಸಿನಿಮಾದಲ್ಲಿ ಪ್ರತಿಯೊಂದು ಊರಿಗೂ ಅದರದ್ದೇ ಆದ ವೈಶಿಷ್ಟ್ಯವಿದೆ. ಅಲ್ಲಿನ ಸಂಸ್ಕೃತಿ ಹಬ್ಬ ಊಟ ಉಡುಗೆ ತೊಡುಗೆಗಳಿವೆ. ಭಾಷೆಯ ಸೊಗಡಿದೆ. ಶುಂಠಿಕೊಪ್ಪ ಮಡಿಕೇರಿ ಮುಂತಾದ ಬೆಟ್ಟ ಗುಡ್ಡಗಳ ನಡುವೆ ಕಾಫಿ, ಟೀ, ಎಸ್ಟೇಟ್‌ಗಳಲ್ಲಿ ದುಡಿಯುವ ಒಂದು ವರ್ಗವಿದೆ. ಅಲ್ಲಿನ ದೇವಿ ಕೊರತಿ ಭೂತದ ವೇಷದಲ್ಲಿ ವಸ್ತ್ರ ಧರಿಸಿಕೊಂಡ ಪೂಜಾರಿ ಮೇಲೆ ಆಗಾಗ್ಗೆ ಕೊರತಿ ಕಾಣಿಸಿಕೊಳ್ಳುತ್ತಾಳೆ, ಮಾತನಾಡುತ್ತಾಳೆ. ಅಲ್ಲಿ ಕೆಲಸ ಮಾಡುವ ಹೆಣ್ಣು ಮಕ್ಕಳು ಸಾಮಾನ್ಯವಾಗಿ ತುಂಬು ತೋಳಿನ ಕುಪ್ಪಸ ಮೊಣಕಾಲಿನ ಕೆಳಗೆ ಸೀರೆ ಉಡುತ್ತಾರೆ. ತಲೆಗೆ ಬಟ್ಟೆ ಕಟ್ಟಿರುತ್ತಾರೆ. ಕಾಲಿಗೆ ಗೆಜ್ಜೆ, ಬೆಳ್ಳಿ ಕಡಗ, ಮೂಗಿಗೆ ಮುತ್ತು ಕಟ್ಟಿರುತ್ತಾರೆ. ಗಂಡಸರು ಸಾಮಾನ್ಯ ಷರ್ಟು, ಪಂಚೆ, ಅಥವಾ ಬಿಳಿ ಕಚ್ಚೆ, ಸಾಧಾರಣ ಚಪ್ಪಲಿ ಧರಿಸಿರುತ್ತಾರೆ.

ಚಿತ್ರದ ಆರಂಭದಲ್ಲಿ ಚೆನ್ನ ಕೈಯಲ್ಲಿ ಕೋಲು ಕೋಲಿನ ತುದಿಗೆ ಬಟ್ಟೆಯ ಗಂಟು, ಪಿಂಕ್ ಷರ್ಟು, ಬಿಳಿ ಕಚ್ಚೆ, ಸಾಧಾರಣ ಚಪ್ಪಲಿ ಧರಿಸಿ ಮಡಿಕೇರಿಯ ಬೆಟ್ಟದ ತಪ್ಪಲಿನಲ್ಲಿ ಓಡಾಡುತ್ತಾ "ಏನೆಂದು ಹಾಡಲಿ ಮಾನವನಾಸೆಗೆ ಕೊನೆ ಎಲ್ಲಿ" ಎಂದು ಹಾಡುತ್ತಾ ಕಾಡಿನ ಮಧ್ಯೆ ನಡೆದಾಡುತ್ತಾ ಒಂದು ಊರಿನಿಂದ ಇನ್ನೊಂದು ಊರು ಸೇರುತ್ತಾನೆ. ಗದ್ದೆಗಳ ಮಧ್ಯೆ ಸಂಚರಿಸುತ್ತಾ ಮಡಿಕೇರಿಯ ತಲಕಾವೇರಿ ಸಂದರ್ಶಿಸುತ್ತಾನೆ. ತಾಯಿ ಕಾವೇರಿಯ ಉಗಮ ಸ್ಥಾನ ದರ್ಶಿಸುತ್ತಾ ಅಲ್ಲಿ ತೀರ್ಥ ಪ್ರೋಕ್ಷಣೆ ಮಾಡಿಸಿಕೊಂಡು ಎಸ್ಟೇಟ್‌ಗಳತ್ತ ನಡೆಯುತ್ತಾನೆ. ದಾರಿಯಲ್ಲಿ ಮಂಕರಿ ಹೊತ್ತ ಹೆಣ್ಣು ಮಕ್ಕಳು ದಿನಗೂಲಿಗಾಗಿ ಹರಟಿದ್ದಾರೆ. ಅದೇ ದಾರಿಯಲ್ಲಿ ಬರುತ್ತಿದ್ದಾಗ, ಚೆಲುವಿ ಕಿರಿಧಣಿಯ ಬಲೆಗೆ ಸಿಕ್ಕು ಅವರಿಂದ ಬಿಡಿಸಿಕೊಳ್ಳಲು ಹೆಣಗಾಡುತ್ತಿರುತ್ತಾಳೆ. ದುರಾದೃಷ್ಟವಶಾತ್ ಕಾಡಿನ ಮರಗಳ ನಡುವೆ ಇದ್ದ ಹೆಬ್ಬಾವು ಅವಳ ಕತ್ತಿಗೆ ಸಿಕ್ಕಿ ಹಾಕಿಕೊಳ್ಳುತ್ತದೆ. ಕಿರಿಧಣಿ ಹೆಬ್ಬಾವಿಗೆ ಹೆದರಿ ಓಡಿಹೋಗುತ್ತಾನೆ. ಅಲ್ಲಿಗೆ ಬಂದ ಚೆನ್ನ ಹೆಬ್ಬಾವಿನಿಂದ ರಕ್ಷಿಸಿ ಅವಳನ್ನು ನಾಡಿಗೆ ಸೇರಿಸುತ್ತಾನೆ. ಸದಾ ಸೊಂಟಕ್ಕೆ ಟವೆಲ್ ಕಟ್ಟಿ ಹೋರಾಟಕ್ಕೆ ಸಿದ್ಧ ಎನ್ನುವಂತೆ ಚೆನ್ನ ಅಂದು ನಿಜಕ್ಕೂ ವೀರಾವೇಶದಿಂದ ಹೆಬ್ಬಾವಿನೊಂದಿಗೆ ಸೆಣಸಿ ಒಂದು ಹೆಣ್ಣಿನ ಮಾನಪ್ರಾಣ ರಕ್ಷಣೆ ಮಾಡಿದ್ದಾನೆ.

ಪುನರ್ಜನ್ಮ ಸಿನಿಮಾದಲ್ಲಿ ನಾಗಿ ಲಂಗ, ಬ್ಲೌಸ್, ದಾವಣಿ ತೊಟ್ಟಿದ್ದಾಳೆ. ಕೈಯಲ್ಲಿ ಗಾಜಿನ ಬಳೆ, ಹಣೆಗೆ ಕುಂಕುಮ, ಮುಗ್ಧ ಮುಖ, ಹಳ್ಳಿ ಸೊಗಡು ಎದ್ದು ಕಾಣುತ್ತದೆ. "ನೀಲಕ್ಕನ ತಮ್ಮ ಬಂದವರೆ ಏನೋ ಬಿರ್ರನೆ ಮನೆಗೆ ಬರಬೇಕೆಂತೆ" ಎಂದು ಸಂದೇಶ ಕೊಡುತ್ತಾಳೆ. ಚೆನ್ನ "ಹೊಲದ ಕೆಲಸ ಮುಗಿಸಿ ಊಟಕ್ಕೆ ಅಲ್ಲಿಗೆ ಬಾ" ಎಂದು ತಮ್ಮನಿಗೆ ಆದೇಶಿಸುತ್ತಾನೆ.

ಸಂಪತ್ತಿಗೆ ಸವಾಲ್ ವಿಶ್ವ ಕಚ್ಚೆ ಪಂಚೆ, ಕಿವಿಗೆ ಓಲೆ, ಹೆಗಲ ಮೇಲೆ ಒಂದು ಟವೆಲ್, ನೋಡಿದ ತಕ್ಷಣ ಹಳ್ಳಿಯವ ಎಂದು ತಿಳಿಯುತ್ತದೆ. ರಾಜಾಶಂಕರ್ ವಿಶ್ವನ ಪಾತ್ರದಲ್ಲಿ ಬಹಳ ಸಹಜ ಅಭಿನಯದಿಂದ ಎಲ್ಲರ ಗಮನ ಸೆಳೆಯುತ್ತಾರೆ. ಗೌಡನ ದರ್ಪದ ನಡಿಗೆ, ರೇಷ್ಮೆ ಷರ್ಟು, ಕೈಯಲ್ಲಿ ಕಡಗ, ಹುರಿಮೀಸೆ, ಕತ್ತಿಗೆ ಚಿನ್ನದ ಸರ, ಬೆರಳುಗಳಲ್ಲಿ ಉಂಗುರ, ಕೈಯಲ್ಲಿ ಕೋಲು ಹಿಡಿದಿದ್ದಾನೆ. ದುಡ್ಡು ತೆಗೆದುಕೊಂಡು ಹೊರಡುವ ಸಮಯಕ್ಕೆ ಸಾಹುಕಾರನ ಮಗಳು ದುರ್ಗಿ ರೇಷ್ಮೆ ಲಂಗ ದಾವಣಿ ತೊಟ್ಟು ಚಿನ್ನದ

ಒಡವೆಗಳನ್ನು ಹೇರಿಕೊಂಡು ಬೆಳ್ಳಿ ಕೊಡ ಹಿಡಿದು ನೀರು ತರಲು ಊರ ಕೆರೆಗೆ ಹೊರಟಿದ್ದಾಳೆ. ದೇಸಿ ಸೊಗಡನ್ನು ನೋಡಬೇಕಾದರೆ ಸಂಪತ್ತಿಗೆ ಸವಾಲ್ ಸಿನೆಮಾ ನೋಡಬೇಕು. ಆರಂಭದಿಂದ ಅಂತ್ಯದವರೆವಿಗೂ ಸಿನೆಮಾ ಹಳ್ಳಿಯಲ್ಲಿಯೇ ನಡೆಯುತ್ತದೆ. ಕಿವಿಗೆ ಓಲೆ, ಕಾಲಿನಲ್ಲಿ ಕಾನ್ಪುರ ಚಪ್ಪಲಿ, ಕಚ್ಚೆ ಪಂಚೆ, ಕೆಂಪು ಷರ್ಟು, ಸೊಂಟಕ್ಕೆ ಕೊಡಲಿ ಸಿಕ್ಕಿಸಿಕೊಂಡಿದ್ದಾನೆ. ನೋಡಿದ ತಕ್ಷಣ ಘಟಿಂಗ ಅನ್ನಿಸಿದರೂ ನಿಜವಾದ ಘಟಿಂಗನಲ್ಲ ಕಡಿದರೆ ಎರಡಾಳಾಗುತ್ತಾನೆ. ತೋಳಿನಲ್ಲಿ ಕಸುವು, ಬೆಟ್ಟವನ್ನೆ ಕಡಿದು ಉರುಳಿಸುವ ಛಲ. ಕೂಲಿ ಮಾಡಿ ತಿಂದರೂ ಆತ್ಮಾಭಿಮಾನಕ್ಕೇನೂ ಕೊರತೆಯಿಲ್ಲ. ಅವನದು ಸಂಪೂರ್ಣ ಹಳ್ಳಿ ಸೊಗಡಿನ ಭಾಷೆ, ಏಟಿಗೆ ಎದಿರೇಟು, ಮಾತಿಗೆ ಮಾತು, ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ ಎನ್ನುವ ಹಾಗೆ ಮಾತಿನಲ್ಲಿ ಯಾರೂ ಅವನನ್ನು ಸೋಲಿಸಲಾರರು.

ದುರ್ಗಿ ಸಾಹುಕಾರನ ಜಂಭದ ಮಗಳು. ರೇಷ್ಮೆ ಲಂಗ ದಾವಣಿ ಮೈತುಂಬಾ ಒಡವೆ, ಹಣೆಯಲ್ಲಿ ಕುಂಕುಮ, ಕೈತುಂಬಾ ಬಳೆ, ಓಲೆ ಜುಮುಕಿ, ಕೆನ್ನೆ ಸರಪಳಿ ಉದ್ದ ಜಡೆ, ಚೌಲಿ, ಕುಚ್ಚು ಹಾಕಿದ್ದಾಳೆ. ಕನಕಾಂಬರ ಹೂ ಮುಡಿದಿದ್ದಾಳೆ. ಬೇವರ್ಸಿ, ಬಿಕನಾಸಿ, ಹಳೇಬೇವರ್ಸಿ ಎಂದು ನಿರರ್ಗಳವಾಗಿ ಬೈಗುಳದ ನುಡಿ ಮುತ್ತುಗಳನ್ನು ಉದುರಿಸುತ್ತಾಳೆ. ಇವಳ ಭಾಷೆಯಲ್ಲಿಯೇ ದೇಸಿತನ ಅಡಗಿದೆ. ಜನಪದ ನುಡಿ ತಂತಾನೆ ಹೊರಬಂದಿದೆ. ಈ ಎಲ್ಲಾ ಸಣ್ಣ ಪುಟ್ಟ ಅಂಶಗಳು ರಾಜಣ್ಣನವರ ಚಿತ್ರಗಳಲ್ಲಿ ತಂತಾನೆ ಕಂಡು ಬರುತ್ತವೆ. ಏನೇ ಬಂದರೂ ಹೆದರದ ಭದ್ರ ದುರ್ಗಿಗೆ ಬಾಯಿ ಮುಚ್ಚಿಕೊಂಡು ಹೋಗೆಲೆ ಎಂದು ಬೈದು ಹೇಳುತ್ತಾನೆ. ನಮ್ಮ ಅಪ್ಪನಿಗೆ ಹೇಳಿ ಮಾಡಿಸುತ್ತೇನೆ ಎಂದು ಸಿಟ್ಟು ಕೋಪ ಅಸಹಾಯಕತೆಯಿಂದ ದುರ್ಗಿ ಕೊತಕೊತ ಎಂದು ಕುದಿಯತ್ತ ಹೋಗುತ್ತಾಳೆ.

### ೪.೩ ಡಾ.ರಾಜ್ ಅವರ ಸಿನಿಮಾಗಳಲ್ಲಿ ಮೌಲ್ಯ ಆಧಾರಿತ ಸಂಬಂಧಗಳು

ಡಾ.ರಾಜ್ ಅವರು ೨೦೯ ಚಲನಚಿತ್ರ ಪೂರೈಸಿದ ಹೆಗ್ಗಳಿಕೆಯಿದೆ. ಅವರ ಚಲನಚಿತ್ರಗಳು ಬಹುತೇಕ ಮನುಷ್ಯ ಸಂಬಂಧಗಳು ಹೊಂದಿ ಬಹುತ್ವದ ನಡೆಯನ್ನು ಸಾಧಿಸಿವೆ. ಚಿತ್ರದ ಮೂಲಕ ಆದರ್ಶ ನಾಯಕನಾಗಿ ಸದಾಕಾಲ ಪ್ರಸ್ತುತವಾಗುವ ರಾಜಣ್ಣ ಅವರು ಎಂದಿಗೂ ಚಿರ ಯುವಕನಾಗಿ ಸಮಾಜದಲ್ಲಿ ಅಸಮಾನತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದ್ದಾರೆ. ಸಮಾಜಕ್ಕೆ ಸಂಜೀವಿನಿಯಂತೆ ಸಮೃದ್ಧ ಶಾಂತಿಮಂತ್ರ ಸಾರುವ ಸಮಾಜ ಸುಧಾರಕನಾಗಿದ್ದಾನೆ. ರಾಜಣ್ಣನವರ ಚಿತ್ರಗಳು ಎಷ್ಟು ಪ್ರಸ್ತುತ ಎನ್ನುವ ವಿಷಯವನ್ನು ಸಹ ಅಧ್ಯಯನದ ವ್ಯಾಪಿಸಿ ಬಳಸಲಾಗಿದೆ. ರಾಜಣ್ಣನವರು ಗಾಯನದಿಂದ ಸಂಗೀತದಿಂದ, ಅತ್ಯುತ್ತಮ ಚಿತ್ರಕಥೆಗಳಿಂದ ಕುಟುಂಬಸ್ಥರು ನೋಡಬಹುದಾದ ಸರಳ ನಿರೂಪಣಾ ಶೈಲಿಯಿಂದ ಇವರ ಚಿತ್ರಗಳು ಜನರ ಮನಸೂರೆಗೊಂಡಿವೆ. ಜೊತೆಗೆ ವೈಶಿಷ್ಟ್ಯವಾದ ಬಹುತ್ವ ಮೌಲ್ಯಗಳನ್ನು ತೆರೆದಿಡುವ ಪ್ರಯತ್ನವನ್ನು ಸಂಶೋಧನೆ ಮುಖೇನ ಕೈಗೊಳ್ಳಲಾಗಿದೆ.

ಡಾ.ರಾಜ್ ಅವರು ಜೀವನದಲ್ಲಿ ತುಂಬಾ ಕಷ್ಟದಿಂದ ಬಂದವರು ಅವರ ೧೯೫೨ರಲ್ಲಿ ಶ್ರೀನಿವಾಸ ಕಲ್ಯಾಣ ಸಿನಿಮಾದಲ್ಲಿ ಸರ್ಪರ್ಷಿಗಳ ಸಾಲಿನಲ್ಲಿ ನಿಲ್ಲುವ ಅವಕಾಶ ಈ ಸಿನಿಮಾ ದೃಶ್ಯದಲ್ಲಿ ಮುತ್ತುರಾಜ್

ಕಾಣಸಿಕೊಳ್ಳುತ್ತದೆ. ಇದರಿಂದ ಸಂಭಾವನೆಯಾಗಿ ಬಂದ ಮುವತ್ತು ರೂಪಾಯಿಗಳಲ್ಲಿ ಅಮ್ಮನಿಗಾಗಿ ಬಂದು ಕಂಬಳಿ ಕೊಂಡುಕೊಳ್ಳುತ್ತಾರೆ. ಇದು ಅವರು ಕಷ್ಟ ಜೀವನದಲ್ಲಿ ಅಮ್ಮನಿಗಾಗಿ ಮಾಡಿದ ಸಾಧನೆ ರಾಜ್‌ರಲ್ಲಿ ತೃಪ್ತಿ ತಂದಿದೆ. ಹೀಗೆ ಕಂಪನಿ ನಾಟಕದಲ್ಲಿ ದೊಡ್ಡ ದೊಡ್ಡ ಪಾತ್ರದಲ್ಲಿ ಕಾಣಿಸಿಕೊಳ್ಳುತ್ತಾ ಕುರುಕ್ಷೇತ್ರದ ಅರ್ಜುನ, ವಸಂತ ಸೇನೆ, ಎಚ್ಚಮ್ಮನಾಯಕ, ಸಂಪೂರ್ಣ ರಾಮಾಯಣ, ಶ್ರೀರಾಮ, ಬಸವಣ್ಣ, ನಾರದ, ಕಣ್ಣಪ್ಪ, ಹೀಗೆ ಹಲವು ವೈವಿಧ್ಯಮಯ ಪಾತ್ರದಲ್ಲಿ ಮಿಂಚಿದರು ಸಮಾಜಕ್ಕೆ ಮೌಲ್ಯಯುತ ಸಂಬಂಧವನ್ನು ಬೆಳೆಸಿದರು. ಅ.ನಾ.ಪ್ರಹ್ಲಾದರಾವ್ ಅವರ "ಪ್ರಾಣ ಪದಕ" ಕೃತಿಯಲ್ಲಿ ರಾಜ್ ಅವರ ತಂದೆ ಪುಟ್ಟಸ್ವಾಮಯ್ಯನವರು "ಸ್ವರ ನಾಭಿಯಿಂದ ಬರಬೇಕು, ಶಾರೀರ ಶುದ್ಧವಾಗಿರಬೇಕು. ಇದಕ್ಕೆ ಬದ್ಧತೆ ಇರಬೇಕು. ಆಸಕ್ತಿ ಇಟ್ಟು ಅಭ್ಯಾಸ ಮಾಡಬೇಕು" ಎಂಬ ಮಾತುಗಳನ್ನು ಅಕ್ಷರಶಃ ನಿಜವಾಗಿಯೂ ಜೀವನ ಪರ್ಯಂತ ಪಾಲಿಸಿದರು. ೧೯೫೪ರಲ್ಲಿ ಬೇಡರ ಕಣ್ಣಪ್ಪ ಚಿತ್ರ ಬಿಡುಗಡೆಯಾಯಿತು. ಅವರ ಮೊದಲ ಸಂಭಾವನೆ ೧೮೦೦ ರೂಪಾಯಿ ಇತ್ತು. ರಾಜ್ ಅವರ ಅಭಿನಯ ಪ್ರತಿಯೊಬ್ಬ ಜನರ ನಾಲಿಗೆ, ಮನಸ್ಸಿನಲ್ಲಿಯೂ ಅಚ್ಚಳಿಯದೆ ಉಳಿದಿದೆ.

ಬಂಗಾರದ ಮನುಷ್ಯ ಚಿತ್ರದಲ್ಲಿ ಆಧುನಿಕ ಯುಗದ ಪ್ರಕ್ರಿಯೆ ನಡೆಯುತ್ತದೆ. ವಿದ್ಯಾವಂತ ಜನರು ಕೃಷಿ ಅವಲಂಬಿಸದೇ ಬೇರೆ ರೀತಿಯ ಕೆಲಸ ಪ್ರಾರಂಭಿಸಿರುವುದು ಕಂಡು ಬರುತ್ತಿದೆ. ಇದೇ ಕಾರಣಕ್ಕಾಗಿ ಬಂಗಾರದ ಮನುಷ್ಯ ಚಿತ್ರದಲ್ಲಿ ರಾಜ್ ಅವರು ಹಳ್ಳಿಯ ಜೀವನ ಬಂಗಾರದ ಜೀವನ ಎಂಬುದು ಮನವರಿತು ಕೃಷಿ ಮತ್ತು ಜೀವನ ಮೌಲ್ಯಯುತವಾದದ್ದು ಎಂಬ ತಿಳುವಳಿಕೆಯಿಂದ ಪಟ್ಟಣದಿಂದ ಹಳ್ಳಿಯ ಕಡೆಗೆ ಬರುತ್ತಾನೆ. ಬಡತನದ ಹಿನ್ನೆಲೆಯಲ್ಲಿ ಬಂದ ರಾಜ್ ಅವರು ನಮ್ಮ ಭಾರತದ ವ್ಯವಸ್ಥೆಯಲ್ಲಿ ರೈತರ ಸಂಕಷ್ಟಗಳು ಏನು ಎಂಬುದನ್ನು ಅರಿತ್ತಿದ್ದರು. ಭಾರತ ದೇಶದಲ್ಲಿ ಅತಿ ದೊಡ್ಡ ಜನಸಂಖ್ಯೆ ಹಳ್ಳಿಯಲ್ಲಿ ವಾಸ ಮಾಡುತ್ತಾರೆ. ಅತಿ ಮುಖ್ಯ ಉದ್ಯೋಗ ಕೃಷಿ, ರೈತರು ವರ್ಷವಿಡೀ ದುಡಿದರೂ ಹೊಟ್ಟೆ ತುಂಬಿಸಿಕೊಳ್ಳಲಾಗದ ಪರಿಸ್ಥಿತಿ ಸಾಲದ ಹೊರೆ, ಮಳೆಯ ಕೊರತೆ, ಜೊತೆಗೆ ಮಧ್ಯವರ್ತಿಗಳ ಕಾಟ, ಕೂಲಿಯಾಳುಗಳ ಸಮಸ್ಯೆ, ಬೆಳೆದ ಬೆಳೆಗೆ ನ್ಯಾಯಾಯುತವಾಗಿ ಬೆಂಬಲ ಬೆಲೆ ಸಿಗುವುದಿಲ್ಲ. ಇಂಥ ಸ್ಥಿತಿಯಲ್ಲಿ ಡಾ.ರಾಜ್ ಅವರ ಬಂಗಾರದ ಮನುಷ್ಯ ಮತ್ತು ಒಡಹುಟ್ಟಿದವರು, ಕಾಮನಬಿಲ್ಲು ಮುಂತಾದ ಸಿನಿಮಾಗಳು ದುಡಿಮೆಯೆ ದೇವರು ಎಂಬುದನ್ನು ಬಿಂಬಿಸಿವೆ.

ಕಾಮನಬಿಲ್ಲು ಸಿನಿಮಾ ರಾಜಣ್ಣನವರ ಚಿತ್ರದಲ್ಲಿ ಸಾಮಾನ್ಯವಾಗಿ ಕಂಡು ಬರುವ ದೃಶ್ಯಗಳೆಂದರೆ ಊರ ಜಾತ್ರೆ, ದನದ ಜಾತ್ರೆ, ರಥ, ತೇರು, ಸಂತೆ, ಉತ್ಸವ ನಮ್ಮ ಜನಪದರಲ್ಲಿ ಕಂಡು ಬರುವ ಹಬ್ಬ ಹರಿದಿನಗಳನ್ನು ಅದೇ ಸಮಯಕ್ಕೆ ಹೋಗಿ ಅಲ್ಲಿ ಚಿತ್ರೀಕರಣ ಮಾಡಿ ಚಿತ್ರದಲ್ಲಿ ಬಳಸಿಕೊಂಡ ಪ್ರಸಂಗಗಳಿವೆ. ಕೆಲವೊಮ್ಮೆ ಚಿತ್ರಕ್ಕೆಂದೇ ಅವನ್ನು ಸೃಷ್ಟಿ ಮಾಡಿರುವುದು ಉಂಟು. ಚಂದ್ರು ತಮ್ಮ ಊರಿನ ಜಾತ್ರೆಗೆ ಸೂರಿ ಸಂಸಾರವನ್ನು ಕರೆದೊಯ್ಯುತ್ತಾನೆ. ಅಲ್ಲಿ ಗಿರಿಜಾ ತಾಯಿ ಇಲ್ಲದ ಮಗುವನ್ನು ಬಹಳ ಚೆನ್ನಾಗಿ ನೋಡಿಕೊಳ್ಳುತ್ತಾಳೆ. ಈ ಸಂಗತಿ ಚಂದ್ರುಗೆ ಬಹಳ ಇಷ್ಟವಾಗುತ್ತದೆ. ಎಲ್ಲರೂ ಸೇರಿ ರಥ ಎಳೆಯುವ ತೇರಿಗೆ ಬಾಳೆಹಣ್ಣು ಮರುಗ ಎಸೆಯುವ ದೃಶ್ಯವಿದೆ. ಅಲ್ಲೆಲ್ಲಾ ಜನಪದ ಶೈಲಿಯ

ರಥ, ಊರು ಹಬ್ಬದ ವಾತಾವರಣವಿದೆ. ರಥಕ್ಕೆ ಕಟ್ಟಿರುವ ದಪ್ಪವಾದ ಹಗ್ಗವನ್ನು ಹೆಂಗಸರು ಒಂದು ಕಡೆ, ಗಂಡಸರು ಒಂದು ಕಡೆ ಎಳೆಯುತ್ತಾರೆ. ದೇವರ ಉತ್ಸವ ಮೂರ್ತಿಯ ಮೌಲ್ಯಯುತವಾದ ದರ್ಶನವಾಗುತ್ತದೆ.

ಸರ್ವಮಂಗಳಾ ಚಿತ್ರದಲ್ಲಿ ಮೊದಲಿನಿಂದಲೂ ಹಳ್ಳಿಯಲ್ಲಿ ಸಾಬರು ವಾಸವಾಗಿದ್ದು, ಅವರು ಹಿಂದೂಗಳ ಜೊತೆ ಬಹಳ ಅನ್ಯೋನ್ಯರಾಗಿರುತ್ತಾರೆ. ಅವರು ಮೊಹರಂ ಗೀತೆಗಳು ಅಪ್ಪಟ ದೇಸಿ ಜಾನಪದ ಗೀತೆಗಳಾಗಿವೆ. ಇಂಥಹವೇ ಒಬ್ಬರು ಮುಸಲ್ಮಾನ ಬಂದು ಆಗಾಗ್ಗೆ ಪಟ್ಟಣಕ್ಕೆ ಹೋಗಿ ಕೆಲ ಸಾಮಾನುಗಳನ್ನು ತಂದು ಹಳ್ಳಿಯಲ್ಲಿ ಮಾರುತ್ತಾನೆ. ಚುಂಚನಕಟ್ಟೆ ಜಾತ್ರೆಯಿಂದ ಸರ್ವಿಗೆ ಆಟದ ಸಾಮಾನು ತಂದು ಕೊಡುತ್ತಾನೆ. ನಿನ್ನ ಗಂಡ ಎಲ್ಲಿ ಎಂದು ರೇಗಿಸುತ್ತಾನೆ. ಇವರು ಮಾರುವ ಬೊಂಬಾಯಿ ಮಿಠಾಯಿ ತಿನ್ನದ ಹುಡುಗರು ಹಳ್ಳಿಯಲ್ಲಿ ಯಾರೂ ಇಲ್ಲ. ಬೊಂಬಾಯಿ ಮಿಠಾಯಿಯಲ್ಲಿ ವಾಚು, ಗೊಂಬೆ, ಮಾಡಿ ಕೈಗೆ ಕಟ್ಟುತ್ತಿದ್ದರು. ಆದರೆ ಅವೆಲ್ಲ ಈಗೆಲ್ಲಿ? ಈ ಒಂದು ಸನ್ನಿವೇಶದಲ್ಲಿ ಜಾನಪದ ಪರಿಕರಗಳನ್ನು ಈ ರೀತಿಯಾಗಿ ಬಳಸಲಾಗಿದೆ. ತೆಂಗಿನ ಸಸಿ ನೆಟ್ಟಿದ್ದಾರೆ, ಅಲ್ಲಿಯೇ ಹುಲ್ಲು ತುಂಬಿದ ಗಾಡಿ ನಿಲ್ಲಿಸಲಾಗಿದೆ, ನಟರಾಜನನ್ನು ಮೈಸೂರಿಗೆ ಹೆಚ್ಚಿನ ಓದಿಗೆ ಕಳುಹಿಸಬೇಕೆಂದು ಮನೆಯಲ್ಲಿ ಚರ್ಚೆ ನಡೆದರೂ ವಿಷಕಂಠ ಹಣ ಖರ್ಚಾಗುತ್ತದೆ ಎಂದು ಹಿಂದೇಟು ಹಾಕುತ್ತಾನೆ. ಆದರೂ ಕೊನೆಗೆ ಅಜ್ಜಿಯ ಹಠದಿಂದ ಒಪ್ಪುತ್ತಾನೆ. ಗಂಡು ಮಕ್ಕಳಿಗೆ ಓದು ಮುಖ್ಯ ಎಂದು ನಟರಾಜನನ್ನು ಮೈಸೂರಿಗೆ ಕಳುಹಿಸಲು ಒಪ್ಪುತ್ತಾನೆ. ಆ ಕಾಲಕ್ಕೆ ಹೆಣ್ಣು ಮಕ್ಕಳಿಗೆ ವಿದ್ಯೆ ಏನು ಬೇಕಿರಲಿಲ್ಲ. ಶಾಲೆಗೆ ದೂರದ ಊರಿಗೆ ಕಳುಹಿಸುವ ಮಾತು ಇನ್ನೆಲ್ಲಿ? ಮಂಗಳೆ ಮನೆಯಲ್ಲೆ ಉಳಿಯುತ್ತಾಳೆ. ಹೆಣ್ಣುಮಕ್ಕಳ ಪ್ರಪಂಚ ಕೇವಲ ಮನೆಯೊಳಗೆ ಅದರಲ್ಲೂ ಅಡಿಗೆ ಮನೆಯಲ್ಲಿ. ಮಕ್ಕಳ ಲಾಲನೆ, ಪಾಲನೆ , ಊಟ, ಉಪಚಾರ, ಬಸಿರು, ಬಾಣಂತನದಲ್ಲಿ ಇವರ ಜೀವನ ಆಗಿಹೋಗುತ್ತದೆ.

ಹಬ್ಬಕ್ಕೆ ಕರೆಯಲು ಅಣ್ಣ ಬರುತ್ತಾನೆ. ಆಗ ಅದೇ ನೆಪದಲ್ಲಿ ತವರಿಗೆ ಹೋಗಬಹುದು. ಅಲ್ಲಿ ಅಪ್ಪ ಅಮ್ಮನನ್ನು ನೋಡಬಹುದು ಎಂದು ಹೆಣ್ಣು ಮಕ್ಕಳು ಕಾಯುತ್ತಿದ್ದರು. "ಪಂಚಮಿ ಹಬ್ಬ ಉಳಿದಾವ ದಿನಾ ಯಾಕಾ ಅಣ್ಣ ಬರಲಿಲ್ಲ ಏಕೆ ಕರಿಯಾಕ?...." ಅಣ್ಣಾ ಬಂದು ಕರೆಯದಿದ್ದರೆ ಗಂಡನ ಮನೆಯಲ್ಲಿ ಕಳುಹಿಸುತ್ತಿರಲಿಲ್ಲ. ಕರೆಯದೆ ಅವಳೂ ಸಹಾ ಹೋಗುವುದಿಲ್ಲ. ಅದೇ ನಮ್ಮ ಸಂಸ್ಕೃತಿ. ಇಂತಹ ಸನ್ನಿವೇಶದಲ್ಲಿ ನಿರ್ದೇಶಕರಾದ ಚದುರಂಗ ಅವರು ಎಲ್ಲಿಯೂ ಜನಪದ ಚೌಕಟ್ಟನ್ನು ಮೀರುವುದಿಲ್ಲ. ಮಂಗಳೆ ಅಳುತ್ತ ಗಂಡನ ಮನೆ ಸೇರುತ್ತಾಳೆ. ತಾಯಿ ಪಾರ್ವತಿ ಸಹಾ ಮಗಳನ್ನು ಅಳುತ್ತಲೇ ಕಳುಹಿಸಿಕೊಡುತ್ತಾಳೆ. ಹೊರಡುವ ಮುನ್ನ ನಟರಾಜ ಮಂಗಳೆ ಇಬ್ಬರೂ ಕೊಟ್ಟಿಗೆಯಲ್ಲಿ ಸಂಧಿಸುತ್ತಾರೆ. ಇಬ್ಬರಲ್ಲೂ ಮೌನ. ಇಷ್ಟವಿಲ್ಲದಿದ್ದರೂ ಅಪ್ಪನ ಒತ್ತಾಯಕ್ಕೆ ಕಟ್ಟುಬಿದ್ದು ಮಂಗಳೆ ಮದುವೆ ಆಗಿದ್ದಾಳೆ. ಆಗ ನಟರಾಜನಿರಲಿಲ್ಲ. ಈಗ ಬಂದಿದ್ದಾನೆ. ಇಬ್ಬರಿಗೂ ತಮ್ಮ ಕರ್ತವ್ಯಗಳ ಅರಿವಿದೆ. ಹಿಂದೆ ಅವರಿಬ್ಬರೂ ಪ್ರೇಮಿಗಳಿರಬಹುದು ಆದರೆ ಮಂಗಳೆ ಕುತ್ತಿಗೆಯಲ್ಲಿ ಪವಿತ್ರ ತಾಳಿಯಿದೆ. ಅವಳು ಬೇರೊಬ್ಬರ ಸ್ವತ್ತು. ಪರಸ್ತ್ರೀ, ಪರಧನಕ್ಕೆ ಆಸೆ ಪಡುವ ಸಂಸ್ಕೃತಿ ನಮ್ಮದಲ್ಲ.

ಇದೇ ಸರಿ ಎಂದು ನಾನು ಹೇಳುವುದಿಲ್ಲ. ಆದರೆ ಇಂಥಹ ಮೌಲ್ಯಗಳನ್ನೇ ಸರ್ವಮಂಗಳಾ ಸಿನೆಮಾ ಪ್ರತಿನಿಧಿಸುತ್ತದೆ. ಇದು ಕೇವಲ ಜಾನಪದ ಮೌಲ್ಯ ಆಗಿರದೆ ಸಮಾಜದ ಮೌಲ್ಯವಾಗಿದೆ. ಕೆಂಡವನ್ನು ಹೆಚ್ಚು ದಿನ ಸೆರಗಿನಲ್ಲಿ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಮನಸ್ಸಿನಲ್ಲಿ ಒಂದು ನಾಲಿಗೆಯಲ್ಲಿ ಒಂದು ಎಂದು ನಡೆಯಲು ಮಂಗಳೆಗೆ ಸಾಧ್ಯವಿಲ್ಲ. ಅವಳು ಗಂಡನ ಮನೆಯಲ್ಲಿ ಅನ್ಯಮನಸ್ಕಳಾಗಿ ಇದ್ದಾಳೆ. ದೇಹ ಗಂಡನಿಗೆ ಒಪ್ಪಿಸಿದರೂ ಮನಸ್ಸು ನಟರಾಜನಿಗೆ ಅರ್ಪಿಸಿದ್ದಾಳೆ. ಅಡಿಗೆ ಮನೆ, ಸೌದೆ ಒಲೆ ಬೆಂಕಿ ಉರಿಯುತ್ತಿದೆ. ಅಲ್ಲಿ ಕುಳಿತ ಮಂಗಳೆಯ ಮನಸ್ಸು ಇನ್ನೆಲ್ಲೂ ಇದೆ. ಹಳ್ಳಿ ಮನೆಯ ಅಡುಗೆ ಮನೆ ಹಾಲು ಉಕ್ಕಿ ಹರಿಯುತ್ತದೆ. ಮಂಗಳೆಯ ಗಮನಕ್ಕೆ ಬರುವುದಿಲ್ಲ. ಅಲ್ಲಿಗೆ ಬಂದ ನಾಗತ್ತೆ ಹೀಗೆ ಹೇಳುತ್ತಾರೆ.

"ಹಿಂಗಾದ್ರೆ ಚೆನ್ನಾಗಿ ಅಟ್ಟು ಇಕ್ಕುತಾಳೆ (ಅಡಿಗೆ ಮಾಡ್ತಾಳೆ) ಬೇಯದ ಬೇಳೆ ಕಾಳನ್ನು ಯಾಪಾಟಿ (ಎಷ್ಟು) ಬೇಯಿಸಿದೆ ಏನು?" ಎಂದು ಹೀನಾಮಾನವಾಗಿ ಸೊಸೆಯನ್ನು ಬೈಯ್ಯುತ್ತಾಳೆ. ಹೌದು ಬೇಯದ ಬೇಳೆಯನ್ನು ಎಷ್ಟು ಬೇಯಿಸಿದ್ರೂ ಕಟ್ಟು ಬಿಡುವುದಿಲ್ಲ. ಒಪ್ಪದ ಮನಸ್ಸನ್ನು ಎಷ್ಟು ಒಪ್ಪಿಸುವುದು. "ಹೊಟ್ಟೆ ತುಂಬಿದವರಿಗೆ ಹಿಟ್ಟೇ ಕಲ್ಲು" ಎಂಬಂತೆ ಅಲ್ಲಿ ಮಂಗಳೆಗೆ ಸುಖವಿಲ್ಲ, ಇಲ್ಲಿ ನಟರಾಜನಿಗೆ ನೆಮ್ಮದಿ ಇಲ್ಲ. ಅವನೂ ಕಾಡು, ಮೇಡು, ಕಂಡ ಕಂಡ ಕಡೆ ಅಲೆಯುತ್ತಿದ್ದಾನೆ. ಎಲ್ಲೆಲ್ಲೂ ಅವನಿಗೆ ಮಂಗಳೆ ಕಾಣುತ್ತಾಳೆ. ಈ ತರಹದ ಜೀವನ ಮೌಲ್ಯಯುತ ಸಂಬಂಧಗಳ ಬಗ್ಗೆ ಪ್ರಶ್ನಿಸಲಾಗಿದೆ.

ಡಾ.ರಾಜ್ ಅವರ ಅಭಿಮಾನದ ಬಳಗ, ಕೃಷಿ ಪದ್ಧತಿ ಪ್ರಾರಂಭಿಸಿದ್ದು ಅಂದಿನ ದಿನದಲ್ಲಿ ಜನರ ಬಾಯಿ ಮಾತಾಗಿತ್ತು. ಆದರೆ ಇಂದಿನ ಯುವ ಪೀಳಿಗೆಯವರು ಯಾರೂ ನೇಗಿಲು ಹಿಡಿಯಲು ಧೈರ್ಯ ಮಾಡುವುದು ಕಡಿಮೆ. ಕಡಿಮೆ ಸಮಯದಲ್ಲಿ ಹೆಚ್ಚು ಹಣ ಸಂಪಾದನೆ ಮಾಡುವ ಮಾರ್ಗ ಹುಡುಕುತ್ತಾರೆ. ಸರಕಾರ ಮತ್ತು ಇತರೆ ಸಂಸ್ಥೆಗಳಲ್ಲಿ ಕೃಷಿಯೇತರ ಪದ್ಧತಿಗೆ ಹೆಚ್ಚು ಹೆಚ್ಚು ಹಣ ವಿನಿಯೋಗಿಸಿದರೂ ಪ್ರಯೋಜನವಾಗುತ್ತಿಲ್ಲ. ಅಂದು ಡಾ.ರಾಜ್ ಅವರ ಸಿನಿಮಾಗಳು ತುಂಬಾ ಪ್ರಭಾವಿತವಾಗಿದ್ದವು ಎಂಬುದನ್ನು ಮನಗಾಣಬೇಕಾಗಿದೆ.

ಡಾ.ರಾಜ್ ಅವರ ಅಭಿನಯ ಜನರ ಮನಸ್ಸನ್ನು ಸೂರೆಗೊಂಡು ರಾಜ್‌ಕುಮಾರ್ ಮನೆಮಾತಾಗಿದ್ದರು. ಉದಾ : ನನ್ನ ಮಗ ರಾಜಕುಮಾರ್‌ನ ಹಾಗೇ ಇದ್ದಾನೆ ಎಂಬ ಭಾವನೆ ವ್ಯಕ್ತಪಡಿಸುವುದು ಕಾಣುತ್ತೇವೆ. ಯಾಕೆಂದರೆ ಅವರ ಭಾಷೆ, ಉಡುಪು, ನಟನೆ, ಸರಳತೆ ಜವಾಬ್ದಾರಿಯುತವಾಗಿರುತ್ತಿತ್ತು. ಜನರು ಸಿನಿಮಾವನ್ನು ಮೌಲ್ಯಯುತವಾಗಿ ಗೌರವಿಸುವುದರ ಜೊತೆಗೆ ಅವಿನಾಭಾವ ಸಂಬಂಧ ಹೊಂದಿದ್ದರು. ಆದರೆ ಕೆಲವರು ಸಿನಿಮಾಗಳನ್ನು ಮನರಂಜನೆಗಾಗಿ ನೋಡುತ್ತಾರೆ. ಕೆಲವರು ತಮ್ಮ ಮನೋಸ್ಥೈರ್ಯಕ್ಕಾಗಿ ಹಾಗೂ ತಮ್ಮ ನೋವು ಸಂಕಷ್ಟಗಳ ನಿವಾರಣೆಗಾಗಿ ತಮ್ಮನ್ನು ತಾವು ತಿದ್ದುಕೊಳ್ಳುವುದಕ್ಕಾಗಿ ಸಿನಿಮಾ ನೋಡುತ್ತಾರೆ. ಇಂತಹ ಸಾಲಿನಲ್ಲಿ ಡಾ.ರಾಜ್ ಅಂತವರ ಸಿನಿಮಾಗಳು ಜನರಲ್ಲಿ ಮೌಲ್ಯ ಆಧಾರಿತ ಸಂಬಂಧಗಳಾಗಿ ಸೃಷ್ಟಿಸಿವೆ. ಅಂದಿನ ಕಾಲದಲ್ಲಿ ರಾಜಕುಮಾರನ ಸಿನಿಮಾ ಎಂದರೆ ಹಳ್ಳಿ ಹಳ್ಳಿಯಿಂದ ಸಿನಿಮಾ ಟೆಂಟ್‌ಗಳಿಗೆ ಹೋಗಿ ನೋಡಿದ್ದು ಇತಿಹಾಸ. ಇಲ್ಲಿ ಮುಖ್ಯವಾಗಿ ರಾಜ್ ಅವರ ಸಿನಿಮಾಗಳು

ಕೃಷಿ, ಜನಪದ, ಬಡವರ ಮಧ್ಯಮವರ್ಗದವರ ಪರವಾದ ನಿಲುವು, ಹೊಂದಿವೆ. ಜೊತೆಗೆ ಮಾರ್ಕ್ಸ್ ಚಿಂತನೆ, ಲೋಹಿಯಾ ಅವರ ಸಾಮಾಜಿಕ ಚಿಂತನೆಯಿದೆ. ಹೇಗೆಂದರೆ ಸವರ್ಣಿಯರ ದಬ್ಬಾಳಿಕೆಯಿಂದ ಕೂಡಿ, ಕೊನೆಗೆ, ಬಡವರ, ಶೋಷಿತ ಧ್ವನಿಯಾದ ಪರವಾದ ನಿಲುವು ತಾಳುತ್ತದೆ. ಇಂಥ ಸಂಗತಿಗಳು ಡಾ.ರಾಜ್ ಅವರ ಸಿನಿಮಾಗಳು ಸಾಕಷ್ಟಿವೆ. ಸನಾದಿ ಅಪ್ಪಣ್ಣ, ಬಂಗಾರದ ಮನುಷ್ಯ, ಸಂಪತ್ತಿಗೆ ಸವಾಲ್, ಜ್ವಾಲಾಮುಖಿ, ಆಕಸ್ಮಿಕ, ದೇವರ ಮಕ್ಕಳು ಇತ್ಯಾದಿ ಚಿತ್ರಗಳನ್ನು ಗಮನಿಸಬಹುದು.

ಡಾ.ರಾಜ್ ಅವರ ಸಿನಿಮಾಗಳು ಹೆಚ್ಚು ಹೆಚ್ಚು ಹಳ್ಳಿಯ ಬದುಕನ್ನು ಅನಾವರಣಗೊಳಿಸಿವೆ. ಕೆಲವು ಸಿನಿಮಾಗಳು ಸಮಾಜದಲ್ಲಿ ನಡೆಯುವ ಇನ್ನೊಂದು ಜಗತ್ತು ಅನಾವರಣಗೊಳಿಸಿದೆ. ಉದಾ : ಆಪರೇಷನ್ ಡೈಮಂಡ್ ರಾಕೆಟ್ ಹೀಗೆ ಇತಿಹಾಸ ಪ್ರಜ್ಞೆಯ ಸಿನಿಮಾಗಳು ಇವೆ. ಜನಪದೀಯ ಚಿತ್ರಗಳು ಇವೆ. ಇವೆಲ್ಲವುಗಳನ್ನು ಗಮನಿಸಿದಾಗ ಜನರ ಮನೋಭಾವದ ಆಧಾರದಲ್ಲಿ ಮೌಲ್ಯಯುತ ಸಂಬಂಧಗಳು ಸೃಷ್ಟಿಸಿವೆ. ರಾಜ್‌ಕುಮಾರ್ ಅವರ ಸಿನೆಮಾಗಳು ಪರಂಪರೆಯ ಮುಂದುವರಿಕೆಗಳಾಗಿ ಸನಾದಿ ಅಪ್ಪಣ್ಣ, ಜೀವನ ಚೈತ್ರ ಮುಂತಾದ ಚಿತ್ರಗಳ ಮೂಲಕ ೧೦೦% ಕನ್ನಡ ನಾಡಿನ ಶಿಷ್ಟಾಚಾರಗಳನ್ನು ನಿಭಾಯಿಸುವ ಚಿತ್ರಗಳೆನಿಸಿವೆ. ಒಂದು ಸಣ್ಣ ಉದಾಹರಣೆ ಎಂದರೆ ಹಳ್ಳಿಯಲ್ಲಿ ಬೀಡಿ ಸೇದಿಕೊಂಡು ಹೋಗುತ್ತಿರುವ ಹುಡುಗ, ದೊಡ್ಡವರನ್ನು ಕಂಡಾಗ ಬೀಡಿ ಬಿಸಾಕಿ ತಲೆ ತಗ್ಗಿಸಿ ಹೊರಟು ಹೋಗುತ್ತಾನೆ. ಗುರುಗಳನ್ನು ಗೇಲಿ ಮಾಡುವುದಿಲ್ಲ. ಕೆ.ಎಸ್. ಅಶ್ವತ್ಥ್ ಸಂಪತ್ತು ಮುಂತಾದವರು ಹಿರಿಯ ಗುರುಗಳ ಪಾತ್ರದಲ್ಲಿ ರಾಜಣ್ಣನವರ ಚಿತ್ರದಲ್ಲಿ ಸದಾ ಕಾಲ ಕಾಣಸಿಗುತ್ತಾರೆ. ಇವರ ಚಿತ್ರದ ಮತ್ತೊಂದು ಗರಿಮೆ ಎಂದರೆ ದೇಸಿತನ, ನಾಯಕ, ಖಳನಾಯಕ ಹೊಡೆದಾಡುತ್ತಿದ್ದಾರೆ ಎಂದರೆ ಲಾಂಗ್, ಚೈನ್ ಅಲ್ಲಿ ಕಾಣಸಿಗುವುದಿಲ್ಲ, ಬಿದಿರು, ಕೋಲು, ಕೊಡಲಿ ಕಾಣಸಿಗಬಹುದು. ಎತ್ತಿನ ಬಂಡಿ, ಕುದುರೆ ಗಾಡಿ, ಕುದುರೆ ಮೇಲೆ ಕತ್ತಿವರಸೆ, ಊರ ಮುಂದೆ ಗರಡಿ ಮನೆ, ಗರಡಿ ಮನೆಯಲ್ಲಿ ಕಾಣಬರುವ ಗುಂಡು, ಕಲ್ಲು, ಕಬ್ಬಿಣದ ಗುಂಡು, ಇಂತಹ ವಸ್ತುಗಳ ಬಳಕೆ ಕಾಣುತ್ತದೆ. ಬಾರುಕೋಲು, ಮಿಣಿ (ಎತ್ತಿಗೆ ಕಟ್ಟುವ ಹಗ್ಗ) ಮಚ್ಚು, ಕೊಡಲಿ, ಇವುಗಳನ್ನು ಸಹಾ ನೋಡಬಹುದು.

ರಾಜಣ್ಣನವರ ತನ್ನದೇ ಚಿತ್ರಗಳಲ್ಲಿ ಕನ್ನಡ ನಾಡಿನ ಪ್ರಾದೇಶಿಕತೆ ನಿಚ್ಚಳವಾಗಿ ಪ್ರತಿಬಿಂಬಿತವಾಗಿದೆ. ಹಳ್ಳಿ ಎಂದರೆ ಅದು ನಮ್ಮ ನೆಲದ ಸಾಂಪ್ರದಾಯಿಕ ಸ್ಥಿತಿ ಗತಿಯ ಇರುವಿಕೆಯ ಚಿತ್ರವಾಗಿರುತ್ತದೆ. ಉದಾಹರಣೆಗೆ ಎತ್ತಿನ ಬಂಡಿಗಳು, ರಾಗಿ ಮೂಟೆಗಳು, ಹಜಾರಗಳು, ಮನೆಯ ಒಳಾಂಗಣದ ಪ್ರತಿವಿವರಗಳನ್ನು ದಾಖಲಿಸುವಾಗ ಕನ್ನಡ ಮನೆಗಳ ಸಾಂಪ್ರದಾಯಿಕ ವಿವರಗಳನ್ನು ಬಿಂಬಿಸಲಾಗುತ್ತದೆ. ದೇಶದ ಸ್ಥಿತಿಗತಿಗಳನ್ನು ಅರಿಯಲು ಹಳ್ಳಿಗಾಡಿನ ಅಧ್ಯಯನ ಆಗಬೇಕಾಗಿದೆ. ಜನಪದ ಸಂಸ್ಕೃತಿಯು ಸಹ ನಮ್ಮ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವೆನಿಸಿದೆ. ರಾಜಣ್ಣನವರ ಒಂದೊಂದು ಚಿತ್ರದ ಮೂಲಕ ಜನಪದ ಸಂಸ್ಕೃತಿ ಅಧ್ಯಯನ ಒಂದು ಸಣ್ಣ ಪ್ರಯತ್ನವಾಗಿದೆ.

ಸಂಪತ್ತಿಗೆ ಸವಾಲ್ ಚಿತ್ರ : ಮನೆಗೆ ಬಂದ ಬಾಲಕೃಷ್ಣ ಸಾಹುಕಾರನ ಮನೆಯಲ್ಲಿ ನಡೆದ ಸಂಗತಿಯನ್ನು ಉಪ್ಪು ಖಾರ ಹಚ್ಚಿ ಹೇಳುತ್ತಾನೆ. "ಊರಿಗೊಂದು ನಂದಿಕಂಭ ಅನ್ನೋ ಹಾಗೆ ನಿನ್ನ

ಮಗ". ಭದ್ರ ಗೌಡರ ಹತ್ತಿರ ಏಕೆ ಜೀತ ಮಾಡಬಾರದು" ಎಂದು ಭದ್ರನನ್ನು ಕೇಳುತ್ತಾನೆ. ಅದಕ್ಕೆ ಭದ್ರ ಪ್ರಾಣ ಹೋದರೂ ಸಾಹುಕಾರನ ಆಳಾಗಲು ಸಾಧ್ಯವಿಲ್ಲ ಎಂದು ಖಡಾಖಂಡಿತವಾಗಿ ಹೇಳುತ್ತಾನೆ. ಸಾಹುಕಾರನ ಮನೆ ಮಾತು ಚೆಂದ ಬಡವನ ಮನೆ ಊಟ ಚೆಂದ ಎಂದು ನಮ್ಮ ಹಿರಿಕರು ಹೇಳುತ್ತಾರೆ. ಶ್ರೀಮಂತರ ಮನೆಗೆ ಹೋದರೆ ಅವರು ಬರೇ ಬಾಯಿ ತುಂಬಾ ಮಾತಾಡಿ ಮೂಗಿಗೆ ತುಪ್ಪ ಸವರಿ ಕಳುಹಿಸುತ್ತಾರೆ. ಆದರೆ ಬಡವ ತನ್ನ ಮನೆಗೆ ಬಂದವರಿಗೆ ಹೊಟ್ಟೆ ತುಂಬಾ ಊಟ ಹಾಕಿ ಕಳುಹಿಸುತ್ತಾನೆ. ಹಸಿದವನಿಗೆ ಗೊತ್ತು ಹಸಿವಿನ ಬೆಲೆ.

ಡಾ.ರಾಜ್ ಅವರ ಸಿನಿಮಾಗಳಲ್ಲಿ ಗ್ರಾಫಿಕ್ಸ್ ಬಳಸಿರುವುದು ಅತ್ಯಂತ ಕಡಿಮೆ. ನೈಜತೆಯ ಪರಿಸರವನ್ನು ಬಳಸಿರುವುದು ಹೆಚ್ಚಾಗಿದೆ. ರಾಜ್ ಅವರ ಸಿನಿಮಾಗಳ ಕಥಾವಸ್ತು ರೈತಾಪಿ ವರ್ಗದ ಒಬ್ಬ ಸಾಮಾನ್ಯವ್ಯಕ್ತಿಗೂ ಸಂಬಂಧಪಟ್ಟಿದೆ. ಅದು ಹೇಗೆಂದರೆ ಪ್ರಪಂಚ ಎನ್ನುವುದು ಅವರು ಬದುಕುತ್ತಿರುವ ವ್ಯಾಪ್ತಿಯ ನಿರ್ಧಾರದಿಂದ ಕೂಡಿದೆ. ಅವನ ಕೃಷಿ, ಹೊಲ, ಕಲೆ, ಓದು ಮತ್ತು ಅವನ ಮನೆ ಅವರ ಸಂಬಂಧಗಳು ಈ ಚೌಕಟ್ಟಿನಲ್ಲಿ ತಾವಾಯಿತು ತನ್ನ ಕೆಲಸ ಆಯಿತು ಎಂಬ ನಂಬಿಕೆಯಲ್ಲಿ ಇರುವುದರಲ್ಲಿ ಸುಖ ಕಂಡವರು. ಜಾತ್ರೆ, ಮದುವೆ, ಗ್ರಾಮೀಣ ಕ್ರೀಡೆಗಳು ಇಷ್ಟೇ ಅವರ ಮನರಂಜನೆ. ಹೆಂಡತಿ, ಮಕ್ಕಳು, ಸರ್ವಸ್ವ ಎಂದು ತಿಳಿದು ಹಿರಿಯ ಹಾಕಿಕೊಟ್ಟ ಸಂಪ್ರದಾಯ. ಅಪ್ಪ ಹಾಕಿದ ಆಲದ ಮರ' ಎನ್ನುವ ನೆಲೆಯಲ್ಲಿ ತಮ್ಮ ಚಿಂತನೆಗಳು ನಂಬಿಕೆಗಳನ್ನು ಬಲವರ್ಧನೆ ಪಡಿಸುತ್ತ ಜೀವನ ಸಾಗಿಸುತ್ತಾರೆ. ಇಂತಹ ಕಥಾವಸ್ತುಗಳು ಡಾ.ರಾಜ್ ಅವರ ಸಿನಿಮಾಗಳಲ್ಲಿ ಹೆಚ್ಚಾಗಿ ಕಂಡುಬಂದಿದೆ. ಈ ಚಿತ್ರದಲ್ಲಿ ಬಳಸಿದ ಭಾಷೆ, ಗ್ರಾಮೀಣ ಭಾಷೆಯಾಗಿದೆ. ಹಳ್ಳಿಯ ಸೊಗಡಿನಿಂದ ಕೂಡಿದ್ದು, ಜನಪದರ ಬಳಸುವ ಗಾದೆ, ಒಗಟು, ಉಡುಪು, ವೈಯಾರಗಳಿಂದ ಕಂಗೊಳಿಸಿದೆ. ಅಲ್ಲಲ್ಲಿ ಜನಪದ ಗೀತೆಗಳನ್ನು ಸಿನಿಮಾದಲ್ಲಿ ಬಳಸಲಾಗಿದೆ. ಪಾತ್ರಗಳು ಕಥೆಗೆ ಸನ್ನಿವೇಶಕ್ಕೆ ತಕ್ಕ ಹಾಗೇ ಉಡುಗೆ ತೊಡುಗೆ ಮೂಲ ಕಥೆಗೆ ಎಲ್ಲಿಯೂ ಅಭಾಸವಾಗದಂತೆ ಚಿತ್ರಿಕರಿಸಲಾಗಿದೆ. ಹೊರಾಂಗಣ ದೃಶ್ಯಗಳಂಥ ಹೊಲಗದ್ದೆ, ತೋಟ, ಕೆರೆಭಾವಿಗಳನ್ನು ನೈಜ ಸ್ಥಳದಲ್ಲಿ ಚಿತ್ರಿಸಿದ್ದಾರೆ. ಒಳಾಂಗಣ ದೃಶ್ಯ ಬಂದಾಗ ಹಳ್ಳಿಯ ಪರಿಸರವನ್ನು ಚಿತ್ರೀಕರಿಸಲಾಗಿದೆ. ಕೇಶ ವಿನ್ಯಾಸಗಳು ಮತ್ತು ಹಬ್ಬ ಹರಿದಿನ ಜಾತ್ರೆ ಸಂತೆಗಳನ್ನು ಸಮರ್ಪಕವಾಗಿ ಬಳಸಿಕೊಳ್ಳಲಾಗಿದೆ. ಕಥೆ, ನಾಟಕ ಜನಪದ ನೃತ್ಯ ಜನಪದಗೀತೆ ಹೀಗೆ ಹಲವು ವಿನ್ಯಾಸದಂತ ಮತ್ತು ವಿಷಯವನ್ನೂ ಸಮಾಜಕ್ಕೆ ಚಿಕಿತ್ಸಕ ಮನೋಭಾವವಾಗಿ ಸಿನಿಮಾಗಳಲ್ಲಿ ನಿರೂಪಿಸಲಾಗಿದೆ. ಹೀಗೆ ಕೆ.ಎಸ್.ನಿಸಾರ್ ಅಹಮದ್‌ರವರು "ಕನ್ನಡ ನಾಡು ನುಡಿಗಳ ಹಿತಾಸಕ್ತಿಗಳಿಗೆ ಧಕ್ಕೆಯೊದಗಿದ ವಿಷಯ ಸಂದರ್ಭಗಳಲ್ಲಿ ರಾಜ್‌ಕುಮಾರ್ ಜನಪದವ ಸಮಷ್ಟಿ ಶಕ್ತಿಯನ್ನು ಉಚ್ಚರಿಸಿದ್ದಾರೆ. ಸ್ವ ರಕ್ಷಣೆಗೆ ಸಜ್ಜಾಗುವಂತೆ ಅದನ್ನು ಹುರಿದುಂಬಿಸಿದ್ದಾರೆ. ಜಾತಿ ಮತ ಕಸುಬು ಆಚಾರ ವಿಚಾರಗಳ ನಿಮಿತ್ತ ಜಿಗುಟುತನದ ಬಿಕ್ಕಟ್ಟಿನಿಂದ ಬೇರ್ಪಟ್ಟವರನ್ನು ಇಡಿತನದ ಒಕ್ಕಟ್ಟಿನಲ್ಲಿ ಕಟ್ಟಿ ಧ್ಯೇಯಗಳಾಗಿ ಸೆಣೆಸಲು ಕಾರಣರಾಗಿರುತ್ತಾರೆ" ಎಂದು ಹೇಳುತ್ತಾರೆ. ಇಲ್ಲಿ ರಾಜ್ ಅವರ ಅಭಿನಯ ಲಯ, ಭಾಷೆ, ಜನರಲ್ಲಿ ಗ್ರಹಿಕೆ ಮತ್ತು ಅಭಿಮಾನ ಇಲ್ಲಿ ಮೂಡಿಬಂದಿದೆ. ಇದರಿಂದ ಜನರು ತಮ್ಮನ್ನು ತಾವು ಜಾಗೃತಗೊಳಿಸುತ್ತಾ ಸಮಾಜವನ್ನು ಸ್ವಚ್ಛಗೊಳಿಸುವ ಮನೋಭಾವ ಹೊಂದಿದ್ದಾರೆ ಎಂದು ಹೇಳಬಹುದು. ಜೊತೆಗೆ ನಿಸಾರ್ ಅಹಮದ್

ಅವರ ಅಭಿಪ್ರಾಯದಲ್ಲಿ ಸಾಹಿತ್ಯ ವಲಯದಲ್ಲಿ ಕುವೆಂಪು ಅವರು ಅಗ್ರಗಣ್ಯರಲ್ಲಿ ಮುಖ್ಯರಾಗುತ್ತಾರೆ. ಇವರಂತೆ ಸಿನಿಮಾ ಕ್ಷೇತ್ರದಲ್ಲಿ ಡಾ.ರಾಜ್‌ಕುಮಾರ್ ಅವರು ಅಗ್ರಗಣ್ಯರೆಂದು ಹೇಳಬಹುದು. ಏಕೆಂದರೆ ಸಾಹಿತ್ಯ, ಸಮಾಜ ಮತ್ತು ಜನರನ್ನು ಸೃಜನಶೀಲವಾಗಿಸಿದರೆ ಸಿನಿಮಾಕ್ಷೇತ್ರ ನೇರವಾಗಿ ಜನರ ಅಂತರಂಗಕ್ಕೆ ಕಡಿಮೆ ಸಮಯದಲ್ಲಿ ಸೃಜನಶೀಲರನ್ನಾಗಿ ಜಾಗೃತಗೊಳಿಸುತ್ತದೆ. ಈ ನಿಟ್ಟಿನಲ್ಲಿ ಡಾ.ರಾಜ್‌ಕುಮಾರ್ ಅವರು ಮತ್ತು ಸಿನಿಮಾಗಳು ಮೌಲ್ಯಯುತ ಸ್ಥಾನವನ್ನು ಸಮಾಜಕ್ಕೆ ನೀಡಿವೆ.

### ೪.೪ ಡಾ.ರಾಜ್ ಅವರ ಚಲನಚಿತ್ರಗಳಲ್ಲಿ ಕೌಟುಂಬಿಕ ಸಂಬಂಧಗಳು

ಡಾ.ರಾಜ್ ಅವರ ಚಿತ್ರಗಳು ಶತದಿನಗಳು ಓಡಿದ್ದು ಈಗ ದಾಖಲೆಗಳಾಗಿವೆ. ಅಂತಹ ಚಿತ್ರಗಳಲ್ಲಿ ಕೌಟುಂಬಿಕ ಚಿತ್ರಗಳು ಮುಖ್ಯ ನೆಲೆಯಲ್ಲಿವೆ. ಡಾ.ರಾಜ್ ಚಿತ್ರಗಳಲ್ಲಿ ಸ್ತ್ರೀಯರಿಗೆ ಮಹತ್ವ ಸ್ಥಾನ ಕಲ್ಪಿಸಿವೆ. ವೇದಗಳಲ್ಲಿ ಉಲ್ಲೇಖಗೊಂಡಂತೆ ಎಲ್ಲ ಸ್ತ್ರೀಕುಲವನ್ನು ಆಧರಿಸಲಾಗುವುದೋ, ಅಲ್ಲಿ ದೇವತೆಗಳು ನೆಲೆಸುತ್ತಾರೆ. ಹಾಗಾಗಿ ಗಾಂಧೀಜಿಯವರ ಸದಾಭಿಪ್ರಾಯವೂ ಇದೇ ಆಗಿತ್ತು. ಡಾ.ರಾಜ್ ಅವರ ಸಿನಿಮಾಗಳಲ್ಲಿ ಸ್ತ್ರೀ ಕುಲವನ್ನು ಆಧರಿಸಿರುವ ರೀತಿ, ನಡೆಸಿಕೊಂಡಿರುವ ಬಗೆ, ಚಿತ್ರ ಶೀರ್ಷಿಕೆಗಳಲ್ಲಿ ಮಹತ್ವ ಪಡೆದಿವೆ. ಡಾ.ರಾಜ್ ಅವರ ಮೊದಲ ಪೌರಾಣಿಕ ಚಿತ್ರಗಳಲ್ಲಿ ಸತಿ ನಾಳಾಯನಿ, ಸ್ವರ್ಣಗೌರಿ, ಸತಿಶಕ್ತಿ ನಾಗಪೂಜಾ, ಪಾರ್ವತಿ ಕಲ್ಯಾಣ ಹೀಗೆ ಹಲವು ಚಿತ್ರಗಳಲ್ಲಿ ಪುರಾಣದ ಹಿನ್ನೆಲೆಯಾಗಿ ಸತಿ ಶ್ರೇಷ್ಠರುಗಳ ಪತಿಭಕ್ತಿ ಹಾಗೂ ದೈವನಿಷ್ಠೆಗಳ ಸುತ್ತ ಹೆಣೆದ ಪರಿಣಾಮಕಾರಿ ಕಥಾನಕಗಳಾಗಿವೆ. ಅಂದಿನ ಸಮಾಜದ ಮೇಲೆ ಹಾಗೂ ಸ್ತ್ರೀ ಕುಲದ ನಡತೆಯ ಮೇಲೆ ಪ್ರಭಾವವನ್ನು ಬೀರಿದ ಅತ್ಯುತ್ತಮವಾದ ಈ ಚಿತ್ರದಲ್ಲಿ ಆದರ್ಶ ಪತಿಯಾಗಿ ದೈವಭಕ್ತಿಯಲ್ಲಿ ತಮ್ಮನ್ನು ಸಮೀಕರಿಸಿಕೊಂಡಿರುವ ನಾಯಕ ರಾಜ್ ಮಹತ್ವ ಸ್ಥಾನ ವಹಿಸಿದ್ದಾರೆ.

ಶ್ರೀ ಕೃಷ್ಣ ರುಕ್ಮಿಣಿ ಸತ್ಯಭಾಮೆ ಚಿತ್ರವು ಮಹಾಸಾಧ್ವಿ ರುಕ್ಮಿಣಿಯ ಪತಿಭಕ್ತಿ ಹಾಗೂ ಸತ್ಯಭಾಮೆಯ ಗರ್ವಭಂಗ ಪ್ರಸಂಗಗಳನ್ನು ಶ್ರೀಕೃಷ್ಣ ಪಾರಿಜಾತ ಪ್ರಕರಣ, ಸಹಿತ ಕೃಷ್ಣಲೀಲೆ ವಿನೋದದೊಂದಿಗೆ ತೋರಿದ ಉಲ್ಲೇಖಾರ್ಹ ಚಿತ್ರವಾಗಿದೆ. ಜಾನಪದ ಲೋಕಕ್ಕೆ ಎಂದರೆ ಡಾ.ರಾಜ್ ಅವರು ಸ್ತ್ರೀಯ ಸಮುದಾಯ ಹೆಮ್ಮೆ ಪಡಬೇಕಾದ ಹಾಗೂ ಹೃದಯಂಗಮ ಚಿತ್ರಗಳು ರಾಜ್ ಅವರ ನಾಯಕತ್ವದಲ್ಲಿ ಕಾಣಬಹುದಾಗಿದೆ. ರಾಣಿಹೊನ್ನಮ್ಮ, ಆಶಾಸುಂದರಿ, ದೇವಸುಂದರಿ, ಬಾಲ ನಾಗಮ್ಮ, ಮಧುಮಾಲತಿ, ಭಾಗ್ಯದೊಡತಿ ಇವು ಜನನಿತ ಕಥಾವಸ್ತುಗಳು ಇವು ಜನರಲ್ಲಿ ಪರಿಣಾಮಕಾರಿಯಾಗಿ ಜನಮಾನಸದಲ್ಲಿ ಉಳಿದುಕೊಂಡಿವೆ. ಹೀಗೆ ಹಣ್ಣೆಲೆ ಚಿಗುರಿದಾಗ, ಚಿತ್ರ ವಿಧವಾ ವಿವಾಹವನ್ನು ಪ್ರೇರೇಪಿಸಿದೆ. ಜೊತೆಗೆ ಬಂಗಾರದ ಹೂ ತ್ಯಾಗದ ಪರಾಕಾಷ್ಠೆ ತೋರಿದೆ. ಇದರಿಂದ ಸಮಾಜದ ಕಥಾವಸ್ತು ಒಂದು ಕಡೆಯಾದರೆ ಸಾಮಾಜಿಕ ಮನಸ್ಥಿತಿ ತೊಳೆಯುವ ಪ್ರಶ್ನೆಯೂ ನಡೆಯುತ್ತದೆ. ಸರ್ವಮಂಗಳ ಸ್ವಾತಂತ್ರ್ಯ ಪೂರ್ವದ ಹಳ್ಳಿಯ ಹೆಣ್ಣುಮಕ್ಕಳ ಕಥಾನಕವಾಗಿದೆ. ಉಯ್ಯಾಲೆ ಮಹಿಳೆಯರ ಮಾನಸಿಕ ಸಂಘರ್ಷವನ್ನು ತೋರಿದೆ. ಈ ಎಲ್ಲವನ್ನು ಗಮನಿಸಿದಾಗ ಒಂದು ಕೌಟುಂಬಿಕ ನೆಲೆಯಲ್ಲಿ ಗ್ರಹಿಸಿದರೆ, ಒಂದು ಕುಟುಂಬ ಸಮಷ್ಟಿಯಾಗಿದೆ. ಎಂದು ತಿಳಿಯಬಹುದು. ಆದರೆ ಚಿತ್ರದ ಮೂಲಕ ಸಾಮಾಜಿಕದ ಮಹಿಳಾ

ಸಂವೇದನಾಶೀಲತೆಯ ಬಗ್ಗೆ ಚರ್ಚಿಸಿರುವುದು ಸೂಕ್ತವಾಗಿದೆ. ಡಾ.ರಾಜ್ ಅವರ ಚಿತ್ರದಲ್ಲಿ ಸಂಭಾಷಣೆಯನ್ನು ನೋಡಿದಾಗ ಹೆಣ್ಣಿಗೆ ಗೌರವ ನೀಡುವ ಪರಿಯನ್ನು ಮಹತ್ವಪೂರ್ಣ ಸಂಭಾಷಣೆಗಳಲ್ಲಿ ತಂದಿದ್ದಾರೆ. ಚಲಿಸುವ ಮೋಡಗಳು ಚಿತ್ರದಲ್ಲಿ ನ್ಯಾಯಾಲಯ ಪ್ರಸಂಗದ ರಾಜ್ ಅವರು ವಕೀಲರಾಗಿ ಹೆಣ್ಣಿನ ಪರವಾದ ನಿಲುವು ವಾದಿಸುತ್ತಾ. 'ವಿದ್ಯಾದೇವತೆ ಹೆಣ್ಣು, ಶಕ್ತಿ ದೇವತೆ ಹೆಣ್ಣು, ಸಂಪತ್ತಿನ ದೇವತೆ ಹೆಣ್ಣು, ಹೀಗೆ ಪೂಜಿಸಲ್ಪಡುವ ಹೆಣ್ಣಿಗೆ ಇಂದಿನ ಸಮಾಜದಲ್ಲಿ ಸೂಕ್ತವಾದ ಸ್ಥನಮಾನ ಗೌರವ ಸಿಗುತ್ತಿಲ್ಲ ಎಂಬ ಕೊರಗನ್ನೂ ಬಿಚ್ಚಿಟ್ಟಿದ್ದಾರೆ. ಈ ನಿಟ್ಟಿನಲ್ಲಿ ಪ್ರಸ್ತುತ ಹೆಣ್ಣಿನ ಮೇಲೆ ನಡೆಯುವ ಕ್ರೌರ್ಯ, ದಬ್ಬಾಳಿಕೆ, ಕಿರುಕುಳ, ದೈಹಿಕ ಹಲ್ಲೆ, ಇನ್ನೂ ನಿಂತಿಲ್ಲ ಹೀಗಾದರೆ ಮುಂದಿನ ಸ್ಥಿತಿ ಏನು ಎಂಬುದನ್ನು ಈ ಚಿತ್ರದ ಮೂಲಕ ಅರ್ಥೈಸಲಾಗಿದೆ. ಹೀಗೆ ರಾಜ್ ಅವರ ಸಿನಿಮಾಗಳು ಜನರಿಗೆ ಬೇಗ ತಲುಪಲು ಕಾರಣ ಕೌಟುಂಬಿಕ ನೆಲೆಯಲ್ಲಿ ಜನರ ಜೀವನ ಬದುಕು ಮನೋಜ್ಞವಾಗಿ ತಿಳಿಸಿದ್ದಾರೆ. ಬಂಗಾರದ ಮನುಷ್ಯ ಚಿತ್ರದಲ್ಲಿ ಗಂಡನನ್ನು ಕಳೆದುಕೊಂಡು ಸಣ್ಣ ಮಕ್ಕಳೊಂದಿಗೆ ನಿರ್ಗತಿಕಳಾದ ಅಕ್ಕನ ಬಾಳಿಗೆ ಊರುಗೋಲಾಗಿ ಜೀವನವನ್ನೇ ಸ್ವಾರ್ಥದಿಂದ ದುಡಿದು ಆದರ್ಶ ಬದುಕು ಪರಿಕಲ್ಪಿಸುವ ಪ್ರಯತ್ನವಿದೆ. 'ಹೊಸಬೆಳಕು' ಚಿತ್ರದಲ್ಲಿ ಅಸಹಾಯಕ ಹೆಣ್ಣಿಗೆ ಬಾಳುವ ನೀಡುವ ಕರುಣಾಮಯಿ ಆಗಿದ್ದಾರೆ. 'ಹಾಲು ಜೇನು' ಚಿತ್ರದಲ್ಲಿ ರೋಗಗ್ರಸ್ತ ಮಡದಿಗಾಗಿ ಜೀವನವನ್ನು ಮುಡಿಪಾಗಿ ಇಟ್ಟಿದ್ದಾರೆ. ಇಂಥ ಸಿನಿಮಾಗಳು ವಾಸ್ತವದಲ್ಲಿ ಅಪರೂಪ ದುಡ್ಡು, ಅಧಿಕಾರ ಮೋಸ, ವಂಚನೆ, ಎಂಬ ಕಥಾವಸ್ತುವನ್ನು ಆಯ್ಕೆಮಾಡಿಕೊಂಡು ಮಾಡಿದ ಸಂವೇದನಾ ರಹಿತ ಸಿನಿಮಾಗಳು ಇಂದು ಹೆಚ್ಚಾಗಿವೆ ಎಂದು ಹೇಳಬಹುದು.

ಕುಟುಂಬದ ಮೌಲ್ಯವನ್ನು ಎತ್ತಿಹಿಡಿದ ಹಲವು ಚಿತ್ರಗಳು ವಿಶ್ಲೇಷಣೆ ಮಾಡಿದ ಬಳಿಕ ಕೆಲವು ಚಿತ್ರಗಳು ಜನಪ್ರಿಯ ಮನೋರಂಜನೆಯ ಚಿತ್ರಗಳಾಗದೆ ಸಾಹಿತ್ಯಕ್ಕೂ ಚಿತ್ರರಂಗಕ್ಕೂ ನಂಟನ್ನು ಬೆಸೆದ, ಕನ್ನಡ ಮಣ್ಣಿನ ಸುವಾಸನೆಯನ್ನುಳ್ಳ ಕುಟುಂಬ ಪ್ರಧಾನ ಚಿತ್ರಗಳಾಗಿವೆ. ಕರುಣೆಯೇ ಕುಟುಂಬದ ಕಣ್ಣು, ಕುಲವಧು, ಚಿತ್ರಗಳು ೬೦ರ ದಶಕದ ಚಿತ್ರಗಳಾಗಿದ್ದರೂ ಅಂದಿನ ಸಾಮಾಜಿಕ ಮೌಲ್ಯಗಳೇ ಇಂದೂ ಉಳಿದುಕೊಂಡು ಬಂದಿದೆ. ಎಂದು ನಿಸ್ಸಂಶಯವಾಗಿ ಹೇಳಬಹುದು. ಆ ಕುಟುಂಬದ ಹೆಣ್ಣುಮಕ್ಕಳು ಸಂಸಾರಸ್ಥೆಯರು, ಒಳ್ಳೆಯ ಗರತಿಯರು, ಗಂಡ, ಮನೆ, ಮಕ್ಕಳು, ಎಂದು ಇಡೀ ಜೀವನವನ್ನು ಧಾರೆ ಎರೆದವರು. ರಾಜಣ್ಣನವರನ್ನು ನಾಯಕ ಎಂದು ಆಯ್ಕೆ ಮಾಡಿಕೊಳ್ಳುವ ಮುನ್ನ ಚಿತ್ರಕಥೆಯನ್ನು ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಇದೇ ನಿರ್ದೇಶಕರು ರಾಜಣ್ಣನವರ ಮೇಲೆ ಇಟ್ಟಿದ್ದ ನಂಬಿಕೆ, ಈ ಪಾತ್ರಕ್ಕೆ ರಾಜಣ್ಣನವರೇ ಸೂಕ್ತ ಕಲಾವಿದರು, ಆ ಪಾತ್ರಕ್ಕೆ ಜೀವ ತುಂಬಬಲ್ಲರು ಎಂದು ಅಂತಿಮ ನಿರ್ಧಾರ ತೆಗೆದುಕೊಳ್ಳುತ್ತಿದ್ದರು. ಈ ಚಿತ್ರಗಳು ಜನರನ್ನು ಹೇಗೆ ಥಿಯೇಟರ್ ಕಡೆಗೆ ಕರೆದುಕೊಂಡು ಬರುತ್ತಿದ್ದವು ಅವು ಎಷ್ಟು ಹಣ ಮಾಡುತ್ತಿದ್ದವು ಎನ್ನುವ ಲೆಕ್ಕಾಚಾರ ಆಮೇಲೆ, ಆದರೆ ಮೊದಲು ಸಿನೆಮಾ ಸಮಾಜದ ಮೇಲೆ ಹೇಗೆ ಪ್ರಭಾವ ಬೀರುತ್ತದೆ ಎಂದು ನಿರ್ದೇಶಕರು ಯೋಚನೆ ಮಾಡಿರುತ್ತಿದ್ದರು. ಒಂದೇ ಒಂದು ಅಶ್ಲೀಲ ದೃಶ್ಯವನ್ನು ತುರುಕುತ್ತಿರಲಿಲ್ಲ. ಅಶ್ಲೀಲ, ಅನಾವಶ್ಯಕ , ಅಸಂಬದ್ಧ ಸಂಭಾಷಣೆ ಇಣುಕುತ್ತಿರಲಿಲ್ಲ. ದೇವರಿಗೆ, ಸ್ತ್ರೀಯರಿಗೆ , ಭಾಷೆಗೆ, ದೇಶಕ್ಕೆ, ಸಂಸ್ಕೃತಿಗೆ, ಅನ್ಯ ಧರ್ಮಗಳಿಗೆ, ಅಪಚಾರ ಎಸಗುವ

ವಿಚಾರ ಇರುತ್ತಿರಲಿಲ್ಲ. ಪ್ರತಿ ದೃಶ್ಯದಲ್ಲೂ ಎಚ್ಚರ ವಹಿಸಲಾಗುತ್ತಿತ್ತು. ಮಗ ತಾಯಿಗೆ, ತಾಯಿ ಮಗನಿಗೆ, ಅಪ್ಪ ಮಕ್ಕಳಿಗೆ ಮಾಡುವ ತ್ಯಾಗ ದೊಡ್ಡದು. ಮನೆಗಾಗಿ ಸರ್ವಸ್ವವನ್ನೂ ಮಾಡುವ ತ್ಯಾಗಮೂರ್ತಿಗಳು ರಾಜಣ್ಣನವರ ಚಿತ್ರದಲ್ಲಿ ಹೇರಳವಾಗಿ ಸಿಗುತ್ತಾರೆ. ಸಾಮಾಜಿಕ ಮೌಲ್ಯ, ವಿಭಿನ್ನ ವ್ಯಕ್ತಿತ್ವ, ಸಂಭಾಳಿಸುವ ಗುಣ ಎಲ್ಲವೂ ಹುಡುಕದೆಯೇ ಕಾಣಸಿಗುತ್ತವೆ.

ಅನ್ಯರ ಭಾವನೆಗಳಿಗೆ ಧಕ್ಕೆ ಬಾರದಂತೆ ಸೂಕ್ಷ್ಮಾತಿ ಸೂಕ್ಷ್ಮ ಸಂಗತಿಗಳನ್ನು ಸದಾ ಗಮನಿಸಲಾಗುತ್ತಿತ್ತು. ಅನೈತಿಕ ಸಂಬಂಧ, ನಾಯಕಿಯರ ಮೈಮಾಟದ ಪ್ರದರ್ಶನ, ಅತಿಯಾದ ಲೈಂಗಿಕ ಕ್ರಿಯೆಯ ಪ್ರಚೋದನೆ, ಇವೆಲ್ಲವನ್ನು ರಾಜಣ್ಣನವರ ಚಿತ್ರದಲ್ಲಿ ನೋಡಲು ಸಾಧ್ಯವೇ ಇಲ್ಲ. ಎರಡುಕನಸು, ಸನಾದಿ ಅಪ್ಪಣ್ಣ, ಹೊಸಬೆಳಕು, ಶೃತಿ ಸೇರಿದಾಗ, ಸಮಯದ ಗೊಂಬೆ, ಕಾಮನ ಬಿಲ್ಲು, ಚಂದವಳ್ಳಿಯ ತೋಟ, ಮುಂತಾದ ಚಿತ್ರಗಳು ಕನ್ನಡ ಚಿತ್ರರಂಗದಲ್ಲಿಯೇ ದಾಖಲೆ ಬರೆದ ಚಿತ್ರಗಳು. ಅವು ಈಗಲೂ ಮಾದರಿ ಚಿತ್ರಗಳಾಗಿವೆ. ಎರಡು ಕನಸಿನ ನಾಯಕ ಮದುವೆಯ ನಂತರ ತನ್ನ ಹೆಂಡತಿಯೇ ತನ್ನ ಸರ್ವಸ್ವ ಎನ್ನುವ ಸತ್ಯವನ್ನು ಕೊನೆಯಲ್ಲಿ ಅರಿತುಕೊಂಡು ತನ್ನ ಒಡೆದುಹೋಗಿದ್ದ ಸಂಸಾರವನ್ನು ಮತ್ತೆ ಕಟ್ಟಿಕೊಳ್ಳುತ್ತಾನೆ. ಪ್ರೇಯಸಿ ಯಾವತ್ತು ನೆನ್ನೆಯವಳು, ಅವಳನ್ನು ನೆನ್ನೆಯನ್ನು ಮರೆತು ಬಿಡುವುದರಲ್ಲಿಯೇ ಜೀವನ ಇದೆ. ಮೂರು ಗಂಟು ಬಿದ್ದ ಮೇಲೆ ಸಪ್ತಪದಿ ತುಳಿದು ಕಷ್ಟ ಸುಖದಲ್ಲಿ ಜೊತೆ ಜೊತೆಯಾಗಿ ಜೀವನದ ಕೊನೆಯ ಉಸಿರು. ಇರುವವರೆವಿಗೂ ಇರುತ್ತೇವೆ ಎಂದು ಮಾಡಿದ ಆ ಶಾಸ್ತ್ರೋಕ್ತ ಮದುವೆ, ಹಿರಿಯರ ಆಶೀರ್ವಾದ ಎಲ್ಲವೂ ನಮ್ಮನ್ನು ಎಂದಿಗೂ ತಪ್ಪು ದಾರಿಗೆ ಕರೆದೊಯ್ಯುವುದಿಲ್ಲ. ಸದಾಕಾಲ ಆತ್ಮ ಸಾಕ್ಷಿ ನಮ್ಮನ್ನು ಎಚ್ಚರಿಸುತ್ತದೆ. ಈ ಎಚ್ಚರ ಈ ಪ್ರಜ್ಞೆಯೇ ನಮ್ಮನ್ನು ಸದಾಕಾಲ ಕಾಪಾಡುತ್ತದೆ. ಇದು ಆ ಕಾಲಕ್ಕೆ ಸರಿ. ಈ ಕಾಲಕ್ಕೂ ಸರಿ. ಕೇವಲ ಗಂಡಿಗೆ ಮಾತ್ರವಲ್ಲ ಹೆಣ್ಣಿಗೂ ಈ ಮಾತು ಸತ್ಯ. ತಾಯಿಯಂತೆ ತಂದೆಗೂ ಮನೆಯ ಕುಟುಂಬದ ಜವಾಬ್ದಾರಿ ಇದೆ. ಮನೆಯ ಗಂಡಸು, ಮನೆಯನ್ನು ನಡೆಸುವ, ಯಜಮಾನನ ಕೆಲಸ ನಿರ್ವಹಿಸಬೇಕಾಗುತ್ತದೆ. ಅನುರಾಗ ಅರಳಿತು ಚಿತ್ರದಲ್ಲಿ ಹೆಂಡತಿಯ ತಪ್ಪನ್ನು ತಪ್ಪುವ ಕೊನೆಗೆ ತಪ್ಪನ್ನು ಕ್ಷಮಿಸಿ ಪುನಃ ಅವಳನ್ನು ಹೆಂಡತಿಯಾಗಿ ಸ್ವೀಕರಿಸುವ ಒಂದು ಒಳ್ಳೆಯ ಪಾತ್ರ ರಾಜಣ್ಣನವರು ನಿರ್ವಹಿಸಿದ್ದಾರೆ. ಹೆಂಡತಿಯ ಆಸೆ ನೆರವೇರಿಸಲು ತನ್ನ ಜೀವನವನ್ನು ಮುಡಿಪಾಗಿಟ್ಟು ಮಗ ಮಾಡಿದ ಅವಮಾನವನ್ನು ನುಂಗುವ ಒಳ್ಳೆಯ ತಂದೆ ಪಾತ್ರದಲ್ಲಿ ಸನಾದಿ ಅಪ್ಪಣ್ಣನಾಗಿದ್ದಾರೆ. ತನ್ನ ಸ್ನೇಹಿತನಿಗಾಗಿ ತನ್ನ ಪ್ರೇಮವನ್ನು ಬಲಿಕೊಡುವ ಪಾತ್ರದಲ್ಲಿ ಕಾಮನ ಬಿಲ್ಲನ್ನು ಬಲಿಕೊಡುವ ಪಾತ್ರದಲ್ಲಿ ಕಾಮನ ಬಿಲ್ಲನ್ನು ಗೆಲ್ಲಿಸಿದ್ದಾರೆ. ಕಳೆದು ಹೋದ ಕುಟುಂಬ ಮತ್ತೆ ಸಿಕ್ಕರೂ ವಾಸ್ತವದ ಸತ್ಯವನ್ನು ಅರಿತು ಭಾವೋದ್ವೇಗಕ್ಕೆ ಒಳಗಾಗದೆ ಸಮಚಿತ್ತದಿಂದ ಸರಿಯಾದ ನಿರ್ಧಾರ ತೆಗೆದುಕೊಳ್ಳುವ ಪಾತ್ರದಲ್ಲಿ ರಾಜಣ್ಣ ಸಮಯದ ಗೊಂಬೆ ಎನಿಸುತ್ತದೆ.

ಈ ಚಿತ್ರಗಳನ್ನು ಹೊರತುಪಡಿಸಿ ಹಾಲು, ಜೇನು, ಬಂಗಾರದ ಪಂಜರ, ದೂರದ ಬೆಟ್ಟ, ನಾಂದಿ ಮುಂತಾದ ಕುಟುಂಬ ಪ್ರಧಾನ ಚಿತ್ರಗಳು ಬಾಕ್ಸ್ ಆಫೀಸ್‌ನಲ್ಲಿ ಕೊಳ್ಳೆ ಹೊಡೆದು ಹೆಂಗಳೆಯರ ಮನ ಸೂರೆಗೊಂಡಿದೆ. ಅಂದರೆ ಕುಟುಂಬವನ್ನು ಚಿತ್ರರಂಗದೊಂದಿಗೆ ಬೆಳೆದಿದೆ. ಆದರೆ ಅವೆಲ್ಲವೂ ನನ್ನ

ಸಂಶೋಧನೆಯ ವ್ಯಾಪ್ತಿಗೆ ಬರುತ್ತಿಲ್ಲವಾದ್ದರಿಂದ ಆ ಚಿತ್ರದ ಬಗ್ಗೆ ನಾನು ಚರ್ಚೆ ಮಾಡಿಲ್ಲ. ಸಣ್ಣ ಕಥೆ ನಾಟಕ, ಕಾದಂಬರಿ ಆಧಾರಿತ ಚಿತ್ರಗಳು ನನ್ನ ಸಂಶೋಧನೆಯ ವ್ಯಾಪ್ತಿಗೆ ಬರುವ ಕಾರಣ ಅವುಗಳು ಹೆಚ್ಚು ಚರ್ಚೆಗೆ ಒಳಪಟ್ಟಿವೆ.

ಇಡೀ ಕನ್ನಡ ಚಿತ್ರರಂಗದ ಬೆಳವಣಿಗೆಯ ದೃಷ್ಟಿಯಿಂದಲೂ ರಾಜಣ್ಣನವರ ಚಿತ್ರಗಳು ದಾಖಲೆಯನ್ನೇ ನಿರ್ಮಿಸಿವೆ. ಒಂದೇ ವರ್ಷದಲ್ಲಿ ರಾಜಣ್ಣನವರ ೧೫ ಸಿನೆಮಾಗಳು ಬಿಡುಗಡೆಯಾಗಿ ನಾಯಕ ನಟರಾಗಿ ಪ್ರಥಮ ಬಾರಿ ದ್ವಿಶತಕ ಬಾರಿಸಿದ ಕೀರ್ತಿ ಸಹಾ ರಾಜಣ್ಣನವರಿಗೆ ಸಲ್ಲುತ್ತದೆ. ೨೦೫ ಸಿನೆಮಾಗಳಲ್ಲಿ ನಾಯಕರಾಗಿ ಅಭಿನಯಿಸಿದ್ದಾರೆ ಎಂದರೆ ಜನರು ಅವರನ್ನು ಒಪ್ಪಿಕೊಂಡಿದ್ದಾರೆ, ಅಪ್ಪಿಕೊಂಡಿದ್ದಾರೆ ಎಂದು ಅರ್ಥ ಅಲ್ಲವೇ? ಅವರು ಒಳ್ಳೆಯ ಸಿನೆಮಾ ಕೊಡದೇ ಇದ್ದರೆ ಜನ ಥಿಯೇಟರ್ ಕಡೆ ಸುಳಿಯುತ್ತಿಲ್ಲ. ಹಾಗೆಯೇ ಜನಕ್ಕೆ ಬೇಕಾದ ಸದಭಿರುಚಿ ಚಿತ್ರವನ್ನೇ ರಾಜಣ್ಣನವರು ನೀಡಿ ಮಧ್ಯಮ ವರ್ಗದ ಜನನಾಯಕ ಎನಿಸಿಕೊಂಡಿದ್ದಾರೆ. ಸಮಾಜದ ಸ್ವಾಸ್ಥ್ಯ ಕಾಪಾಡುವಲ್ಲಿ ಜನಹಿತ ಕಾಪಾಡುವತ್ತ ಇವರ ಹಲವು ಸಿನೆಮಾಗಳು ದೇಶಸೇವೆಯೇ ಈಶ ಸೇವೆ ಎಂಬಂತೆ ಕೆಲಸ ಮಾಡಿವೆ. ೭೦ರ ಹರೆಯದಲ್ಲಿ ಪೋಲೀಸ್ ಅಧಿಕಾರಿಯಾಗಿ ವೇಶ್ಯಾವಾಟಿಕೆ ವಿರುದ್ಧ, ಡ್ರಗ್ಸ್ ವಿರುದ್ಧ ಹೋರಾಡುವ ಇವರ ಚಿತ್ರಗಳು ಸಮಾಜಸೇವಕ ಕೆಲಸ ಮಾಡಿವೆ. ತಾಯಿಯೇ ದೇವರು ಎನ್ನುವ ಮಾತನ್ನು ಬಹುತೇಕ ಚಿತ್ರಗಳಲ್ಲಿ ಮನದಟ್ಟಾಗುವಂತೆ ಚಿತ್ರಿಸಲಾಗಿದೆ.

ವಿಷ್ಣುವರ್ಧನ್, ಅನಂತನಾಗ್, ಅವರ ಹಲವು ಚಿತ್ರಗಳು ಇಂಥದೇ ಕೆಲಸವನ್ನು ಮಾಡಿವೆ ಎಂದು ಈ ಸಮಯದಲ್ಲೆ ಹೇಳಲೇಬೇಕಾಗುತ್ತದೆ. ತನಗಿಂತ ಚಿಕ್ಕ ವಯಸ್ಸಿನ ನಾಯಕರನ್ನು ಪ್ರೋತ್ಸಾಹಿಸುತ್ತಾ ಅವರ ಸಿನೆಮಾಗಳಿಗೆ ಬೆನ್ನು ತಟ್ಟುತ್ತಾ ತನ್ನ ಪಾಡಿಗೆ ತಾನು ಸಿನೆಮಾ ಮಾಡುವ ಕೈಂಕರ್ಯದಲ್ಲಿ ರಾಜಣ್ಣನವರು ತಲ್ಲೀನರಾಗಿದ್ದರು. ಬೇರೆ ಯಾವುದೂ ಅವರಿಗೆ ಬೇಕಾಗಿರಲಿಲ್ಲ. ಬಯಲುದಾರಿ ಕಥೆಯನ್ನು ಸಿನೆಮಾ ಮಾಡಲು ಸ್ವತಃ ಪಾರ್ವತಮ್ಮ ರಾಜ್‌ಕುಮಾರ್ ಪ್ರೋತ್ಸಾಹಿಸಿದರು ಎನ್ನುವುದು ಸಂತಸದ ಸಂಗತಿ. ಅವರು ಅತಿ ಹೆಚ್ಚು ಕಾದಂಬರಿಗಳನ್ನು ಓದಿದರು, ಚರ್ಚಿಸಿದರು. ಈ ನಿಟ್ಟಿನಲ್ಲಿ ಸಾಹಿತ್ಯವನ್ನು ಸಿನೆಮಾಕ್ಕೆ ಅಳವಡಿಸಿದವರು ಈ ಕೀರ್ತಿ ರಾಜಣ್ಣನವರಿಂದ ಹೆಚ್ಚು ಪಾರ್ವತಮ್ಮನವರಿಗೆ ಸಲ್ಲುತದೆ. ಚಿತ್ರಕಥೆಯ ಆಯ್ಕೆಯಲ್ಲಿ ಅವರು ತೋರಿಸಿದ ಬುದ್ಧಿವಂತಿಕೆ, ಕ್ರಿಯಾಶೀಲತೆ ದೊಡ್ಡದು. ಕುಟುಂಬ ನಿರ್ವಹಣೆ, ನಿರ್ಮಾಣ, ಹಂಚಿಕೆ, ಕಥಾ ಆಯ್ಕೆ, ಕಲಾವಿದರ ಆಯ್ಕೆ ಎಲ್ಲಾ ವಿಷಯಗಳಲ್ಲಿ ರಾಜಣ್ಣನವರ ಕುಟುಂಬ ಅಂದರೆ ಪಾರ್ವತಮ್ಮನವರು ತೋರಿಸಿದ ಎದೆಗಾರಿಕೆ ಚಿತ್ರವನ್ನು ಗೆಲ್ಲಿಸಿದೆ. ಆದ ಕಾರಣ ರಾಜಣ್ಣನವರು ಇಂಥಹ ಉತ್ತುಂಗಕ್ಕೆ ಏರಲು ಸಾಧ್ಯವಾಯಿತು. ಅದಕ್ಕೆ ಹೇಳುವುದು ಯಶಸ್ವಿ ಪುರುಷನ ಹಿಂದೆ ಹೆಣ್ಣು ಇರುತ್ತಾಳೆ ಎಂದು. ಅವರ ಚಿತ್ರಗಳು ಕೌಟುಂಬಿಕ ಮೌಲ್ಯ ಎತ್ತಿ ಹಿಡಿಯಲು ರಾಜಣ್ಣನವರ ಕುಟುಂಬ ಸುಂದರವಾದದ್ದೇ ಇನ್ನೊಂದು ಕಾರಣ. ಎಷ್ಟೇ ಕಷ್ಟ ಬಂದರೂ ಕುಹಕ, ವ್ಯಂಗ್ಯ, ಮೋಸ, ಅನ್ಯಾಯ ಎದುರಿಸಿದರೂ ಛಲ ಬಿಡದ ತ್ರಿವಿಕ್ರಮನಂತೆ ಪಾರ್ವತಮ್ಮನವರು ರಾಜಣ್ಣನವರ ಕೊನೆ ಉಸಿರಿನ ತನಕ ಅವರೊಂದಿಗೆ ಇದ್ದರು. ವೀರಪ್ಪನ್ ಅಪಹರಣ ಸಂದರ್ಭದಲ್ಲಿ ಪಾರ್ವತಮ್ಮ

ಕಂಗಾಲಾಗಿದ್ದರು. ಅವರಿಲ್ಲದೆ ಬದುಕಿರಲಾರೆ ಅವರನ್ನು ಬಿಟ್ಟುಬಿಡು ಎಂದು ವೀರಪ್ಪನ್‌ನನ್ನು ಅಂಗಲಾಚಿ ಕಣ್ಣೀರಿಟ್ಟು ಬೇಡಿಕೊಂಡರು. ತನ್ನ ಗಂಡನನ್ನು ಉಳಿಸಿಕೊಂಡರು. ಸಾವಿನ ಕೊನೆಯ ದಿನದವರೆವಿಗೂ ಗಂಡನ ಆರೋಗ್ಯ, ಊಟ, ಉಪಚಾರ, ವೈದ್ಯಕೀಯ ಚಿಕಿತ್ಸೆ ಎಲ್ಲವನ್ನು ನೋಡಿಕೊಂಡರು. ಏಪ್ರಿಲ್ ೧೨ ೨೦೦೬ರಂದು ರಾಜಣ್ಣನವರು ಅಗಲಿದರು. ಕೊನೆ ಉಸಿರೆಳೆದ ರಾಜಣ್ಣನವರ ಪಾರ್ಥಿವ ಶರೀರಕ್ಕೆ ವಿಭೂತಿ ಹಚ್ಚಿ, ಕುಂಕುಮ ಹಚ್ಚಿ, ಹೂ ಹಾರ ಹಾಕಿ, ಊದುಬತ್ತಿ ಬೆಳಗಿ, ಅಪಾರ ನೋವಿನಿಂದ ಕಳುಹಿಸಿಕೊಟ್ಟರು. ಕೊನೆ ಘಳಿಗೆಯಲ್ಲಿ ತಾನು ಅವರ ಜೊತೆ ಇರಲಿಲ್ಲವಲ್ಲ ಎಂದು ಕೊರಗಿದರು. ಇಡೀ ಕುಟುಂಬದ ಸಲಹೆ, ಆರೈಕೆ, ಪ್ರೀತಿ, ಗಂಡನನ್ನು ಬಿಟ್ಟುಕೊಡದ ಪ್ರೇಮವಿದೆ.

ಇಂಥದೇ ಪ್ರೀತಿ ಪ್ರೇಮವನ್ನು ಅವರ ಎಲ್ಲಾ ಚಿತ್ರಗಳು ಸಾರುತ್ತವೆ. ಚಿತ್ರವನ್ನು ನೋಡಿ ಕಲಿಯುವುದು ಬಹಳಷ್ಟಿವೆ. ಚಿತ್ರಗಳು ಒಳ್ಳೆಯ ಸಮಾಜವನ್ನು ನಿರ್ಮಾಣ ಮಾಡಬಲ್ಲವು ಎಂಬುದರಲ್ಲಿ ನಂಬಿಕೆ ಇದೆ. ಇದೇ ನಂಬಿಕೆ ನಿಜವಾಗಿದೆ ಸಹಾ. ಡಾ.ರಾಜ್ ಅವರು ಸಮಾಜದ ಕುಟುಂಬದ ನಾಯಕರಾಗಿದ್ದಾರೆ. ಅಕ್ಕ, ತಂಗಿ, ತಾಯಿ, ಪತ್ನಿ, ನೆರೆಹೊರೆಯ ಹೆಣ್ಣು ಮಕ್ಕಳ ಸಂಬಂಧಗಳನ್ನು ಭಾವನಜೀವಿಯಾಗಿ ಚಿತ್ರಿಸಿವೆ.

"ತಾಯಿ ಒಡಲಿನ ಕುಡಿಯಾಗಿ ಜೀವನ,
ಮೂಡಿಬಂದು ಚೇತನ ಕಾಣಲೆಂದು
ಅನುದಿನ ಅವಳೆದೆ ಅನುರಾಗ ಕುಡಿಯುತ ಬೆಳೆದಾಗ
ನಗು ನಗುತಾ ನಲಿ ನಲಿ ಏನೇ ಆಗಲಿ" ಎಂದು ತಾಯಿಯ ಮಹತ್ವವನ್ನು

ರಾಜ್ ಅವರು ಬಂಗಾರದ ಮನುಷ್ಯ ಚಿತ್ರದಲ್ಲಿ ಹಾಡಿದ್ದಾರೆ.

ಸರ್ವಮಂಗಳಾ ಚಿತ್ರದಲ್ಲಿ ಒಂದು ಸಮಸ್ಯೆಯಿದೆ. ನಮ್ಮ ದೇಶದಲ್ಲಿ ಇದೊಂದು ದೊಡ್ಡ ಸಮಸ್ಯೆ ಆಗಿದೆ. ಹಳ್ಳಿ ಕಡೆ ಅಂತೂ ಸ್ವಲ್ಪ ಹೆಚ್ಚಾಗಿಯೇ ಇದೆ. ತಮ್ಮನಿಗೆ ಮಗಳನ್ನು ಕೊಡುವ ಆತುರದಲ್ಲಿ ೧೦-೧೫ ವರ್ಷ ಚಿಕ್ಕ ಮಗಳು ತಮ್ಮನ ಹೆಂಡತಿಯಾಗುತ್ತಾಳೆ. ಅವಳಿಗೋ ಏನು ತಿಳಿಯದು. ಹೆಣ್ಣು ಮಕ್ಕಳಿಗೆ ಬಹಳ ಬೇಗ ಮದುವೆ ಮಾಡಿ ಬಿಡುತ್ತಾರೆ. ಒಂದು ಕಾಲದಲ್ಲಿ ತೊಟ್ಟಿಲು ತೊಟ್ಟಿಲಿಗೆ ಮದುವೆ ಮಾಡಿ ಬಿಡುತ್ತಿದ್ದರಂತೆ. ಮೊದಲಿನಿಂದಲೂ ಒಟ್ಟಾಗಿ ಬೆಳೆದಾಗ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡಾಗ ಇತ್ತೀಚಿನ ದಿನಗಳಂತೆ ವಿವಾಹ ವಿಚ್ಛೇದನ ಕಡಿಮೆ ಆಗುತ್ತಿತ್ತು. ಪ್ರೀತಿ ಇದೆಯೋ ಇಲ್ಲವೋ ಒಟ್ಟಾಗಿ ಬಾಳುತ್ತಿದ್ದರು. ವಯಸ್ಸಿನ ಅಂತರ ಇರುತ್ತಿತ್ತು. ಗಂಡ ಸತ್ತರೆ ಹೆಂಡತಿ ಇನ್ನು ಚಿಕ್ಕವಳು. ಚಿಕ್ಕ ವಯಸ್ಸಿಗೆ ವಿಧವೆ ಪಟ್ಟ ಕಟ್ಟಿಕೊಂಡು ಸಂಸಾರದಲ್ಲಿ ಏಗುವ ಕರ್ಮ ಹೆಣ್ಣಿನದು. ಇದರಲ್ಲಿ ಒಳ್ಳೆಯದು ಇದೆ. ಕೆಟ್ಟದ್ದು ಇದೆ. ಸಹಜವಾಗಿ ಗಂಡ ಖಾಯಿಲೆ ಬೀಳಬಹುದು. ೧೦-೧೫ ವರ್ಷಗಳ ಅಂತರದಲ್ಲಿ ತೀರಿ ಹೋಗಬಹುದು. ಆ ಕಾರಣಕ್ಕೆ ನಮ್ಮ ದೇಶದಲ್ಲಿ ವಿಧವೆಯರ ಸಂಖ್ಯೆ ಹೆಚ್ಚು ಅವರು ಮತ್ತೊಮ್ಮೆ ವಿವಾಹ ಮಾಡಿಕೊಳ್ಳೋದು ಕಡಿಮೆ. ಮಾಡಿಕೊಳ್ಳುವ ತ್ಯಾಗಿಗಳು ಎಲ್ಲಿದ್ದಾರೆ. ಅವರು ಒಪ್ಪಿದರೆ ಸಮಾಜ ಒಪ್ಪಬೇಕಲ್ಲ. (ಇತ್ತೀಚಿನ ದಿನಗಳಲ್ಲಿ ಪರಿಸ್ಥಿತಿ ಬದಲಾಗಿದೆ, ವಿಧವಾ ವಿವಾಹ ನಡೆಯುತ್ತದೆ).

ನೀವು ಹಳೆಯ ಮನೆಗಳಿಗೆ ಹೋಗಿ ಅಲ್ಲಿ ಗಂಡನ ಫೋಟೋ ಗೋಡೆಯ ಮೇಲೆ ಅದಕ್ಕೆ ಹಾರ ಅಂದ್ರೆ ಗಂಡ ತೀರಿಕೊಂಡು ೧೦-೧೫ ವರ್ಷ ಆಯಿತು. ಅವತ್ತಿನಿಂದ ಇವತ್ತಿನವರೆಗೂ ಮಕ್ಕಳು ಮರಿ ನೋಡಿಕೊಂಡು ಜೀವನ ನಡಿಸ್ತೆ ಇದೀನಿ ಎಂದು ಹೇಳುವ ಹಳ್ಳಿ ಹೆಂಗಸರು ಹೆಚ್ಚು.

ಹೆಂಡತಿ ಸತ್ತುಹೋದಳು. ಇನ್ನೊಂದು ಮದುವೆ ಮಾಡಿ ಕೊಳ್ಳಲಿಲ್ಲ. ನಾನೇ ತಾಯಿ ತಂದೆಯಾಗಿ ಮಕ್ಕಳನ್ನು ಬೆಳೆಸುತ್ತಿದ್ದೇನೆ ಎಂದು ಹೇಳುವ ಗಂಡಸರ ಸಂಖ್ಯೆ ತೀರ ಕಡಿಮೆ. ಹೆಂಡತಿ ತೀರಿದ ಒಂದು ವರ್ಷದೊಳಗೆ ಎರಡನೇ ಮದುವೆಗೆ ಸಿದ್ಧ. ಸಮಾಜವೇ ಎಷ್ಟು ದಿನ ಅಂತಾ ಇಂಗೆ ಇರ್ತೀಯಾ? ಮನೆಗೆ ಒಂದು ದೀಪ ಹಚ್ಚುವುದು ಬ್ಯಾಡವೇ, ಗಂಜಿ ಕಾಸೋರು ಯಾರು? ಮಕ್ಕಳಿಗೆ ತಾಯಿ ಬೇಡವೇ ಅದೂ ಇದೂ ಹೇಳಿ ಎರಡನೆ ಮದುವೆ ಮಾಡಿಸಿಯೇ ಬಿಡುತ್ತಾರೆ. ಅಲ್ಲಿ ಸಹಾ ಚಿಕ್ಕವಯಸ್ಸಿನ ಹೆಣ್ಣು ಮಗು ಹೆಂಡತಿಯಾಗಿ ಬರುತ್ತಾಳೆ. ಅವಳ ಗಂಡ ತೀರಿದಾಗ ಅವಳು ಒಂಟಿ, ಎಂದೂ ಸಮಾಜ ಅವಳ ಸಂಕಟಕ್ಕೆ ಜೊತೆ ನಿಲ್ಲುವುದಿಲ್ಲ. ನಮ್ಮ ಜನಪದ ಸಂಸ್ಕೃತಿಯಲ್ಲಿ ಕೂಡಿಕೆ ಎನ್ನುವ ಪದ್ಧತಿ ಇದೆ. ಹೆಂಗಸರಿಗೂ ಎರಡನೇ ಮದುವೆ ಉಂಟು. ಕೆಲ ಜಾತಿಯಲ್ಲಿ ಮಾತ್ರ ಇದು ಜಾರಿಯಲ್ಲಿದೆ. ಅದು ನಿಜಕ್ಕೂ ಒಳ್ಳೆಯದು.

ಹೀಗೆ ರಾಜ್ ಅವರ ಸಿನಿಮಾಗಳು ಹೆಣ್ಣಿನ ಮಹತ್ವ ಜೊತೆಗೆ ಕುಟುಂಬದಲ್ಲಿ ಹೆಣ್ಣು ಏನು? ಎಂಬುದು ಇಲ್ಲಿ ಚರ್ಚಿಸಲಾಗಿದೆ. ಸಿನಿಮಾದಲ್ಲಿ ಬರುವ ಕೌಟುಂಬಿಕ ಜನಪದ ಅಂಶಗಳು ರಾಜಣ್ಣನವರ ಚಿತ್ರಗಳಲ್ಲಿ ಹೇರಳವಾಗಿ ಬಂದಿವೆ. ಕೌಟುಂಬಿಕ ಜಾನಪದ ಎಂಬುದು ನಮಗೆ ಕೂಡು ಕುಟುಂಬದಲ್ಲಿ ಕಂಡುಬರುತ್ತದೆ. ಮನೆಯ ಒಡೆಯನ ಆಣತಿಯಂತೆ ಮನೆಯವರೆಲ್ಲಾ ನಡೆಯುತ್ತಾರೆ. ಹಬ್ಬ ಆಚರಣೆ, ಜಾತ್ರೆ, ಉತ್ಸವ, ಮೆರವಣಿಗೆಯಲ್ಲಿ ಮನೆಯವರೆಲ್ಲಾ ಒಟ್ಟಾಗಿ ಭಾಗವಹಿಸುತ್ತಾರೆ. ಏನೇ ಆದರೂ ತಮ್ಮ ಕುಟುಂಬದ ಅಸ್ತಿತ್ವವನ್ನು ಒಡೆಯದಂತೆ ತುಂಬು ಕುಟುಂಬದಲ್ಲಿ ಜೀವನ ನಡೆಯುವುದು ಸಿನಿಮಾಗಳಲ್ಲಿ ಇದೆ. ಆದರೆ ಸಿನಿಮಾದಲ್ಲಿ ಕುಟುಂಬಗಳು ಕೂಡಿದ್ದು ಒಡೆದು ಹೋಗುವ ಸಂಭವ ಬಂದಾಗ ಮತ್ತೆ ಒಂದಾಗುತ್ತದೆ. ಇದೇ ರೀತಿಯಲ್ಲಿ ಸಾಮಾಜಿಕರಲ್ಲಿ ಕೂಡುಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಜೀವನ ಸಾಗಿಸಲಾಗಿದೆ. ಬೀದಿಗೆ ಬಿದ್ದಿರುವುದು ಕಂಡುಬಂದಿವೆ. ಚಂದವಳ್ಳಿಯ ತೋಟದಲ್ಲಿ ಶಿವನಂಜಯ್ಯ ಕೊನೆಯವರೆಗೂ ಪಾಲು ಮಾಡುವುದು ಬೇಡ ಎಂದು ಬೇಡಿಕೊಳ್ಳುತ್ತಾನೆ. ಆದರೆ ಅವರ ಕಿರಿಮಗ ಅಪ್ಪನ ಮಾತು ಕೇಳದೇ ಮನೆ ಪಾಲು ಮಾಡಿ ಸರ್ವನಾಶಕ್ಕೆ ಕಾರಣನಾಗುತ್ತಾನೆ. ಹಿರಿಮಗ ಮನೆತನಕ್ಕೆ ಕುಂದು ಬರದಂತೆ ಬಹಳಷ್ಟು ಶ್ರಮ ವಹಿಸುತ್ತಾನೆ. ಅಪ್ಪನಂತೆ ಭೂಮಿ ತಾಯಿ ಸೇವೆ ಮಾಡುತ್ತಾನೆ. ಹಿರಿಸೊಸೆ ಹಿರಿಮುತ್ತೈದೆಯಂತೆ ಮನೆ ದೀಪ ಬೆಳಗಿಸುತ್ತಾಳೆ. ಯಾವಾಗ ಮನೆ ಪಾಲಾಗುತ್ತದೆಯೋ ಅಲ್ಲಿ ಕುಟುಂಬದ ಮೌಲ್ಯಗಳು ಮುರಿದು ಹೋಗುತ್ತವೆ. ಇಲ್ಲಿ ಜೀವನ ಶೈಲಿಯ ಬದಲಾವಣೆ ಅವಕಾಶಗಳು ಹಾಗೂ ಸ್ವಾರ್ಥದ ಬಯಕೆ ಎದ್ದು ಕಾಣುತ್ತದೆ. ಆದರೆ ಜನಪದಿಗರು ಕೂಡು ಕುಟುಂಬದ ಮೌಲ್ಯವನ್ನು ಎತ್ತಿಹಿಡಿದು ಕುಟುಂಬದ ಪರಿಕಲ್ಪನೆಯನ್ನು ಸಾರಿದವರಾಗಿದ್ದಾರೆ.

ಸರ್ವಮಂಗಳ ಚಿತ್ರದಲ್ಲಿ ಅಪ್ಪನ ಹಠಕ್ಕೆ ಕಟ್ಟುಬಿದ್ದು ಸರ್ವಮಂಗಳಾ ಇಷ್ಟವಿಲ್ಲದೆ ಮದುವೆ ಆಗುತ್ತಾಳೆ. ಆದರೆ ಸರ್ವಮಂಗಳಾ ಇಷ್ಟಪಟ್ಟ ವ್ಯಕ್ತಿ ನಟರಾಜ್ ಜೈಲಿನಿಂದ ಹಿಂತಿರುಗಿ ಬಂದಾಗಲೂ

ಅವನೊಂದಿಗೆ ಓಡಿಹೋಗಲು ಬಯಸುವುದಿಲ್ಲ. ಜನಪದ ನಂಬಿಕೆ, ಕುಟುಂಬ ವ್ಯವಸ್ಥೆಯ ಹಿನ್ನೆಲೆಯಾಗಿ ಜೀವನ ಪೂರ್ತಿ ಕಷ್ಟವಾದರೂ ಮದುವೆಯಾದ ಗಂಡನೊಂದಿಗೆ ಸಂಸಾರ ಮಾಡುತ್ತಾಳೆ. ಕುತ್ತಿಗೆಗೆ ತಾಳಿ, ಮೂರು ಗಂಟು ಬಿದ್ದ ಮೇಲೆ ಜೀವನ ಪೂರ್ತಿ ಅವನೊಂದಿಗೆ ಹೆಣ್ಣಿನ ಸಂಸಾರ ಎನ್ನುವುದು ಜನಪದಿಗರ ನಂಬಿಕೆಯಾಗಿದೆ. ಹೀಗೆ ಸರ್ವಮಂಗಳ ಸದಾಕಾಲ ಹೊಲಗದ್ದೆ ತೋಟ ಎಂದು ಗಾಣಿಗೆತ್ತಿನ ತರಹ ದುಡಿಯುತ್ತಾಳೆ. ಹೊಗೆ ಸೊಪ್ಪು ಬೆಳೆದು ಗಂಡ ಸಾಲಗಾರನಾಗುವುದನ್ನು ತಪ್ಪಿಸುತ್ತಾಳೆ. ಹಾಗೆಯೇ ಮಲ್ಲಮ್ಮನ ಪವಾಡ ಸಿನಿಮಾದಲ್ಲಿಯೂ ಮಲ್ಲಮ್ಮನು ಆ ಮತಿಭ್ರಮಣೆಯಾದ ಗಂಡನನ್ನು ತಿದ್ದುತ್ತಾ ಅವನನ್ನು ಒಳ್ಳೆಯ ನಾಗರೀಕನನ್ನಾಗಿ ಮಾಡುತ್ತಾಳೆ. ಗಂಡನ ಮನೆಯನ್ನು ಉಳಿಸುತ್ತಾಳೆ. ಸತಿ ಧರ್ಮ ಪಾಲಿಸುತ್ತಾಳೆ. ಗಂಡನ ಮನಸ್ಸಿಗೆ ನೋವಾಗದಂತೆ ಅವನಿಚ್ಛೆಯಂತೆ ಆಸ್ತಿ ಪಾಸ್ತಿ ಹೊಲ ಮನೆ ಎಲ್ಲವನ್ನು ಎಲ್ಲ ಮೈದುನನ ಪಾಲಿಗೆ ಕೊಟ್ಟು ತ್ಯಾಗಿ ಎನಿಸುತ್ತಾಳೆ.

ಕಾಮನಬಿಲ್ಲು ಚಿತ್ರದಲ್ಲಿ ಗಿರಿಜಾ ಸಹಾ ಹಳ್ಳಿಯಲ್ಲಿದ್ದುಕೊಂಡು ಕೃಷಿ ವಿಜ್ಞಾನಿಯಂತೆ ಭೂಮಿ ಬಗ್ಗೆ ಆಸಕ್ತಿ ವಹಿಸಿದ್ದಾಳೆ. ನಮ್ಮ ಹಳ್ಳಿ ಹೆಂಗಸರು ಬಹಳ ಗಟ್ಟಿಗರು. ಮನೆಯಲ್ಲಿ ೧೦-೨೦ ಜನ ರೈತಾಳುಗಳಿಗೆ ಮುದ್ದೆ ತಿರುವುತ್ತಾರೆ. ಬಿಸಿಲು ಗಾಳಿ ಎನ್ನದೆ ಗಂಡನಿಗೆ ಊಟ ಹೊತ್ತುಕೊಂಡು ಹೊಲಕ್ಕೆ ಹೋಗಿ ಅಲ್ಲಿಯೂ ಸಹಾ ಕೂಲಿಯಾಳುಗಳಂತೆ ಕೆಲಸ ಮಾಡುತ್ತಾರೆ. ಮಾದರಿ ರೈತ ಎಂದ ತಕ್ಷಣ ಆ ಕೀರ್ತಿ ಕೇವಲ ಗಂಡಸರಿಗೆ ಮಾತ್ರ ಸಲ್ಲುವಂತದ್ದಲ್ಲ ಅದರಲ್ಲಿ ಮಹಿಳೆಯ ಪಾತ್ರವೂ ಸರಿಸಮಾನವಾಗಿದೆ. ಪಾರಂಪರಿಕ ಕೃಷಿ ಪದ್ಧತಿ ಮತ್ತದೇ ಜನಪದ ನಂಬಿಕೆ ಎಂದು ಹೇಳಲೇಬೇಕು. ಮಳೆ ನಕ್ಷತ್ರವನ್ನು ನೋಡಿ ಯಾವ ಬೆಳೆ ಬೆಳೆಯಬೇಕು , ಹೆಚ್ಚು ಮಳೆ ಆಗದಿದ್ದರೆ ಏನು ಮಾಡಬೇಕು ಎಂದು ನಿರ್ಧಾರ ನಮ್ಮ ಜನಪದರಲ್ಲಿ ಅಪಾರವಾಗಿದೆ. ಅದರಲ್ಲಿ ವಿಜ್ಞಾನ ಸಹ ಅಡಗಿದೆ. ಅದು ಅನುಭವದ ಮಾತು. ನಾವು ವಿಜ್ಞಾನ ಯುಗದಲ್ಲಿ ಇದ್ದೇವೆ. ಜನಪದ ನಂಬಿಕೆ ಮೂಢ ನಂಬಿಕೆಯಿಂದ ಕೂಡಿದೆ. ಅದರಲ್ಲಿ ಸತ್ಯವಿಲ್ಲ ಎಂದು ಯಾವ ವಿಜ್ಞಾನಿಯೂ ಹೇಳುವಂತಿಲ್ಲ. ಜನಪದರ ನಂಬಿಕೆ, ಅನುಭವದಿಂದ ಕೂಡಿದೆ. ಅವನು ಏನನ್ನು ಸೃಷ್ಟಿ ಮಾಡುವುದಿಲ್ಲ. ಎಲ್ಲವನ್ನೂ ತನ್ನ ಹಿರೀಕರಿಂದ ಕೇಳೀ ನೋಡಿ ಅನುಭವಿಸಿ ತಿಳಿದುಕೊಂಡಿರುತ್ತಾನೆ. ಈ ಕಾರಣಕ್ಕೆ ಜನಪದ ಕೃಷಿ ಈಗಲೂ ಜೀವಂತವಾಗಿದೆ. ಸಾವಯವ ಸಗಣಿ ಗೊಬ್ಬರ ಈಗಲು ಉತ್ತಮ ರಸಗೊಬ್ಬರ ಎಂದು ರೈತ ಬಳಸುತ್ತಾನೆ. ಡಾ.ರಾಜ್ ಅವರ ಸಿನಿಮಾಗಳು ಕೌಟುಂಬಿಕ ಮೌಲ್ಯದ ಪಾಲು ಹೆಚ್ಚಾಗಿ ಕಂಡುಬಂದಿವೆ. ಒಡಹುಟ್ಟಿದವರು ಸಿನಿಮಾ ಕೂಡ ಅಣ್ಣತಮ್ಮಂದಿರ ಮೌಲ್ಯವನ್ನು ಸಮಾಜಕ್ಕೆ ತೋರಿಸಿದ್ದಾರೆ. ಇಲ್ಲಿ ಜಾನಪದ, ಜನಪದಿಗರ ನಂಬಿಕೆಯ ಹಿನ್ನೆಲೆಯಲ್ಲಿ ಸಮಾಜದ ಮೌಲ್ಯವನ್ನು ಕೌಟುಂಬಿಕ ನೆಲೆಯ ಹಿರಿಮೆ ಸಿನಿಮಾದಲ್ಲಿ ಅನಾವರಣಗೊಂಡಿವೆ.

### ೪.೫ ಡಾ.ರಾಜ್‌ಕುಮಾರ್ ಅವರ ಚಿತ್ರಗಳಲ್ಲಿ ಸ್ತ್ರೀ ಸಂವೇದನೆ

ಬೇಡರ ಕಣ್ಣಪ್ಪನಿಂದ ಹಿಡಿದು ಶಬ್ದವೇಧಿಯವರೆವಿಗೂ ನಾಯಕ ಪ್ರಧಾನ ಚಿತ್ರಗಳಲ್ಲಿ ಅಭಿನಯಿಸಿದರೂ ಸ್ತ್ರೀ ಪಾತ್ರಗಳಿಗೆ ಅವರ ಸಿನೆಮಾದಲ್ಲಿ ಒಂದು ಪ್ರತ್ಯೇಕವಾದ ಸ್ಥಾನವಿದೆ. ಮಹಿಳಾ ಕಲಾವಿದರು ಅದರಲ್ಲಿ ವಿಶೇಷ ಸ್ಥಾನಮಾನ ಪಡೆದು ಕೊಂಡಿದ್ದಾರೆ. ರಾಜಣ್ಣನವರಿಗೆ ತಾಯಿಯಾಗಿ, ತಂಗಿಯಾಗಿ, ಪ್ರೇಯಸಿಯಾಗಿ,

ಪತ್ನಿಯಾಗಿ, ಹಾಗೂ ಚಿತ್ರದ ಖಳನಾಯಕಿಯಾಗಿ ಹಲವು ಪಾತ್ರಗಳು ಬಂದು ಹೋಗಿವೆ. ಕೇವಲ ನಾಯಕಿ ಅಲ್ಲದೆ ಪೋಷಕ ಕಲಾವಿದೆಯರು ಮನೋಜ್ಞವಾಗಿ ಅಭಿನಯಿಸಿದ್ದಾರೆ. ಇವರಿಲ್ಲದೆ ಹೋದರೆ ಸಿನೆಮಾ ಮುಂದುವರೆಯಲು ಸಾಧ್ಯವಾಗುತ್ತಿರಲಿಲ್ಲ. ಪಂಡರಿಬಾಯಿ, ಲೀಲಾವತಿ, ಆರತಿ, ಭಾರತಿ, ಕಲ್ಪನಾ, ಜಯಂತಿ, ಮಾಧವಿ, ಗೀತಾ, ರೂಪಾದೇವಿ, ಸರಿತಾ ಮೊದಲಾದ ಕಲಾವಿದರು ಅವರೊಂದಿಗೆ ಅಭಿನಯಿಸಿದ್ದಾರೆ. ಇನ್ನು ಇವರು ವಹಿಸಿದ ಪಾತ್ರಗಳೂ ಸಹಾ ಕಥೆಗೆ ಪೂರಕವಾಗಿದೆ. ಮೊಟ್ಟ ಮೊದಲನೆಯದಾಗಿ ಎಲ್ಲಿಯೂ ಸ್ತ್ರೀಯರನ್ನು ಅವಮಾನಿಸುವ ಪ್ರವೃತ್ತಿ ಇಲ್ಲ. ಮಹಿಳೆಯರ ಸ್ಥಾನಮಾನಗಳನ್ನು ಗೌರವಿಸುವ ಪ್ರವೃತ್ತಿ ಪ್ರತಿ ಸಿನೆಮಾದಲ್ಲಿ ಇದೆ.

ಗಂಡನೇ ದೇವರು ಎಂದು ಪೂಜಿಸುವ ಎಂಥಹ ಗಂಡನಾದರೂ ದಬ್ಬಾಳಿಕೆಯನ್ನು ಸಹಿಸಿಕೊಂಡು ಹೋಗುವ ಹೆಣ್ಣು ಮಕ್ಕಳು ಈಗ ತೀರಾ ಕಡಿಮೆ. ಆದರೂ ರಾಜಣ್ಣನವರ ಚಿತ್ರಗಳು ಸ್ತ್ರೀ ಪಾತ್ರಗಳು ಬಹಳ ಸಂಯಮಿ, ಸಾಂಸಾರಿಕ ಚೌಕಟ್ಟನ್ನು ಮೀರದ ಜೀವನದ ಕೊನೆ ಉಸಿರು ಇರುವವರೆವಿಗೂ ಗಂಡ ಮನೆ ಮಕ್ಕಳು ಎಂದು ಹೆಣಗಾಡುವ ಜೀವಗಳು, ಅವರ ತ್ಯಾಗ, ಬಲಿದಾನ, ಬಹಳ ದೊಡ್ಡದು. ಇಂಥಹ ಪಾತ್ರಗಳನ್ನು ಬಹುತೇಕ ನಿಜ ಜೀವನದಲ್ಲಿ ಕಾಣುತ್ತೇವೆ. ಸ್ತ್ರೀಯರ ಭಾವನೆಗಳಿಗೆ ಗೌರವ ಕೊಡಲಾಗಿದೆ. ಕೀಳು ಪದಗಳಿಂದ ನಿಂದಿಸಿಲ್ಲ, ಅಶ್ಲೀಲ ಸಂಭಾಷಣೆಯಲ್ಲಿ ಸ್ತ್ರೀಯರಿಗೆ ಅಗೌರವ ತೋರಿಸುವ ಶಬ್ದಗಳಿಲ್ಲ. ನಾರಿ ಶಕ್ತಿ ದೇವತೆ, ಸಂಸಾರದ ಕಣ್ಣು, ಕರುಣೆಯ ಸಾಗರ, ಕ್ಷಮಾಧರಿತ್ರಿ ಎಂಬಂತೆಯೇ ಚಿತ್ರಿಸಲಾಗಿದೆ. ಮದುವೆ ಆಗುವವರೆವಿಗೂ ಚೆಲ್ಲುಚೆಲ್ಲಾಗಿದ್ದ ಹುಡುಗಿ ಕೂಡ ಮದುವೆ ನಂತರ ಸೀರೆ, ಕರಿಮಣಿ, ಕಾಲುಂಗುರ, ಕುಂಕುಮದಲ್ಲಿ ಕಾಣಿಸಿಕೊಳ್ಳುತ್ತಾಳೆ. ಬಹುಷಃ ಇದು ನಮ್ಮ ಮನೆತನಕ್ಕೆ ಅನಿವಾರ್ಯ ಕೂಡ. ಪಾಶ್ಚಾತ್ಯ ಸಂಸ್ಕೃತಿಯಂತೆ ಮಕ್ಕಳನ್ನು ಬಿಟ್ಟು ಮತ್ತೊಂದು ಮದುವೆ ಮಾಡಿಕೊಳ್ಳುವ ಹೆಣ್ಣುಮಕ್ಕಳು ನಮ್ಮ ಕನ್ನಡ ಸಿನೆಮಾದಲ್ಲಿ ಇಲ್ಲ. ಕರುಣೆಯೇ ಕುಟುಂಬದ ಕಣ್ಣು, ಕುಲವಧು, ಪುನರ್ಜನ್ಮ, ಮಲ್ಲಮ್ಮನ ಪವಾಡ, ಎರಡು ಕನಸು, ಸನಾದಿ ಅಪ್ಪಣ್ಣ, ಮುಂತಾದ ಸಿನೆಮಾಗಳಲ್ಲಿ ನಾಯಕಿಯರು ಕುಟುಂಬ ನಿರ್ವಹಣೆಗೆ ಬಹುದೊಡ್ಡ ಪಾತ್ರ ನಿರ್ವಹಿಸುತ್ತಾರೆ. ಎಂಥಹ ಪರಿಸ್ಥಿತಿಯಲ್ಲೂ ಕುಟುಂಬದ ಚೌಕಟ್ಟನ್ನು ಮೀರುವುದಿಲ್ಲ. ಗಂಡನಿಗೆ ತಕ್ಕ ಹೆಂಡತಿಯರಂತೆ ವರ್ತಿಸುತ್ತಾರೆ.

ಇಲ್ಲೆಲ್ಲಾ ಸ್ತ್ರೀಯರ ಸಂವೇದನೆ ಎಂದರೆ ಏನು ಎಂದು ಅರ್ಥ ಮಾಡಿಕೊಳ್ಳಬೇಕಾಗಿದೆ. ಒಬ್ಬ ಮಹಿಳೆಗೆ ಜೀವನದಲ್ಲಿ ಏನು ಬೇಕಾಗಿದೆ. ಬಾಲ್ಯದಲ್ಲಿ ಒಳ್ಳೆಯ ತಂದೆ ತಾಯಿ, ಮನೆತನ, ಸುರಕ್ಷತೆ, ಯೌವ್ವನದಲ್ಲಿ ಒಳ್ಳೆಯ ಗಂಡ, ಇನ್ನು ವೃದ್ಧಾಪ್ಯದಲ್ಲಿ ಒಳ್ಳೆಯ ಮಕ್ಕಳು. ಒಳ್ಳೆಯ ಶಿಕ್ಷಣ, ಮಾನವೀಯ ಮೌಲ್ಯಗಳ ಸಂವೇದನೆ ಬೇಕಾಗಿದೆ. ಜೊತೆಗೆ ಗಂಡಿಗೆ ಹೆಣ್ಣು, ಹೆಣ್ಣಿಗೆ ಗಂಡಿನ ಅವಶ್ಯಕತೆಯನ್ನು ಈ ಸಮಾಜ ನಿರ್ಮಾಣ ಮಾಡಿದೆ. ಅದರಂತೆಯೇ ಇಲ್ಲಿಯವರೆವಿಗೂ ನಾವೂ ಸಹಾ ನಡೆದುಕೊಂಡು ಬಂದಿದ್ದೇವೆ. ಕುಟುಂಬವಿಲ್ಲದ ಗಂಡು ಬೀರಿ ಹೆಣ್ಣನ್ನು ರಾಜಣ್ಣನವರ ಚಿತ್ರಗಳಲ್ಲಿ ಊಹಿಸಿಕೊಳ್ಳಲು ಸಾಧ್ಯವಿಲ್ಲ. ಹಾಗೆ ಇದ್ದರೆ ಸಿನೆಮಾದ ಕೊನೆಯಲ್ಲಿ ಅವಳು ಬದಲಾಗಿರುತ್ತಾಳೆ. ತಂದೆ ತಾಯಿ, ಅತ್ತೆ ಮಾವ , ಗಂಡ ಮಕ್ಕಳೊಂದಿಗೆ ಅವಳ ಜೀವನ. ಇದೇ ಆದರ್ಶ, ಇದೇ ಸಿದ್ಧಾಂತವನ್ನು ಬಹುತೇಕ

ಸಿನೆಮಾಗಳಲ್ಲಿ ಕಾಣುತ್ತೇವೆ. ಸ್ತ್ರೀಯರು ಬಹಳ ಸಂವೇದನಾ ಶೀಲರು. ಅವರು ಒಂದು ಮಾತು ಆಡಿದರೆ ಹೆಚ್ಚು, ಒಂದು ಮಾತನಾಡಿದ್ದು ಕಡಿಮೆ. ತನ್ನ ಕುಟುಂಬಕ್ಕೆ ಗಂಡನಿಗೆ ಆಗುವ ಅವಮಾನವನ್ನು ಅವಳು ಎಂದೂ ಸಹಿಸುವುದಿಲ್ಲ. ಸನಾದಿ ಅಪ್ಪಣ್ಣ ಸಿನೆಮಾದಲ್ಲಿ ನಾಯಕಿ ತನ್ನ ಗಂಡನಿಗೆ ಆದ ಅವಮಾನದಿಂದ ಕುಗ್ಗಿ ಹೋಗುತ್ತಾಳೆ. ಅದೇ ಅವಮಾನವನ್ನು ಅಪ್ಪಣ್ಣ ಸಾಧಾರಣವಾಗಿ ತೆಗೆದುಕೊಳ್ಳುತ್ತಾನೆ. ಆದರೆ ಬಸಂತಿ ಇಂಥಹ ಅವಮಾನ ತನ್ನ ಮಗನಿಗೆ ಆಗಬಾರದು ಎಂದು ಗಂಡನಲ್ಲಿ ಆಣೆ ಮಾಡಿಸಿಕೊಳ್ಳುತ್ತಾಳೆ. ಮಹಿಳೆಯರಿಗೆ ಮರ್ಯಾದೆ ಮುಖ್ಯ. ತನ್ನ ಗಂಡನ ಸಂಬಳ ಎಷ್ಟು ಎಂದು ಯಾರ ಮುಂದೆಯೂ ಹೇಳುವುದಿಲ್ಲ. ತುಸು ಹೆಚ್ಚೇ ಹೇಳಿ ಅವನ ಮರ್ಯಾದೆಯನ್ನು ಉಳಿಸುತ್ತಾಳೆ. ನಾ ನಿನ್ನ ಮರೆಯಲಾರೆ ಚಿತ್ರದಲ್ಲಿ ಮಾಜಿ ಪ್ರೇಯಸಿ ವಿಧವೆ ಎಂದು ತಿಳಿದರೂ ಅವನ ಪ್ರೇಮ ಮಾಸುವುದಿಲ್ಲ. ಅವಳನ್ನು ಪುನಃ ಸೇರುತ್ತಾನೆ. ಅವಳ ಬಗ್ಗೆ ಅವನಿಗಿರುವ ಪ್ರೇಮ ಮೋಹ ಬಲು ದೊಡ್ಡದು. ಪ್ರೇಯಸಿಗಾಗಿ ಮದುವೆ ಆಗದೆ ಅವಿವಾಹಿತನಾಗಿ ಉಳಿದು ಬಿಡುತ್ತಾನೆ. ಪುನಃ ಅವಳು ಸಿಕ್ಕಾಗ ತನ್ನ ಪ್ರೀತಿಯನ್ನು ಬಿಡಲು ಅವನಿಗೆ ಸಾಧ್ಯವಾಗುವುದಿಲ್ಲ. ಅವಳಿಗಾಗಿ ಸಮಾಜವನ್ನು ಎದುರು ಹಾಕಿಕೊಂಡು ಅವಳ ಕೈ ಹಿಡಿಯುತ್ತಾನೆ.

ಮಹಿಳೆಯರ ಮಾನ ರಕ್ಷಣೆಗಾಗಿ ನಾಯಕ ಸದಾ ಸಿದ್ಧ. ಪ್ರಾಣ ರಕ್ಷಣೆ ತನ್ನ ಕರ್ತವ್ಯ ಎಂದು ಭಾವಿಸಿ ಹರಿಯುವ ನದಿಗೆ ಹಾರಿ ನಾಯಕಿಯನ್ನು ರಕ್ಷಿಸುವ ಹಲವು ಉದಾಹರಣೆಗಳು ನಮ್ಮಲ್ಲಿದೆ. ಎರಡು ಕನಸು, ಹೊಸಬೆಳಕು, ಸನಾದಿ ಅಪ್ಪಣ್ಣ, ಮುಂತಾದ ಚಿತ್ರಗಳಲ್ಲಿ ಪ್ರೇಯಸಿಗಾಗಿ ನಾಯಕ ಪ್ರಾಣ ಕೊಡಲು ಸಿದ್ಧ. ಸ್ತ್ರೀ ರಕ್ಷಣೆಯೇ ಹೆಣ್ಣಿಗೆ ಬೇಕಾಗಿರುವುದು ಅಲ್ಲವೆ? ಪ್ರಾಣಕ್ಕಿಂತ ಪ್ರೀತಿಸುವ ರಕ್ಷಣೆ ನೀಡುವ ಗಂಡ ಸುರಕ್ಷತೆ ಬಯಸುವುದು ಸುರಕ್ಷಿತವಾಗಿ ಇರುವುದು ಹೆಣ್ಣಿಗೆ ಬೇಕಲ್ಲವೇ? ಗಂಡಸರ ನೆರಳಿಲ್ಲದೆ ತಾನೇ ದುಡಿದು ತಾನೊಬ್ಬಳೇ ಒಂಟಿಯಾಗಿ ಜೀವಿಸುತ್ತೇನೆ ಎನ್ನುವ ಹೆಣ್ಣು ಮಕ್ಕಳು ದಾಂಪತ್ಯವೇ ಬೇಡ, ಮದುವೆಯೇ ಬೇಡ, ಮಕ್ಕಳು, ಗೋಜಲು, ಜವಾಬ್ದಾರಿ ಬೇಡ ಎನ್ನುತ್ತಾ ಒಂಟಿಯಾಗಿ ಬದುಕಲು ಬಯಸುವ ಹೆಣ್ಣು ಮಕ್ಕಳಿಗೆ ಬುದ್ಧಿ ಹೇಳಬೇಕು ಎನಿಸುತ್ತದೆ. ಅನುರಾಗ ಅರಳಿತು ಸಿನೆಮಾದಲ್ಲಿ ನಾಯಕಿ ಎಷ್ಟೇ ಓದಿದ್ದರೂ, ಗೌರವದ ಹುದ್ದೆಯಲ್ಲಿ ಇದ್ದರೂ ಆಸ್ತಿ ಅಂತಸ್ತು ಇದ್ದರೂ ಒಳ್ಳೆಯ ಗಂಡನ ನಡವಳಿಕೆ ಅರಿಯದೆ ತಪ್ಪು ಮಾಡುತ್ತಾಳೆ. ಕೊನೆಗೆ ಗಂಡಿನ ಪ್ರೀತಿ ಅರಿತು ಅವನನ್ನು ಸೇರುತ್ತಾಳೆ. ಅದೇ ರೀತಿ ಗಂಡಸರಿಗೂ ಹೆಂಗಸರ ಅಷ್ಟೆ ಅವಶ್ಯಕತೆ ಇದೆ ಎನ್ನಬಹುದು. ಹೆಣ್ಣಾದರೂ ವಿಧವೆಯಾದರೂ ತನ್ನ ಮಕ್ಕಳೊಂದಿಗೆ ಹೇಗೋ ಜೀವನ ನಡೆಸಿಬಿಟ್ಟಾಳು. ಆದರೆ ಹೆಂಡತಿ ತೀರಿದ ಗಂಡಸು ಮನೆಯಲ್ಲಿ ಹೆಣ್ಣಿಲ್ಲದೆ ಇರಲು ಸಾಧ್ಯವೇ ಇಲ್ಲ.

ಮಲ್ಲಮ್ಮನ ಪವಾಡ ಸಿನೆಮಾದಲಿ ಗಂಡನನ್ನು ತಿದ್ದಿ ವಿದ್ಯಾಭ್ಯಾಸ ನೀಡಿ ಸಂಸ್ಕಾರ ನೀಡುವ ಹೆಣ್ಣುಮಗಳು ಈ ಕಾಲದಲ್ಲಿ ಸಿಗುವುದು ಕಷ್ಟವೇ. ಆದರೂ ಅಂಥಹ ಹೆಣ್ಣು ಮಕ್ಕಳಿದ್ದರೆ ಎಂಥಹ ಚೆಂದ ಎನಿಸುತ್ತದೆ (ವ್ಯಾವಹಾರಿಕವಾಗಿ ಅದು ಕಷ್ಟ ಬಿಡಿ). ಹುಚ್ಚು ಹೆಂಡತಿಗೆ ಸೇವೆ ಮಾಡಿ ಅವಳ ಖಾಯಿಲೆಯನ್ನು ವಾಸಿ ಮಾಡುವ ಅವಳೊಂದಿಗೆ ಸಂಸಾರ ಮಾಡುವ ಗಂಡಸರನ್ನು ನಿರೀಕ್ಷೆ ಮಾಡುವುದೇ

ತಪ್ಪು. ಆದರೂ ಹೆಂಡತಿ ಪವಾಡಗಳನ್ನು ಮಾಡಬಹುದು ಎಂದು ಈ ಕಾಲದಲ್ಲಿಯೂ ನಂಬಬಹುದು. ಇನ್ನು ತಾಯಿ, ತಂಗಿಯರ ಮನದಾಳದ ಮಾತುಗಳನ್ನು ಅರ್ಥ ಮಾಡಿಕೊಳ್ಳುವುದು ಈ ಸಿನೆಮಾಗಳಿಂದಲೇ ಎಂದು ಹೇಳಬಹುದು. ತಾಯಿ ತನ್ನ ಮಕ್ಕಳ ಬಗೆಗೆ ವಹಿಸುವಷ್ಟು ಕಾಳಜಿ ಯಾರೂ ವಹಿಸಲಾರರು. ಪಂಡರಿಬಾಯಿ, ಶಾಂತಮ್ಮ, ಲೀಲಾವತಿ, ಜಯಶ್ರೀ ಮುಂತಾದ ಹಿರಿ ತಾಯಂದಿರು ನಿಜಕ್ಕೂ ಸ್ತ್ರೀ ಸಂಮಯವನ್ನು ಅರ್ಥ ಮಾಡಿಕೊಂಡು ನಟಿಸಿದಂತಹ ಕಲಾವಿದರು. ತಾಯಂದಿರ ಮೊದಲ ಪ್ರಾಧಾನ್ಯತೆ ತನ್ನ ಮಕ್ಕಳು, ತನ್ನ ಗಂಡನನ್ನಾದರೂ ಬಿಟ್ಟಾರು, ಆದರೆ ಮಕ್ಕಳನ್ನು ಬಿಡಲಾರರು.

ಮಕ್ಕಳ ವಿಚಾರ ಬಂದಾಗ ತನ್ನ ಮನೆ ಬೆಳಗಬೇಕು, ವಂಶ ಬೆಳೆಯಬೇಕು ಎಂಬುದ ಪ್ರತಿ ಹೆಣ್ಣಿನ ಬಯಕೆ. ತನಗೆ ಮಕ್ಕಳಾಗದೇ ಇದ್ದಾಗ ಗಂಡನಿಗೆ ಇನ್ನೊಂದು ಮದುವೆ ಮಾಡಿ ಸವತಿಯನ್ನು ಮನೆಗೆ ಕರೆತರುವ ತ್ಯಾಗಕ್ಕೆ ಸಿದ್ಧಳಾಗುತ್ತಾಳೆ. ಸರ್ವಮಂಗಳ ಚಿತ್ರದಲ್ಲಿ ಮಂಗಳೆಗೆ ಮಕ್ಕಳಾಗದೇ ಹೋದಾಗ ತನ್ನ ಗಂಡನಿಗೆ ಇನ್ನೊಂದು ಮದುವೆ ಮಾಡಿಕೋ ಎಂದು ಗಂಡನನ್ನು ಪೀಡಿಸಿ ತನ್ನ ಮೈಮೇಲಿನ ಒಡವೆಯನ್ನು ಗಂಡನ ಎರಡನೇ ಪತ್ನಿಗೆ ಧಾರಾಳವಾಗಿ ನೀಡುತ್ತಾಳೆ. ಸವತಿ ಬಸರಿಯಾದರೆ ತಾನೇ ಬಸರಿಯಾದಂತೆ ಆಕೆಗೆ ಮಕ್ಕಳಾದರೆ ತಾನೇ ತಾಯಿಯಾದಂತೆ ಸಂತಸ ಪಡುತ್ತಾಳೆ. ಇವೆಲ್ಲವೂ ಹೆಣ್ತನದ ಗುಣ ಲಕ್ಷಣಗಳಲ್ಲವೇ (ಈ ಕಾಲಕ್ಕೆ ಇಂಥಹ ಹೆಣ್ಣು ಮಕ್ಕಳು ಇದ್ದಾರೆಯೇ ಎಂದು ಪ್ರಶ್ನಿಸಬೇಡಿ ಉತ್ತರಿಸುವುದು ಕಷ್ಟ).

೬೦ರ ದಶಕದಲ್ಲಿ ಬಿಡುಗಡೆಯಾದ ಕರುಣೆಯೇ ಕುಟುಂಬದ ಕಣ್ಣು ಚಿತ್ರದಲ್ಲಿ ರಾಜ್‌ಕುಮಾರ್ ಲೀಲಾವತಿಯನ್ನು ಹೊಡೆದು ಬೈದು ಅವಳಿಂದ ಒಡವೆ ಅಪಹರಿಸಿ ನಾಟಕದ ಕಂಪೆನಿಯ ಹೆಣ್ಣಿಗೆ ನೀಡಿ ಅವಳ ದಾಸರಾಗುತ್ತಾರೆ. ಆದರೆ ಕೊನೆಯಲ್ಲಿ ತನ್ನ ತಪ್ಪಿನ ಅರಿವಾಗಿ ತನ್ನ ಹೆಂಡತಿಯಲ್ಲಿ ಕ್ಷಮೆ ಕೋರಿದಾಗ ಮತ್ತೆ ಮನೆಗೆ ಹಿಂದಿರುಗಿದ ಗಂಡನನ್ನು ಹೆಂಡತಿ ಕ್ಷಮಿಸಿ ಆದದ್ದು ಆಗಿ ಹೋಯಿತು ಇನ್ನು ಮುಂದೆ ಸರಿಯಾಗಿದ್ದರೆ ಸಾಕು ಎನ್ನುವ ಮನೋಭಾವ ತೋರಿಸುತ್ತಾಳೆ. ಇಂಥಹ ಹಲವು ಪಾತ್ರಗಳು ರಾಜಣ್ಣನವರ ಚಿತ್ರಗಳಲ್ಲಿ ದಂಡಿಯಾಗಿ ಸಿಗುತ್ತವೆ.

ಮಗ ತಪ್ಪುದಾರಿ ಹಿಡಯುತ್ತಿದ್ದಾನೆ ಎಂದು ಅನುಮಾನ ಬಂದರೆ ಮುಂಡೇ ಮಗನೆ, ಹಾಳಾದವನೇ ಎಂದು ಬೈದು ಹೊಡೆದು ಮಗನನ್ನು ತಿದ್ದುವ ತಾಯಿಯ ಪಾತ್ರವೂ ಇಲ್ಲಿ ಸಿಗುತ್ತದೆ. ಸಂಪತ್ತಿಗೆ ಸವಾಲ್ ಚಿತ್ರದಲ್ಲಿ ಭದ್ರನನ್ನು ಅವನ ತಾಯಿ ರಾಜಮ್ಮನವರು ಬಾಯಿಗೆ ಬಂದಂತೆ ವಾಚಾರಗೋಚರವಾಗಿ ಬೈದರೂ ಮಗನ ಮೇಲೆ ಅವಳಿಗೆ ಅಪಾರ ಪ್ರೀತಿ. ಅದೇ ಚಿತ್ರದ ಇನ್ನೊಂದು ಸ್ತ್ರೀ ಪಾತ್ರ ಮಂಜುಳಾ ಅವರದ್ದು. ದುರ್ಗಿ ಪಾತ್ರದಲ್ಲಿ ಮಂಜುಳಾ ಬಾಯಿಬಡಕಿ, ಬಜಾರಿ, ಆದಾಗ ಭದ್ರ ಅವಳ ಅಹಂಕಾರ ಅಡಗಿಸುತ್ತಾನೆ. ಹೆಣ್ಣು ಹೇಗೆ ಇದ್ದರೆ ಸರಿಯೋ ಹಾಗೆಯೇ ಇರಬೇಕು ಎಂದು ನೀತಿ ಪಾಠ ಹೇಳುತ್ತಾನೆ. ಅದು ಸರಿ ಎನಿಸುತ್ತದೆ. ಅದೇ ಚಿತ್ರದ ಅತ್ತಿಗೆಮ್ಮ ಒಂದು ಆದರ್ಶ ನಾರಿ ಪಾತ್ರ. ಅತ್ತಿಗೆ ಅವನಿಗೆ ಕೇವಲ ಅತ್ತಿಗೆ ಆಗಿರದೆ ಅತ್ತಿಗಮ್ಮ ಆಗಿ ಅಮ್ಮ ಸಹಾ ಆಗಿದ್ದಾಳೆ. ಅತ್ತಿಗೆಯ ವೈವಾಹಿಕ ಜೀವನ ಆರಂಭಿಸುವ ಮುನ್ನ ಅತ್ತಿಗೆ ಮೈದುನನ ಬಾಯಿಗೆ ಹಾಲು ಹಾಕುವ ತಾಯಿಯಾಗುವ ವಿಚಾರ

ಬಹಳ ಉನ್ನತವಾದದ್ದು. ಮೈದುನನನ್ನು ತನ್ನ ಮಗ ಎಂದು ತಿಳಿದುಕೋ ಎಂದು ಅತ್ತೆ ಹೇಳುತ್ತಾಳೆ. ಅದೇ ರೀತಿ ಅತ್ತಿಗೆ ತಾಯಿಯಂತೆ ನಡೆದುಕೊಳ್ಳುತ್ತಾಳೆ. ಮೈದುನ ಸರಿಯಾದ ಸಮಯಕ್ಕೆ ಮನೆಗೆ ಬಂದನೆ, ಹೊಟ್ಟೆ ತುಂಬಾ ಊಟ ಮಾಡಿದನೆ ಎಂಬ ಚಿಂತೆ ಅತ್ತಿಗೆಗೆ. ತಾಯಿ ಮಗನನ್ನು ಮನೆಯಿಂದ ಹೊರಹಾಕಿದಲ್ಲಿ ಅತ್ತಿಗೆಯ ಕಣ್ಣಲ್ಲಿ ನೀರು ಬರುತ್ತದೆ. ಇಂಥಹ ಪಾತ್ರಗಳ ಮೂಲಕ ಹೇಳುವುದಾದರೆ ಹೆಣ್ತನದ ಹಲವು ಮಜಲುಗಳು ಹಲವು ಮುಖಗಳು ರಾಜಣ್ಣನವರ ಚಿತ್ರದಲ್ಲಿ ತೆರೆದುಕೊಳ್ಳುತ್ತವೆ.

ಅಣ್ಣ ತಂಗಿ ಪಾತ್ರ ಬಂದಾಗ ಪ್ರೀತಿಯ ಅಣ್ಣ ತಂಗಿಯನ್ನು ರಕ್ಷಿಸುವ ಅವಳನ್ನು ಪ್ರೀತಿಸುವ ಹೊಣೆ ಹೊತ್ತ ಒಬ್ಬ ಜವಾಬ್ದಾರಿ ಅಣ್ಣನಾಗಿ ರಾಜಣ್ಣನವರ ಚಿತ್ರಗಳು ಕಂಗೊಳಿಸುತ್ತದೆ. ಎಲ್ಲಿಯೂ ಇಂತಹ ಅಣ್ಣ ಏಕೆ ಹುಟ್ಟಿದ ಅನಿಸುವುದಿಲ್ಲ. ಇದ್ದರೆ ಇಂತಹ ಅಣ್ಣ ಇರಲಿ ಎಂದು ಪ್ರತಿಯೊಬ್ಬ ತಂಗಿಯೂ ಇಚ್ಛೆ ಪಡುತ್ತಾಳೆ. ತಂಗಿಯ ಭಾವನೆ ಎಂದರೆ ಅದೇ ಮತ್ತೊಂದು ಸ್ತ್ರೀ ಸಂವೇದನೆಯೇ ಆಗಿದೆ. ಅಣ್ಣ ತಮ್ಮಂದಿರು ಇರಬೇಕು ಹೆಣ್ಣಿನ ಜನುಮಕ್ಕೆ ಎಂದು ಜನಪದ ಕವಿಗಳು ಹಾಡಿದ್ದಾರೆ. ಸ್ತ್ರೀ ಸಂವೇದನೆಯನ್ನು ಜನಪದ ಕವಿಗಳು ಗ್ರಹಿಸಿದ್ದಾರೆ.

ಕೆಟ್ಟ ತಂದೆಯನ್ನು ನೋಡಬಹುದು. ಆದರೆ ಕೆಟ್ಟ ತಾಯಿಯನ್ನು ನೋಡಲು ಸಾಧ್ಯವೇ ಇಲ್ಲ. ಹಾಗಾಗಿ ಕೆಲ ಚಿತ್ರಗಳಲ್ಲಿ ಕುರುಡ, ಜೂಜು ಕೋರ, ಪರಸ್ತ್ರೀ ಸಂಗ, ಮುಂತಾದ ಕೆಟ್ಟ ತಂದೆಯನ್ನು ನೋಡಬಹುದು. ಆದರೆ ಬಡತನ ಇದ್ದರೂ ತಾನು ಕೂಲಿ ಮಾಡಿ ಮಕ್ಕಳಿಗೆ ಗಂಜಿ ತಿನ್ನಿಸುವ ತಾಯಂದಿರನ್ನು ನಾವು ಯಥೇಚ್ಛವಾಗಿ ನೋಡುತ್ತೇವೆ.

ಏಕೆ ಹೀಗೆ ಎಂದರೆ ಈ ಸಮಾಜದಲ್ಲಿ ಆಗುತ್ತಿರುವುದೇ ಹೀಗೆ. ಸಮಾಜದ ಪ್ರತಿಬಿಂಬ ಸಿನೆಮಾಗಳು. ಸಮಾಜದಲ್ಲಿ ಮಹಿಳೆಯರು ಬಹಳ ದೊಡ್ಡ ಪಾತ್ರ ನಿಭಾಯಿಸುತ್ತಾರೆ. ರಾಜಣ್ಣನವರ ವೈಯಕ್ತಿಕ ಜೀವನದಲ್ಲಿ ಪಾರ್ವತಮ್ಮನವರು ವಹಿಸಿದ ಪಾತ್ರ ದೊಡ್ಡದು. ವಿಶೇಷವಾಗಿ ಹಂಚಿಕೆದಾರರಾಗಿ, ದೊಡ್ಡ ದೊಡ್ಡ ಸಿನೆಮಾಗಳನ್ನು ಮಾಡಿದ ಕೀರ್ತಿ ಪಾರ್ವತಮ್ಮನವರಿಗೆ ಸಲ್ಲಬೇಕು. ರಾಜಣ್ಣನವರಿಗೆ ದುಡ್ಡುಕಾಸಿನ, ವ್ಯಾವಹಾರಿಕ ಜ್ಞಾನ ಅಷ್ಟಾಗಿ ಇರಲಿಲ್ಲ. ಅದರಲ್ಲಿ ಅವರಿಗೆ ಆಸಕ್ತಿಯೂ ಇರಲಿಲ್ಲ ಎಂದು ಎಲ್ಲರಿಗೂ ತಿಳಿದಿದೆ. ೫ ಮಕ್ಕಳ ತಾಯಿಯಾಗಿ ಮನೆ ಮಕ್ಕಳನ್ನು ನಿರ್ವಹಿಸುತ್ತಾ ಒಂದು ದೊಡ್ಡ ಕುಟುಂಬದಲ್ಲಿ ಊಟ, ಉಪಚಾರ, ಬಂಧುಮಿತ್ರರು, ಈ ಎಲ್ಲವನ್ನು ಯಶಸ್ವಿಯಾಗಿ ನಿಭಾಯಿಸಿದವರು ಒಬ್ಬ ಯಶಸ್ವಿ ಮಹಿಳೆ ಪಾರ್ವತಮ್ಮನವರು. ರಾಜಣ್ಣನವರಿಗೆ ೨ ಹೆಣ್ಣು ಮಕ್ಕಳು ಹಲವು ಮೊಮ್ಮಕ್ಕಳು ಇಂತಹ ದೊಡ್ಡ ಕುಟುಂಬದಲ್ಲಿ ಹೆಣ್ಣು ಮಕ್ಕಳೇ ಜಾಸ್ತಿ ಇದ್ದದ್ದು. ಇವರ ಮಧ್ಯೆ ಜೀವನ ಕಳೆದ ರಾಜಣ್ಣನವರನ್ನು ಹೆಣ್ಣು ಮಕ್ಕಳನ್ನು ಹೇಗೆ ನಿಭಾಯಿಸಬೇಕು ಎಂಬುದನ್ನು ಚೆನ್ನಾಗಿ ಅರಿತಿದ್ದರು.

ಹೀಗೆ ಹೇಳುತ್ತ ಹೋದರೆ ಹಲವು ಸಂಗತಿಗಳು ಹೊರಬರುತ್ತದೆ. ಗಂಡನಿಗೆ ಸಂಸಾರದ ತಾಪತ್ರಯ ಬೇಡ ಒಂದು ಸಣ್ಣ ತೊಂದರೆ ಬಂದರೆ ತಲೆ ಕೆಟ್ಟು ಮನೆ ಬಿಟ್ಟು ಹೋಗುತ್ತಾನೆ. ಯಾರಿಗೆ ಬೇಕ್ರಿ ಈ ಹೆಂಡತಿ ಮಕ್ಕಳು ಮನೆ ಮಠ ಎಲ್ಲ ಎಂದು ಕಾಶಿ ಹರಿದ್ವಾರಕ್ಕೆ ಓಡಿಹೋಗುತ್ತಾನೆ. ದೇವರ

ಭಕ್ತನಾಗುತ್ತಾನೆ. ಕಣ್ಣಿಗೆ ಕಾಣದ ದೇವರನ್ನು ಹುಡುಕಿಕೊಂಡು ಹಿಮಾಲಯಕ್ಕೆ ಓಡಿ ಹೋಗುತ್ತಾನೆ. ಆದರೆ ಹೆಂಗಸಾದವಳು ಏನೇ ಆದರೂ ಈ ಮುಳ್ಳಿನ ಬಲೆಯಲ್ಲಿ ನಿತ್ಯ ದಿನವೂ ನೋವನ್ನು ಅನುಭವಿಸಿದರೂ ಪಲಾಯನವಾದಿ ಆಗುವುದಿಲ್ಲ. ಅವಳ ಆತ್ಮಸ್ಥೈರ್ಯ ದೊಡ್ಡದು. ಹೆಂಡತಿ ಸತ್ತ ಮೇಲೆ ಜೀವನ ಚೈತ್ರ ಚಿತ್ರದಲ್ಲಿ ರಾಜಣ್ಣನವರು ಸಹಾ ಹಿಮಾಲಯಕ್ಕೆ ಓಡಿಹೋಗುತ್ತಾರೆ. ಅಲ್ಲಿ ಭಗವಂತನನ್ನು ಕಂಡಂತೆ ಆಗಿ ಪುನಃ ಮನೆಗೆ ತಾಯಿಯ ಬಳಿಗೆ ಹಿಂದಿರುಗುತ್ತಾರೆ. ತಾಯಿಯನ್ನು ಬಿಟ್ಟಿರಲಾರದ ಜೀವ ಎಂಬ ನಿಲುವು ತಾಳುತ್ತವೆ.

ಸರ್ವಮಂಗಳಾ ಸಿನಿಮಾದಲ್ಲಿ ಬಹಳ ದುಃಖದಿಂದ ಮಂಗಳೆ ಗಂಡನ ಮನೆಗೆ ಹೊರಡುತ್ತಾಳೆ. ಪ್ರತಿಯೊಬ್ಬ ಹೆಣ್ಣು ತವರು ಮನೆ ತೊರೆದು ಗಂಡನ ಮನೆಗೆ ಹೊರಡುವಾಗ ಅಳುವುದು ಸಹಜ. ಇದೊಂದೇ ದು:ಖವಲ್ಲದೆ ಇಷ್ಟವಿಲ್ಲದ ಗಂಡನೊಂದಿಗೆ ಬಾಳ್ವೆ ನಡೆಸುವುದು ಮತ್ತೊಂದು ದು:ಖ. ಎರಡನ್ನು ಸಹಿಸಿಕೊಂಡು ಮಂಗಳೆ ಅಳುತ್ತ ಬಿಕ್ಕುತ್ತ ಹೊರಟಿದ್ದಾಳೆ. ಅವಳ ಮುದ್ದಿನ ಕರು ಅವಳನ್ನು ಹೋಗಲು ಬಿಡುತ್ತಿಲ್ಲ. ಮನಸ್ಸಿನಲ್ಲಿರುವ ದು:ಖ ನುಂಗಿಕೊಂಡು ಹೊರಡುತ್ತಾಳೆ. ಮದುವೆಯಾದ ತಕ್ಷಣ ಅವಳು ಕನ್ಯೆ ಅಲ್ಲ, ಹೆಂಗಸು. ಜವಾಬ್ದಾರಿ ಇರುವ ಮಹಿಳೆ. ತಲೆ ಮೇಲೆ ಸೆರಗು ಹೊದ್ದು ಗರತಿಯಂತೆ ಗಂಡನ ಮನೆಗೆ ಹೊರಡುತ್ತಾಳೆ. ಅವಳನ್ನು ಕಳುಹಿಸಿಕೊಡಲು ಬಹಳಷ್ಟು ಹಳ್ಳಿ ಹೆಂಗಸರು ಬಂದಿದ್ದಾರೆ.

ಇಂತಹ ಸನ್ನಿವೇಶದಲ್ಲಿ ನಮ್ಮ ಜನಪದರು ಹಲವು ಹಾಡುಗಳನ್ನು ಕಟ್ಟಿದ್ದಾರೆ. ಹುಟ್ಟಿ ಬೆಳೆದ ಊರನ್ನು ಬಿಟ್ಟು ಹೋಗುವುದು ತುಂಬಾ ಕಷ್ಟ. ಗಂಡನ ಮನೆ ಹೇಗೋ ಏನೋ ಎನ್ನುವ ಭಯ.

ಈ ದು:ಖದಲ್ಲಿಯೂ ಅವಳು ತನ್ನ ತವರು ಮನೆಯನ್ನು ಹರಸುವುದನ್ನು ಬಿಡುವುದಿಲ್ಲ.

"ಹಾಲುಂಡ ತವರಿಗೆ ಏನೆಂದು ಹಾಡಲಿ,
ಹೊಳೆದಂಡೆಲಿರುವ ಗರಕೆಯ ಕುಡಿ ಹಂಗೆ
ಹಬ್ಬಲಿ ಅವರ ರಸ ಬಳ್ಳಿ"
"ತಂದೀನೆ ನೆನವರ ತಂಗೊಳ ಬಿಸಿಯಾಯ್ತು,
ಗಂಗಾದೇವಿ ನನ್ನ ಹಡೆದವ್ವ ನೆನೆವರ
ಮಾಸೀದ ತಲೆಯು ಮುಡಿಯಾಯ್ತು".

ಎಂದು ಹೆಣ್ಣು ಮಗಳು ಆಶಿಸುತ್ತಾಳೆ.

ಗಂಡನ ಮನೆ ತಲುಪಿ ಅಲ್ಲಿ ಸಂಸಾರ ನಡೆಸುವ ಹೆಣ್ಣು ಮಗಳು "ಭಾಗ್ಯದ ಬಳೆಗಾರ ಹೋಗಿ ಬಾ ನನ್ನ ತವರಿಗೆ" ಎಂದು ಬಳೆಗಾರನಿಗೆ ತನ್ನ ತವರಿಗೆ ಹೋಗಿ ನನ್ನ ಸಿರಿ ಅವ್ವ ಮುತ್ತೈದೆ ನನ್ನ ತಾಯಿಗೆ ಬಳೆ ತೊಡಿಸು ಎಂದು ಬಳೆಗಾರನನ್ನು ಬೇಡಿಕೊಳ್ಳುತ್ತಾಳೆ. ಬಳೆಗಾರ ನಿನ್ನ ತವರೂರು ನನಗೇನು ಬಲ್ಲೆನು ಎಂದಾಗ

"ಬಾಳೆ ಬಲಕ್ಕೆ ಬಿಡು ಸೀಗೆ ಎಡಕ್ಕೆ ಬಿಡು,
ನಟ್ಟ ನಡುವೇಲಿ ನೀ ಹೋಗು ಬಳೆಗಾರ ಅಲ್ಲಿದೆ ನನ್ನ ತವರೂರ"
ಎಂದು ತವರು ಹಾದಿ ತೋರುತ್ತಾಳೆ.

ಇನ್ನು ಬಾಣಂತನ ಮುಗಿಸಿ ತವರಿನಿಂದ ಗಂಡನ ಮನೆಗೆ ಹೋಗುವಾಗ
"ತೊಟ್ಟಿಲ ಹೊತುಕೊಂಡು ತವರ ಬಣ್ಣ
ತೊಟ್ಟುಕೊಂಡು, ಅಪ್ಪ ಕೊಟ್ಟ ಎಮ್ಮೆ ಹೊಡಿಕೊಂಡ,
ತವರೂರ ತಿಟ್ಟತ್ತಿ ತಿರುಗಿ ನೋಡ್ಯಾಳ"
ಎಂದು ಹಾಡುತ್ತಾಳೆ.

ಇದೊಂದು ಬಡಹೆಣ್ಣುಮಗಳ ಕಥೆ, ತಲೆ ಮೇಲೆ ತೊಟ್ಟಿಲು ಅದರಲ್ಲಿ ಮಗು, ಮುಂದೆ ಎಮ್ಮೆ ಹೊಡೆದುಕೊಂಡು ತಾನೊಬ್ಬಳೇ ಗಂಡನ ಮನೆ ಸೇರುವ ಹೆಣ್ಣು ಮಗಳು ನಿಜಕ್ಕೂ ಕರ್ಮಯೋಗಿಯೇ ಸರಿ. ಬಡವರ ಹೆಣ್ಣಿನ ಬಾಳು ಈ ರೀತಿ ಇರುತ್ತದೆ. ಎಷ್ಟೇ ಕಷ್ಟವಾದರೂ ತವರು ಚೆನ್ನಾಗಿ ಇರಲಿ ಎಂದು ಆಶಿಸುತ್ತಾಳೆ.

ಹೀಗೆ ವಿಶ್ಲೇಷಿಸುತ್ತಾ ಹೋದರೆ ನೂರಾರು ಜಾನಪದ ಗೀತೆಗಳು ಜಾನಪದ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ. ತವರು ಮನೆಯ ಕಷ್ಟ ದು:ಖವನ್ನು ತನ್ನ ಹೊಟ್ಟೆಯಲ್ಲಿ ಬಚ್ಚಿಟ್ಟುಕೊಳ್ಳುತ್ತಾಳೆ. ತವರಿನಲ್ಲಿ ದಾರಿದ್ರ್ಯ ಇದ್ದರೂ ಗಂಡನ ಮನೆಯಲ್ಲಿ ಸಿರಿ ಇದ್ದರೂ ಎಂದಿಗೂ ತವರಿನವರ ಅವಮಾನವನ್ನು ಗಂಡನ ಮನೆಯಲ್ಲಿ ಸಹಿಸುವುದಿಲ್ಲ. ಗಂಡನ ಮನೆಯಲ್ಲಿ ಕಿರುಕುಳವಿದ್ದರೂ ತವರಿಗೆ ಬಂದು ಹೇಳಿಕೊಂಡು ಅಳುವುದಿಲ್ಲ. ಗಂಡನ ಮನೆಯೇ ಅವಳ ಸರ್ವಸ್ವ. ಗಂಡನ ಮನೆಯಲ್ಲಿ ಎಲ್ಲರೂ ಒಳ್ಳೆಯವರೇ ಅಲ್ಲಿ ನಾನು ಸುಖವಾಗಿದ್ದೇನೆ ಎಂದು ಸುಳ್ಳು ಬೇಕಾದರೂ ಹೇಳುತ್ತಾಳೆ. ಅಲ್ಲಿ ಕಣ್ಣೀರು ಹಾಕಿದ್ದನ್ನು ತವರಿನಲ್ಲಿ ಹೇಳಿಕೊಳ್ಳುವುದಿಲ್ಲ. ಸರ್ವಮಂಗಳ ಚಿತ್ರದ ಒಂದು ಸನ್ನಿವೇಶ.

"ಶ್ರೀ ಪಾರ್ವತಿಯ ಶಿವನ ನೋಡೋಣ ಬನ್ನಿ,
ಗಂಗೆಯ ಜೊತೆಗೂಡಿ ಶಿವನ ನೋಡೋಣ ಬನ್ನಿ"

ಎಂದು ಜಾನಪದ ಗೀತೆ ಹಾಡುತ್ತಾ ಮಂಗಳೆ ರಾಗಿ ಕಲ್ಲಿನಲ್ಲಿ ರಾಗಿ ಬೀಸುತ್ತಿದ್ದಾಳೆ. ೧೯೪೭ ರ ಹಿಂದಿನ ದಿನಗಳು ಆಗಿನ್ನು ವಿದ್ಯುತ್, ಫ್ಲೋರ್‌ಮಿಲ್ಲು, ಏನೂ ಇರಲಿಲ್ಲ. ಹೆಣ್ಣು ಮಕ್ಕಳು ರಾಗಿ ಬೀಸಿ ಹಿಟ್ಟು ತಯಾರಿಸುತ್ತಿದ್ದರು. ಈ ರಾಗಿ ಕಲ್ಲು ಭಾರಿ ಜೋರು. ಇದನ್ನು ಒಂದು ಸುತ್ತು ತಿರುಗಬೇಕಾದರೆ ರಟ್ಟೆಯಲ್ಲಿ ಬಲ ಇರಬೇಕು. ರಾತ್ರಿಯಿಂದ ಬೆಳಗಾನಾ ರಾಗಿ ಬೀಸುತ್ತಿದ್ದರಂತೆ. ಅದರಿಂದಲೇ ನಮ್ಮ ಹೆಣ್ಣು ಮಕ್ಕಳು ಬಲುಗಟ್ಟಿ, ಬಾವಿಯಿಂದ ನೀರು ಸೇದುತ್ತಿದ್ದರು, ೨-೪ ಮೈಲಿ ಎರಡೆರೆಡು ಕೊಡ ನೀರು ತುಂಬಿ ತರುತ್ತಿದ್ದರು. ಕಾಡಿಗೆ ಹೋಗಿ ಸೌದೆ ಕಡಿದು ಕಟ್ಟಿಗೆ ಹೊರೆ ತಲೆ ಮೇಲೆ, ಕಂಕುಳಲ್ಲಿ ಮಗು ಉರಿಬಿಸಿಲಿನಲ್ಲಿ ನಡೆದುಕೊಂಡು ಬರುತ್ತಿದ್ದರು. ದೈಹಿಕ ಶ್ರಮಕ್ಕೆ ಇವರು

ಕೊಟ್ಟ ಮಹತ್ವವೇ ಬೇರೆ. ಆದ್ದರಿಂದಲೇ ಅವರಿಗೆ ಖಾಯಿಲೆ ಕಸಾಲೆ ತುಂಬಾ ಕಮ್ಮಿ. ರೋಗ ನಿಯಂತ್ರಕ ಗುಣ ಹೆಚ್ಚು ಇರುತ್ತಿತ್ತು. ಅತ್ತೆ ಸೊಸೆ ನಾದಿನಿ ಅಜ್ಜಿ ಎಲ್ಲಾ ಹೆಣ್ಣು ಮಕ್ಕಳು ಕುಳಿತು ರಾಗಿ ಬೀಸುತ್ತ ಮನೆ ಕಷ್ಟ ಸುಖ ಮಾತನಾಡಿಕೊಳ್ಳುತ್ತಿದ್ದರು. ಅವರಲ್ಲಿ ಸ್ನೇಹ ಸೌಹಾರ್ದ ಬೆಳೆಯುತ್ತಿತ್ತು. ಆಹಾರ ಮನೆಯಲ್ಲೇ ತಯಾರಾಗುತ್ತಿತ್ತು. ಜವಾಬ್ದಾರಿ ಬೆಳೆಯುತ್ತಿತ್ತು. ಪ್ರಸ್ತುತ ಈ ನೆಲೆಯ ಮೌಲ್ಯಗಳು ಮರೆಯಾಗುತ್ತಿವೆ. ಬೇಯಿಸಿದ ಆಹಾರ ಸಾಕಷ್ಟು ದೊರೆಯುತ್ತದೆ. ಇದರ ಜೊತೆಗೆ ಮಾನವ ಕುಲ ಸವೆಯುತ್ತದೆ ಎನ್ನುವುದು ಸತ್ಯ.

ರಾಜ್ ಅವರ ಸಿನಿಮಾದಲ್ಲಿ ಹೆಣ್ಣಿನ ಅಸ್ತಿತ್ವವನ್ನು ಗುರುತಿಸಬಹುದು ಇದು ಬಹಳ ಸೂಕ್ಷ್ಮ ದೃಶ್ಯ. ಅಲ್ಲೆ ಕೋಣೆಯಲ್ಲೆ ಮಣ್ಣಿನ ಮಡಿಕೆ ಜೋಡಿಸಲಾಗಿದೆ. ದೊಡ್ಡ ಗಿಂಡಿ, ಗೋಡಗೆ ಕೆಳಭಾಗದಲ್ಲಿ ಸುಂದರ ವಿನ್ಯಾಸದಲ್ಲಿ ರಂಗೋಲಿ ಬಿಡಿಸಲಾಗಿದೆ. ಒಂದು ಕೋಲಿನ ಮೇಲೆ ಮರದ ತುಂಡಿನ ಮೇಲೆ ಸೀಮೆಎಣ್ಣೆ ದೀಪ ಹಚ್ಚಿ ಇಡಲಾಗಿದೆ. ಮೂಲೆಯಲ್ಲಿ ಮೊಸರು ಕಡೆಯುವ ಮಂತು ಇಡಲಾಗಿದೆ. ಮಂಗಳೆ ಕಣ್ಣೀರು ಸುರಿಸುತ್ತ ದೇವೀರಿ ಯಾಕಮ್ಮ ನಿಲ್ಲಿಸ್ದೆ ಎಂದು ದೀನವಾಗಿ ನುಡಿಯುತ್ತ ಹಿಂದೆ ತಿರುಗಿ ನೋಡಿದಾಗ ಅಲ್ಲಿ ಗಂಡ ಬಂದು ಕುಂತಿದ್ದಾನೆ. ತಕ್ಷಣ ಬೆನ್ನು ಮುಚ್ಚಿಕೊಳ್ಳುವ ಹೆಂಡತಿ ಗಂಡನ ಎದುರು ಮೈ ತೋರದ ಗರತಿ ಎನ್ನಿಸಿಕೊಳ್ಳುತ್ತಾಳೆ. ತಲೆ ಮೇಲೆ ಕೈ ಹೊತ್ತು ಮಂಗಳೆ ಎರಡು ಮೂಗಿಗೆ ಮೂಗುತಿ ಧರಿಸಿದ್ದಾಳೆ. ಮಧ್ಯೆ ಬೈತಲೆ ತೆಗೆದಿದೆ. ಗಂಡ ಹೆಂಡಿರ ಮಧ್ಯೆ ಮನಕರಗುವ ಮಾತುಗಳು ಹೀಗಿವೆ."ಬ್ಯಾಡ ಅಂದ್ರೂ ಎರಡನೇ ಮದುವೆ ಮಾಡಿಸ್ದೆ" ಎಂದು ಪಶ್ಚಾತ್ತಾಪ ಪಡುತ್ತಾನೆ. ಗಿರಿಜೆ ಇನ್ನೂ ಚಿಕ್ಕವಳು ೪ ದಿನಾ ಕಳೆದ್ರೆ ತಾನಾಗಿ ಎಲ್ಲಾ ತಿಳಿದುಕೊಳ್ಳುತ್ತಾಳೆ. ಎಂದು ಗಿರಿಜೆ ಪರವಾಗಿ ಮಾತಾಡ್ತಾಳೆ. ಕೋಣೆಯ ಬಾಗಿಲು ತೆರೆದಿದೆ. ಅಲ್ಲಿ ಗಿರಿಜೆ, ನಾಗತ್ತೆ ನಿಶ್ಯಬ್ದವಾಗಿ ಬಂದು ಗಂಡ ಹೆಂಡಿರ ಮಾತು ಕೇಳಿಸಿಕೊಳ್ತಾರೆ.

"ತಾಟಗಿತ್ತಿ ತಾರಾದೇವಿಗೆ ಕಷ್ಟ ಸುಖ ತಿಳಿಯೋದು ಆ ಒನಕೆಗೆ ಕೋಡು ಮೂಡೂದು ಎರಡೂ ಒಂದೇ ಸರಿ" ಎಂದು ಗಂಡ ಬೈಯುತ್ತಾನೆ. ದುರ್ಗಿ ಬೆತ್ತದ ತೊಟ್ಟಿಲಿನಲ್ಲಿ ಮಗುವನ್ನು ತೂಗಿ ಮಲಗಿಸುತ್ತಿದ್ದಾಳೆ.

ಜೋ ಜೋ ಸದ್ಗುಣ ನಿರ್ಮಲ ಚಂದ್ರ
ಜೋ ಜೋ, ಜಗಜ್ಯೋತಿ ಬಸವರಾಜೇಂದ್ರ ಜೋ

ಎಂದು ಹಾಡುತ್ತಾಳೆ. ಬಿಗಿಯಾಗಿ ನಾಲ್ಕು ಕಡೆ ಬಿಳಿ ಹಗ್ಗಗಳಿಂದ ಬಿಗಿದ ತೊಟ್ಟಿಲು. ಮಗುವಿಗೆ ಕುಲಾವಿ ತೊಡಿಸಿದೆ. ಹಣೆಗೆ, ಕೆನ್ನೆಗೆ ಕಪ್ಪು ಬೊಟ್ಟು ಇಟ್ಟಿದ್ದಾರೆ. ಮಧ್ಯದಲ್ಲಿ ಎರಡು ಗೆಜ್ಜೆ ಕಟ್ಟಿದ್ದಾರೆ, ತೂಗಿದಾಗ ಅದು ಘಲ್ ಎನ್ನುತ್ತದೆ.

ಶಿವನ ಬಗ್ಗೆ ಜನಪದರು ಹಾಡುತ್ತಾರೆ.
ಶಿವ ಶಿವನೆಂದರೆ ನೆಡಿಲೆಲ್ಲ ಬಯಲಾಗಿ
ಕಲ್ಲ ಬಂದೆರಗಿ ಕಡೆಗಾಗಿ । ಎಲೆ ಮನವೆ ।

ಶಿವನೆಂಬ ಶಬ್ದ ಬಿಡಬ್ಯಾಡ ॥

ಪಾರ್ವತಿಗೆ ನಾಲ್ಕು ತಿಂಗಳು, ಅವಳು ಕೋಣೆ ಸೇರಿದ್ದಾಳೆ. ದುರ್ಗಿ ಬಾಣಂತಿ, ಮೈಸೂರಿನ ಮಾವ ಒಂಟಿ, ಈ ಸಮಯದಲ್ಲಿ ಒಂದು ಆಘಾತದ ಸುದ್ದಿ ನಟರಾಜನನ್ನು ಜೈಲಿನಿಂದ ಬಿಟ್ಟರೂ ಸರ್ಕಾರಿ ಆಸ್ಪತ್ರೆಯಲ್ಲಿ ಕ್ಷಯರೋಗ ತಗುಲಿ ಅನಾರೋಗ್ಯದಿಂದ ನರಳುತ್ತಿದ್ದಾನೆ. ಚಿಕ್ಕಯ್ಯ (ಚಿಕ್ಕಪ್ಪ) ಮೈಸೂರು ಮಾವ ಬಂದು ಎಲ್ಲರಿಗೂ ಸುದ್ದಿ ತಿಳಿಸುತ್ತಾನೆ. ನಟರಾಜನ ಶುಶ್ರೂಷೆಗೆ ಯಾರೂ ಇಲ್ಲದ ಕಾರಣ ಸುಬ್ಬರಾಯಿ ಮಂಗಳೆಯನ್ನು ಕಳಿಸಿಕೊಡಲು ಒಪ್ಪುತ್ತಾನೆ.

ನಮ್ಮ ಹೆಣ್ಣು ಮಕ್ಕಳು ದುಡಿಮೆಯಲ್ಲಿ ಎತ್ತಿದ ಕೈ, ಮನೆ ಗದ್ದೆ ತೋಟ, ಹೊಲ ಎಂದು ಸದಾ ಕಾಲ ದುಡಿಯುತ್ತಲೇ ಇರುತ್ತಾರೆ. ಅವರಿಗೆ ಗಂಡ ಮನೆ ಮಕ್ಕಳೇ ಸರ್ವಸ್ವ ತನ್ನ ಸುಖ ಏನೂ ಬೇಕಾಗಿಲ್ಲ. ಹೆಣ್ಣು ಮಕ್ಕಳ ದುಡಿಮೆಯಿಂದಲೇ ಮನೆಯಲ್ಲಿ ಎರಡು ಹೊತ್ತು ಗಂಜಿ ಕಾಣಿಸುವುದು. ಅವರು ಹೊಲದಿಂದ ಬಂದು ಅಡಿಗೆ ಮನೆ ಹೊಕ್ಕು ಬೆಂಕಿ ಒಲೆ ಹಚ್ಚಿದರೆ ಎಲ್ಲರ ಹೊಟ್ಟೆ ತಣ್ಣಗಾಗುವುದು. ಇಂಥಹ ಗೃಹಿಣಿಯನ್ನು ಜನಪದರು ಹಾಡಿ ಹೊಗಳಿದ್ದಾರೆ. ಹೆಣ್ಣು ಮನೆಯ ಕಣ್ಣು, ಮನೆಗೆ ಮಹಾಲಕ್ಷ್ಮಿ ಎಂದೆಲ್ಲಾ ವರ್ಣಿಸುತ್ತಾರೆ. ಹೆಣ್ಣು ಮಕ್ಕಳು ಕಾಲಿನಲ್ಲಿ ಬೆಳ್ಳಿ ಗೆಜ್ಜೆ ಧರಿಸಿ ಓಡಾಡುತ್ತಾ ಇದ್ದರೆ ಲಕ್ಷ್ಮಿ ಮನೆಗೆ ಬರುತ್ತಾಳೆ ಎಂಬ ನಂಬಿಕೆ. ಕೈ ಬಳೆ ಘಲ ಘಲ ಎನ್ನುತ್ತಿದ್ದರೆ, ಮನೆಯೆಲ್ಲ ಝಣ ಝಣ. ಹೆಣ್ಣು ಇಲ್ಲದ ಮನೆ ಮಸಣ. ಹೆಣ್ಣಿಲ್ಲದ ಮನೆ ಗಂಜಿಕ್ಕೂ ದಿಕ್ಕಿಲ್ಲ ಎನ್ನುವಂತೆ ಆ ಮನೆ ಬಿಕೋ ಎನ್ನುತ್ತದೆ. ಸಂಜೆಯಾದರೆ ಅಲ್ಲಿ ದೀಪ ಹಚ್ಚೋರಿಲ್ಲ. ಬೆಳಗಾದರೆ ಸಗಣಿ ನೀರು ಹಾಕಿ ಸಾರಿಸಿ ರಂಗೋಲಿ ಹಾಕೋರಿಲ್ಲ. ಬಾಗಿಲಿಗೆ ಹರಿಶಿನ ಕುಂಕುಮ ಹಚ್ಚಿ ಹೂ ಕಡ್ಡಿಗಳಿಂದ ಪೂಜೆ ಮಾಡೋರಿಲ್ಲ. ಮನೆ ಮುಂದೆ ತುಳಸಿ ಕಟ್ಟೆಯಲ್ಲಿ ದೀಪ ಹಚ್ಚೋರಿಲ್ಲ. ಅದೂ ಒಂದು ಮನೆಯೇ ಮನೆಯಲ್ಲಿ ಹೆಣ್ಣು ಮಕ್ಕಳು ಇರಬೇಕು. ಗೃಹಿಣಿ ಸದಾಕಾಲ ನಗುತ್ತಿರಬೇಕು. ಗೃಹಿಣಿ ಗೃಹಮುಚ್ಯತೇ ಎನ್ನೋದು ಸತ್ಯ.

ಎಂತಹ ಬಡತನ ಇದ್ದರೂ ತಮ್ಮ ಮಗುವಿಗೆ ಅವಳು ಹಾಡುವುದೆಂದರೆ ಅವಳಿಗೆ ಸಂತಸ

'ಮುರುಕ ತೊಟ್ಟಿಲಿಗೊಂದು ಹರಕು ಬಾಪಿಯ ಹಾಸಿ
ಅಂಚು ಪಾಪನ ಮಲಗಿಸಿ । ಅದರಂತೆ
ಕಲಕೇತ ಹಾಡಿ ಹಿಗ್ಗ್ಯಾಳು॥']

ಎಳ್ಳು ಹೊಲಾನಾ ಬಿಟ್ಟೆ, ಒಳ್ಳೆ ಗಂಡನ್ನ ಬಿಟ್ಟೆ ಎಂದು ಹೆಣ್ಣೊಬ್ಬಳು ಹೇಳಿದ ಸತ್ಯದ ನುಡಿ ತಮ್ಮ ಗೀತೆಯಲ್ಲಿ ಹೇಳಿಕೊಂಡಿದ್ದಾಳೆ. ಜನಪದರು ಏನನ್ನೂ ಮುಚ್ಚಿಡುವುದಿಲ್ಲ. ಎಲ್ಲವೂ ಸೀದಾ, ಖುಲ್ಲಂ ಖುಲ್ಲಾ, ಕಲ್ಪನೆ ಭಾವನೆಗಳಿಗೆ ಇಲ್ಲಿ ಆದ್ಯತೆ ಇಲ್ಲ. ಇಲ್ಲಿ ಅನುಭವವೇ ಅವರ ಕಾವ್ಯ. ಸೃಷ್ಟಿಯ ಮೊದಲ ಆದ್ಯತೆ.

ಪುನರ್‌ಜನ್ಮ ಸಿನಿಮಾದಲ್ಲಿಯ ಒಂದು ದೃಶ್ಯ. ನಾಗಮ್ಮ ಬಾವಿಯಲ್ಲಿ ನೀರು ಸೇದುತ್ತಾಳೆ. ಅಲ್ಲೇ ದನದ

ಕೋಣೆಯಲ್ಲಿ ಹಸುಕರುಗಳನ್ನು ಕಟ್ಟಿಹಾಕಲಾಗಿದೆ. ಅವುಗಳಿಗೆ ಮೇವು ಹಾಕುತ್ತಾಳೆ, ಪ್ರೀತಿಯಿಂದ ಮೈ ನೇವರಿಸುತ್ತಾಳೆ. ಅಲ್ಲೆ ಜಗಲಿ ಮೇಲೆ ರಾಗಿ ಕಲ್ಲು ಇರಿಸಲಾಗಿದೆ. ತುಳಸಿಕಟ್ಟೆ ಇದೆ. ಅದರ ಸುತ್ತ ನೀರು ಚಿಮುಕಿಸುತ್ತಾಳೆ. ಅವ್ವ ಒರಳಿನಲ್ಲಿ ಒನಕೆಯಿಂದ ಏನನ್ನೋ ಕುಟ್ಟುತ್ತಿದ್ದಾಳೆ. ನೀಲವ್ವ ಮಣ್ಣಿನ ಮಡಿಕೆಯಲ್ಲಿ ಕಂಭಕ್ಕೆ ಕಟ್ಟಿದ್ದ ಮೊಸರು ಕಡೆಗೋಲಿನಿಂದ ಕಡೆಯುತ್ತಿದ್ದಾಳೆ. ಅವಳ ಮುಖದಲ್ಲೋ ಅಪರಿಮಿತ ಉತ್ಸಾಹ, ಕಡೆಯುವ ಧ್ವನಿಯಲ್ಲಿ ಸಂಗೀತ ಅಡಗಿದೆ ಎನಿಸುತ್ತ ಕೈಯಲ್ಲಿ ಹಿಡಿದ ಹಗ್ಗವನ್ನು ವೈಜ್ಞಾನಿಕ ಎಳೆಯುತ್ತಾಳೆ. ಅದರಲ್ಲಿ ಒಂದು ಸರಿಯಾದ ಪ್ರಮಾಣ ಅಡಗಿದೆ ಹೆಚ್ಚಿಲ್ಲ, ಕಡಿಮೆ ಇಲ್ಲ ಸಮತೂಕ. ಅವಳು ಭುಜ ಸಹಾ ಅದೇ ಸರಿಯಾದ ಪ್ರಮಾಣದಲ್ಲಿ ಹಿಂದೆ ಮುಂದೆ ಆಡುತ್ತದೆ. ಈ ಕಾರಣಕ್ಕೆ ಏನೋ ನಮ್ಮ ಹಿಂದಿನ ಹೆಣ್ಣು ಮಕ್ಕಳು ಎಷ್ಟು ದಷ್ಟಪುಷ್ಟವಾಗಿ ಆರೋಗ್ಯವಂತರಾಗಿ ಇರುತ್ತಿದ್ದರು. ೮-೧೦ ಮಕ್ಕಳನ್ನು ಹೆತ್ತರೂ ಆಸ್ಪತ್ರೆ ಮುಖ ನೋಡುತ್ತಿರಲಿಲ್ಲ. ಹೆರಿಗೆಯ ೯ ತಿಂಗಳು ಸಹಾ ಡಾಕ್ಟರ್ ಎಂದರೆ ಏನು ಎಂದು ಗೊತ್ತಿರಲಿಲ್ಲ. ಸುಖ ಪ್ರಸವ ಆಗುತ್ತಿತ್ತು. ಸಿಜೇರಿಯನ್ ಎಂದರೆ ಯಾರಿಗೂ ಗೊತ್ತಿರಲಿಲ್ಲ. ಚೆನ್ನಾಗಿ ಉಣ್ಣುತ್ತಿದ್ದರು ಹಾಗೆ ಗಂಡಸರ ತರಹ ದುಡಿಯುತ್ತಿದ್ದರು.

ಈಗಲೂ ಹೆಣ್ಣು ಮಕ್ಕಳಿಗೆ ದುಡಿಮೆ ಇದೆ. ಬೆಳಿಗ್ಗೆ ೯ ರಿಂದ ರಾತ್ರಿ ೯ ರವರೆಗೆ ಕಂಪ್ಯೂಟರ್ ಮುಂದೆ, ಸಾಫ್ಟ್‌ವೇರ್ ಇಂಜಿನಿಯರ್‌ಗಳು ದುಡಿಮೆ ಮಾಡುತ್ತಾರೆ. ಇದು ಮಾನಸಿಕ ಆರೋಗ್ಯವನ್ನು ಹೆಚ್ಚು ಬೇಡುತ್ತದೆ. ಇಲ್ಲಿ ಮಾನಸಿಕ ನೆಮ್ಮದಿಯನ್ನು ಹಾಳು ಮಾಡುವ ಮೂಲಕ ಸರಿಯಾಗಿ ನಿದ್ದೆ ಮಾಡಲು ಆಗದೇ ಸರಿಯಾಗಿ ಆಹಾರವನ್ನು ಸೇವಿಸಲು ಆಗದಿರುವ ಪರಿಸ್ಥಿತಿಯನ್ನು ಕಾಣಬಹುದು.ಕೈಬೆರಳಿನಲ್ಲಿ ನಮ್ಮ ಇಂದಿನ ಮಹಿಳೆಯರು ವಿಜ್ಞಾನ ಕ್ಷೇತ್ರದ ಸಾಧನೆ ಮಾಡುತ್ತಿದ್ದಾರೆ. ಸುನಿತಾ ವಿಲಿಯಂಸ್ ಎನ್ನುವ ಹೆಣ್ಣು ಮಗಳು ಭಾರತ ಮೂಲದವಳು, ಅಂತರಿಕ್ಷದಲ್ಲಿ ಮಾಡಿದ ಸಾಧನೆಯನ್ನು ಮರೆಯಬಾರದು. ಏನಾಗಲೀ ಆ ಕಾಲದಲ್ಲೂ ಈ ಕಾಲದಲ್ಲೂ ಹೆಣ್ಣು ಮಕ್ಕಳು ಪರಿಶ್ರಮಿಗಳು.

ಸಂಪತ್ತಿಗೆ ಸವಾಲ್ ಚಿತ್ರದ ಒಂದು ದೃಶ್ಯ : ರಾತ್ರಿ ಕದ್ದು ಮನೆಗೆ ಬರುವ ಭದ್ರನನ್ನು ತಾಯಿ ಹಿಡಿದುಕೊಂಡು ಪ್ರಸ್ತದ ಮನೆಗೆ ಕರೆದುಕೊಂಡು ಬಂದು ಸೊಸೆಯ ಕೈಯಿಂದ ಮೈದುನನಿಗೆ ಹಾಲು ಕುಡಿಸುತ್ತಾಳೆ. ಇವತ್ತಿನಿಂದ ಇವನು ನಿನ್ನ ಮಗ ಇವನ ಜವಾಬ್ದಾರಿ ನಿನ್ನ ಮೇಲೆ ಎಂದು ಹೇಳುವ ಪ್ರಸಂಗ ನಿಜಕ್ಕೂ ಮನ ಮಿಡಿಯುತ್ತದೆ. ಅತ್ತಿಗೆ ತನ್ನ ನಾದಿನಿ ಮೈದುನರನ್ನು ತನ್ನ ಮಕ್ಕಳಂತೆ ನೋಡಿಕೊಳ್ಳಲು ನಮ್ಮ ಸಮಾಜ ಬಯಸುತ್ತದೆ. ಅಣ್ಣ ತಂದೆ ಇದ್ದ ಹಾಗೆ ಇಂತಹ ಒಂದು ಸಂಸ್ಕೃತಿ ನಮ್ಮ ಜನರಲ್ಲಿ ಇದೆ. ಅತ್ತಿಗೆ ಮೈದುನರನ್ನು ಚೆನ್ನಾಗಿ ನೋಡಿಕೊಂಡ ನೋಡಿಕೊಳ್ಳದ ಹಲವಾರು ಕಥೆಗಳಿವೆ. ಕೆಲವು ಅತ್ತಿಗೆಯರು ಮೈದುನನನ್ನು ಸರಿಯಾಗಿ ನೋಡಿಕೊಳ್ಳದೆ ಮನೆಯಿಂದ ಹೊರಹಾಕಿ ಅನ್ನ ನೀರು ಕೊಡದೆ ಆಸ್ತಿ ಪಾಸ್ತಿ ಕೊಡದೆ ಸತಾಯಿಸಿದ್ದು ಇದೆ. ಆದರೂ ಹಲವು ಜನಪದ ಕಥೆಗಳಲ್ಲಿ ಅತ್ತಿಗೆ-ಮೈದುನರ ಬಗ್ಗೆ ಒಳ್ಳೆ ಪ್ರೀತಿ ಸ್ನೇಹ ವಾತ್ಸಲ್ಯದ ಕಥೆಗಳಿವೆ. ಗಂಡನಿಗೆ ಹಾಲು ಕೊಡುವ ಮುನ್ನ ಮೈದುನನಿಗೆ ಹಾಲು ನೀಡುವುದು ವಾತ್ಸಲ್ಯದ ಸಂಕೇತವೇ ಹೌದು. ಮನೆಗೆ ಬಂದ ಭದ್ರನನ್ನು ಕಾಲು ತೊಳೆದು ಬಾ, ಹಿಮ್ಮಡಿ ತೊಳೆದುಕೊಂಡು ಬಾ ಎಂದು ಗದರುವ ಅಮ್ಮ ಜನಪದ

ನಂಬಿಕೆಯನ್ನು ಮಗನಿಗೂ ಕಲಿಸಿಕೊಡುತ್ತಾಳೆ. ಅವತ್ತಿನಿಂದ ಸೊಸೆಯ ಉಡಿಗೆ ಮೈದುನನನ್ನು ಹಾಕುತ್ತಾಳೆ. ಭದ್ರನಿಗೂ ಅತ್ತಿಗೆ ಮೇಲೆ ಅಪಾರ ಗೌರವ, ತಾಯಿಯಷ್ಟೇ ಮಮತೆ ವಾತ್ಸಲ್ಯ, ಭದ್ರನಿಗೆ ಅಂದಿನಿಂದ ಎರಡನೇ ತಾಯಿ ಸಿಕ್ಕಂತೆ ಆಯಿತು. ತಾಯಿ ಮಗನನ್ನು ಗಣೆಮರ, ಕೆಟ್ಟ ಮೇಲೆ ಬುದ್ಧಿ ಬಂತು ಅಟ್ಟಿದ ಮೇಲೆ ಒಲೆ ಉರಿಯಿತು. ನಿನಗೆ ಯವಾಗ ಬುದ್ಧಿ ಬರುತ್ತೋ ಆ ನಂಜನಗೂಡಿನ ನಂಜುಂಡೇಶ್ವರನಿಗೆ ಗೊತ್ತು ಎಂದು ಹಣೆ ಹಣೆ ಚಚ್ಚಿಕೊಳ್ಳುತ್ತಾಳೆ. ಈ ಪಾತ್ರದಲ್ಲಿ ರಂಗಭೂಮಿಕಲಾವಿದೆ. ಎಂ.ವಿ. ರಾಜಮ್ಮ ಬಹಳ ಚೆನ್ನಾಗಿ ಅಭಿನಯಿಸಿದ್ದಾರೆ. ಡಾ.ರಾಜ್ ಅವರ ಸಿನಿಮಾಗಳು ಹೆಣ್ಣಿನ ಸಮಾಜಕ್ಕೆ ಗೌರವ ಕೊಡುವುದರ ಜೊತೆಗೆ ನ್ಯಾಯ ದೊರಕಿಸಿವೆ. ಸಮಾಜವನ್ನು ಕುರಿತಂತೆ ಅಂತರಂಗಕ್ಕೆ ಪ್ರಶ್ನೆ ಮಾಡಿಕೊಳ್ಳುವ ನೆಲೆಯನ್ನು ತೋರಿಸಿವೆ. ಇಲ್ಲಿ ಸ್ತ್ರೀ ಸಂವೇದನೆ ಎಂಬುದು ಸ್ತ್ರೀಯರಿಗೆ ಸಂಬಂಧಿಸಿದ್ದಲ್ಲ, ಎಲ್ಲಾ ಮಾನವ ಕುಲಕ್ಕೆ ಅರಿವನ್ನು ಮೂಡಿಸುವ ಆಶಯವಾದಿ ಚಿತ್ರಣಗಳನ್ನು ನೀಡಿವೆ.

## ೪.೬ ಡಾ.ರಾಜ್‌ಕುಮಾರ್ ಅವರ ಚಿತ್ರಗಳಲ್ಲಿ ರಸತತ್ವ

ಕನ್ನಡ ಚಲನಚಿತ್ರಗಳಲ್ಲಿ ಇತಿಹಾಸ ವಿಸ್ತೃತವಾಗಿರುವುದರಿಂದ ರಸಗಳ ಬಳಕೆಯ ಅಧ್ಯಯನವೂ ವಿಶಾಲವಾದುದು 'ಕಂಡು ಕೇಳಿದ ಅನುಭವಗಳನ್ನೂ ಹಲವು ಆಯಾಮಗಳಲ್ಲಿ ಮಾಧ್ಯಮಗಳು, ಅಭಿವ್ಯಕ್ತಿ ಪಡಿಸುವುದೇ ಕಲೆ ಹಾಗಾಗಿ ಕಲೆ ಎಂದೆನಿಸುವ ಚಲನಚಿತ್ರಗಳಲ್ಲಿ ಮನುಷ್ಯನ ಜೀವನಾನುಭವವೇ ತುಂಬಿರುತ್ತದೆ. ಕೆಲವು ಸಂದರ್ಭಗಳಲ್ಲಿ ಕಾಲ್ಪನಿಕವಾಗಿದ್ದರೂ ಅಲ್ಲಿ ಹಲವು ಭಾವಗಳ ರಸಗಳು ಬಳಕೆಯಾಗುತತವೆ. ಕೆಲವು ಚಿತ್ರಗಳಲ್ಲಿ ಒಂದೆರಡೇ ರಸಗಳು ಪ್ರಧಾನವಾಗಿರುತ್ತವೆ. ಈ ನಿಟ್ಟಿನಲ್ಲಿ ಡಾ.ರಾಜ್ ಅವರು ಅಭಿನಯದಲ್ಲಿ ಮೂಡಿಬಂದ ರಸಗಳು ಅವರ ಚಿತ್ರಗಳಲ್ಲಿ ಅವರಿಗೆ ಹೊರತು ಅಮೋಘ ಪಾತ್ರಗಳ ಮೂಲಕ ನವರಸಗಳು ನಟನೆಯಿಂದ ಧಾರೆ ಎರೆದಿದ್ದಾರೆ. ರಾಜಕುಮಾರ ಅವರ ಕಲೆ ಎಲ್ಲಾ ಕಲೆಗಳಿಂದ ಸಹೃದಯರಿಗೆ ಒದಗುವ ಒಂದು ಅನುಭವವಾಗಿದೆ. ಕನ್ನಡ ಹಿರಿಯ ಕಾದಂಬರಿಗಾರ್ತಿ ಎಂ.ಕೆ.ಇಂದಿರಾ ಅವರು ಒಮ್ಮೆ ರಾಜ್ ಕುರಿತು "ರಾಜ್‌ರಿಂದ ಹೊಮ್ಮುವ ನವರಸಗಳ ಅಭಿವ್ಯಕ್ತಿಯ ಬಗ್ಗೆ ವಿಶೇಷವಾಗಿ ಪ್ರಸ್ತಾಪಿಸುತ್ತಾ ಸಮಗ್ರ ಭಾರತದಲ್ಲಿ ನವರಸಗಳನ್ನು ರಾಜ್‌ಕುಮಾರ್ ಅವರಷ್ಟು ಸಮರ್ಥವಾಗಿ ಅಭಿವ್ಯಕ್ತಿಸಬಲ್ಲ ಮತ್ತೊಬ್ಬರನ್ನೂ ಕಾಣಲು ಸಾಧ್ಯವೇ ಇಲ್ಲ"[೬] ಎಂದು ಹೇಳುತ್ತಾರೆ.

**ಶೃಂಗಾರ ರಸ[೭] :**

ಕನ್ನಡ ಚಲನಚಿತ್ರಗಳಲ್ಲಿ ಶೃಂಗಾರ ರಸವು ಭರಪೂರವಾಗಿ ಹರಿದಾಡಿದೆ. ಭಕ್ತಿ ಪ್ರಧಾನ ಐತಿಹಾಸಿಕ, ಪೌರಾಣಿಕತೆ ಚಿತ್ರಗಳಲ್ಲಿ ಶೃಂಗಾರ ರಸವು ಗೌಣವಾದರು ಕಡ್ಡಾಯವಾಗಿ ಬಂದೇ ಬರುತ್ತವೆ. ಇನ್ನೂ ನಂತರದ ಸಾಮಾಜಿಕ ಚಲನಚಿತ್ರಗಳಲ್ಲಿ ಶೃಂಗಾರವು ಪ್ರಧಾನವಾಗಿ ಬಂದಿರುವುದನ್ನು ಗಮನಿಸಬಹುದು. ಶೃಂಗಾರ-ರಸಿಕತೆ-ಪ್ರಣಯ- ಹೀಗೆ ಅರ್ಥ ಕೂಡುತ್ತದೆ. ಇಲ್ಲಿ ಸೃಷ್ಟಿ ಕ್ರಿಯೆಯ ಮೂಲ ಧಾತುವಾದ ಈ ರಸವು ಭೂಮಿಕೆಗೆ ರಾಜ್‌ರ ಅನನ್ಯತೆ ಕಂಡು ಅವರನ್ನು ರಸಿಕರರಾಜ ಬಿರುದಿನಿಂದ ಅಲಂಕರಿಸಲಾಗಿದೆ. ರಾಜ್ ಚಿತ್ರಗಳ ಶೃಂಗಾರಮಯ ಸನ್ನಿವೇಶಗಳು ಎಷ್ಟರ ಮಟ್ಟಿಗೆ ತಮ್ಮ ನೈಜ ಪ್ರಭಾವವನ್ನು ಜನತೆಯ ಮೇಲೆ ಬೀರಿದೆ ಎನ್ನಲು ರಾಜ್‌ರೊಂದಿಗೆ ನಟಿಸಿರುವ ಜೋಡಿಗಳ ಜನಪ್ರಿಯತೆ ಸಾಕ್ಷಿಯಾಗಿದೆ.

"ಮೆಲ್ಲುಸಿರೆ ಸವಿಗಾನ ಎದೆ ಝಲ್ಲನೆ ಹೂವಿನ ಬಾಣ"

"ತುಟಿಯ ಮೇಲೆ ತುಂಟ ಕಿರುನಗೆ ಕೆನ್ನ ತುಂಬಾ ಕೆಂಡ ಸಂಪಿಗೆ"

"ಬಿಂಕದ ಸಿಂಗಾರಿ ಮೈ ಡೊಂಕಿನ ವೈಯ್ಯಾರಿ"

"ಯಾವ ಕವಿಯ ಶೃಂಗಾರ ಕಲ್ಪನೆಯೂ ಸೌಂದರ್ಯನವೆಲ್ಲವಯ್ಯ"

ಹೀಗೆ ಹಲವಾರು ಚಿತ್ರಗಳಲ್ಲಿ ಶೃಂಗಾರರಸ ಹೊರಹೊಮ್ಮಿದೆ.

**ಹಾಸ್ಯರಸ :**

ಇದು ಬಿಳಿವರ್ಣದ್ದು, ಗಣಪತಿ ಅಧಿದೇವತೆ, ಹಾಸ್ಯರಸದ ಸ್ಥಾಯಿಭಾವ ಹಾಸ್ಯ (ನಗು) "ಶೃಂಗಾರದ ಅನುಕರಣೆಯೇ ಹಾಸ್ಯ" ಹಾಗಾಗಿ ರಾಜ್‌ರ ಮೊದಲ ಚಿತ್ರ 'ಬೇಡರ ಕಣ್ಣಪ್ಪ' ದಲ್ಲಿ ರಾಜ್ ಜೊತೆಯಾಗಿ ನಟಿಸಿದ ಹಾಸ್ಯ ಚಕ್ರವರ್ತಿ, ಅಮರ ಹಾಸ್ಯ ಕಲಾವಿದ ದಿ.ನರಸಿಂಹರಾಜ ಅವರ ಸೇವೆಯನ್ನು ರಾಜ್ ಚಿತ್ರಗಳ ಹಾಸ್ಯ ಸನ್ನಿವೇಶಗಳ ದೃಷ್ಟಿಯಿಂದ ನೆನೆಯಬೇಕಾಗುತ್ತದೆ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಜಾನಪದ, ಈ ಎಲ್ಲಾ ವಿಭಾಗಗಳಿಂದಲೂ ನರಸಿಂಹರಾಜ್, ರಾಜ್ ಚಿತ್ರಗಳಲ್ಲಿ ಖಾಯಂ ಹಾಸ್ಯಗಾರರಾಗಿದ್ದಾರೆ. ಡಾ.ರಾಜ್ ಶ್ರೀಕೃಷ್ಣದೇವರಾಯರಾಗಿ ತೆರೆಯಲ್ಲಿ ಅಖಂಡವಾಗಿ ವಿಜೃಂಭಿಸಿದರೆ ಆಸ್ಥಾನದ ವಿಕಟಕವಿಯಾಗಿ ತೆನಾಲಿ ರಾಮಕೃಷ್ಣ ಪಾತ್ರದಲ್ಲಿ ಮಿಂಚಿದರು. ನರಸಿಂಹರಾಜು ಹಾಗೆಯೇ ಪ್ರಾರಂಭದ ದಿನಗಳಲ್ಲಿ ಕನ್ನಡ ಚಲನಚಿತ್ರವು ಪೌರಾಣಿಕ ಐತಿಹಾಸಿಕ ಅಂಶವನ್ನೇ ಆಯ್ಕೆ ಮಾಡಿಕೊಂಡರೂ ನಡು ನಡುವೆ ಹಾಸ್ಯದ ಸಿಂಚನವನ್ನು ಮಾಡುತ್ತಿತ್ತು. ಇಲ್ಲಿ ಬರುವ ಪಾತ್ರಗಳ ಉಡುಗೆ ತೊಡುಗೆ ಮಾತುಗಳಿಂದಲೇ ಪ್ರೇಕ್ಷಕರಲ್ಲಿ ನಗು ತರುತ್ತಿತ್ತು. ನಂತರ ಸಾಮಾಜಿಕ ಚಲನಚಿತ್ರಗಳಲ್ಲಿ ಕರುಣಾರಸವೇ ಅತಿಯಾದಾಗ ಪ್ರೇಕ್ಷಕರಲ್ಲಿ ಬದಲಾವಣೆ ತರಲೆಂದೇ ಹಾಸ್ಯರಸವನ್ನು ತರಲಾಗುತ್ತಿತ್ತು. ಇದು ಕೆಲವು ಚಿತ್ರಗಳಲ್ಲಿ ಅಸಾಂದರ್ಭಿಕವೂ ಎನಿಸದಿರಲಾರದು. ರಾಜ್ ಅಭಿನಯದ ಮೊದಲ ಪೂರ್ಣ ಹಾಸ್ಯಮಯ ಚಿತ್ರವೆಂದರೆ ಲಗ್ನಪತ್ರಿಕೆ. ಈ ಚಿತ್ರದ ಸೀನು ಸುಬ್ಬು ಗೀತೆ ನಾವುಗಳು ಕಂಡಂತೆ ಸಂಗೀತ ಗೀತೆಗಳು ಹಾಸ್ಯಕ್ಕೆ ಒತ್ತು ನೀಡಿವೆ. 'ತಾಯಿಗೆ ತಕ್ಕ ಮಗ' ಚಿತ್ರದ ಪೂರ್ವಾರ್ಧದಲ್ಲಿ ರಾಜ್‌ರ ಹಾಸ್ಯ ಪ್ರವೃತ್ತಿಯು ಚಿರನೂತನ ನೆನಪಾಗಿದೆ. 'ಹಾವಿನ ಹೆಡೆ'ಯೆ ಆರಂಭದಲ್ಲಿ ಭೀಮನ ಪಾತ್ರಧಾರಿ ರಾಜ್ ವೇದಿಕೆಯಿಂದ ಇಳಿದ ನಾಟಕ ನೋಡುವ ಕೀಟಲೆ ಪ್ರೇಕ್ಷಕನಿಗೆ ಗೂಸ ನೀಡುವ ದೃಶ್ಯವಂತೂ ನಗಿಸಿ ಸುಸ್ತು ಮಾಡಿದೆ.

ಹಾಸ್ಯರಸವು ಮನುಷ್ಯನ ಜೀವನಕ್ಕೆ ಸಂಜೀವಿನಿ ಇದ್ದಂತೆ. ಮಗುವು ಮನುಷ್ಯನ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಪೂರಕವಾದದ್ದು. ಆದರೆ ನಿರ್ದೇಶಕರು, ಕಥೆ, ಚಿತ್ರಕಥೆ, ಸಂಭಾಷಣಾಕಾರರು ಇಲ್ಲಿ ಜಾಗ್ರತೆಯನ್ನು ವಹಿಸಬೇಕು ಹಾಸ್ಯವು ಬೇರೆಯವರ ಮನಸ್ಸಿನ ಮೂಲೆ ವ್ಯತಿರಿಕ್ತ ಪರಿಣಾಮವನ್ನು ಬೀರುವಂತಿರಬಾರದು.

**ಕರುಣ ರಸ :**

ಇದರ ವರ್ಣ ಕಪ್ಪು, ಅಧಿದೇವತೆ ಯಮ ಕರುಣ ರಸದ ಸ್ಥಾಯಿಭಾವ ಶೋಕ ಕರುಣಾ ರಸದಲ್ಲಿ ಹೃದಯ ಸಂವಾದ ಬಲದಿಂದ ಶೋಕವನ್ನು ಕೇವಲ ಶೋಕ ರೂಪದಲ್ಲಿ ಅನುಭವಿಸುತ್ತವೆ. ಹಾಗಾಗಿ ಕನ್ನಡ ಚಲನಚಿತ್ರಗಳಲ್ಲಿ ಕರುಣ ರಸವು ಮಹತ್ವದ ಸ್ಥಾನವನ್ನು ಪಡೆದಿದೆ. ಕರುಣ ರಸದ ಹೊಳೆಯಲ್ಲಿ

ಮೀಯಿಸುವ ಸತ್ಯ ಹರಿಶ್ಚಂದ್ರ ಸತ್ಯ ನಿಷ್ಠ ಪಾತ್ರದ ಪರಾಕಾಷ್ಠೆಯ ದೃಶ್ಯ ಸತ್ಯಕ್ಕಾಗಿ ಸಕಲವನ್ನು ತೊರೆದು ಸ್ಮಶಾನ ಕಾಯುವ ಸ್ಥಿತಿಗೆ ಬಂದ ಹರಿಶ್ಚಂದ್ರನ ಬಳಿಗೆ ಬಂದ ಅದಾಗಲೇ ದಾಸಿಯಾಗಿ ವಿಕ್ರಯಿಸಲ್ಪಟ್ಟ ಪತ್ನಿ ಚಂದ್ರಮತಿಯು ಹಾವು ಕಡಿದು ಸತ್ತ ಏಕೈಕ ಪುತ್ರನ ಶವ ಸಂಸ್ಕಾರಕ್ಕಾಗಿ ಪತಿ ಎಂದು ತಿಳಿಯದೆ ಅಂಗಲಾಚುವ ದೃಶ್ಯ ಕರುಣ ರಸದ ಧಾರೆಯೂ ಹೌದು. ದೀನ ನಾನು ಸಮಸ್ತ ಲೋಕಕೆ ದಾನಿ ನೀನು... ಬಾಗಿಲು ತೆರೆದು ಸೇವೆಯನ್ನು ಕೊಡೊ ಹರಿಯೆ... ಕನಕದಾಸರ ಈ ಕೃತಿಯನ್ನು ರಾಜ್ ಶೀಲತೆಯ ಒಂದೊಂದು ಪದದ ಅಭಿವ್ಯಕ್ತಿಯಲ್ಲಿಯೂ ಕರುಣೆಯ ಇಂಗಿತವನ್ನು ಪ್ರದರ್ಶಿಸಿದ್ದಾರೆ. ಕಸ್ತೂರಿನಿವಾಸದ ಅಂತ್ಯದ ದೃಶ್ಯಗಳಲ್ಲಿಯಂತು ರಾಜ್ ಕರುಣಾರಸಕ್ಕೆ ಒಂದೊಂದು ಘಳಿಕೆಯಲ್ಲಿಯೂ ಸ್ಪಷ್ಟ ದೃಷ್ಟಾಂತವಾಗುತ್ತಾ ಸಾಗುತ್ತದೆ. 'ಆಡಿಸಿದಾತ ಬೇಸರ ಮೂಡಿ ಆಟ ಮುಗಿಸಿದ' ಹೀಗೆ ಇಂಥ ಒಂದು ಮನೋಜ್ಞ ಅಭಿವ್ಯಕ್ತಿಯ ಸಶಕ್ತ ಪ್ರಕಟ ಎನಿಸಿದೆ. ರಾಜ್ ಪ್ರಾಣ ಹರಣದ ಕೊನೆಯ ದೃಶ್ಯವಂತೂ ಪ್ರೇಕ್ಷಕರ ಹೃದಯವನ್ನು ಕರುಣ ರಸದಲ್ಲಿ ಮೀಯಿಸಿ ಬಿಡುತ್ತದೆ.

**ರೌದ್ರರಸ :**

ಇದರ ವರ್ಣ, ಕೆಂಪು ರಕ್ತ, ಈಶ್ವರ ಅಧಿದೇವತೆ ರೌದ್ರರಸದ ಸ್ಥಾಯಿಭಾವ ಕ್ರೋಧವಾಗಿದೆ. ಕನ್ನಡ ಚಲನಚಿತ್ರಗಳ ಪ್ರಾರಂಭದ ದಿನಗಳ ಪೌರಾಣಿಕ ಕಥೆಯನ್ನಾಧರಿಸಿದೆ. ಹಾಗೆ ರಾಜ್ ಅವರ ಪಾರ್ವತಿ ಕಲ್ಯಾಣ ಚಿತ್ರದಲ್ಲಿ ಪರಶಿವನಾಗಿ ರಾಜ್ ಪತ್ನಿ ಪಾರ್ವತಿ ವರು ಮನೆಯಲ್ಲಿ ತಂದೆಯಿಂದ ಅಪಮಾನಿತಳಾಗಿ ಅಗ್ನಿಪ್ರವೇಶ ಮಾಡಿದ ಸುದ್ದಿಯನ್ನು ತಿಳಿದಾಕ್ಷಣ ತೋರಿರುವ ಕ್ರೌರ್ಯತೆ ಉಲ್ಲೇಖವೆಂದು ಕೇಳಬಹುದು. ಬಬ್ರುವಾಹನದಲ್ಲಿ ತಂದೆ ಅರ್ಜುನನಿಂದಲೇ ಅಪಮಾನಿತನಾದ ಮಗ ಬಬ್ರುವಾಹನ ವೀರಪ್ರತಿಜ್ಞೆಯನ್ನು ಮಾಡಿ ರಣರಂಗದಲ್ಲಿ ತಕ್ಕ ಉತ್ತರವನ್ನು ಎದುರಿಸು ಎಂದವನೇ ತಾಯಿಯ ಬಳಿ ಹಿಂತಿರುಗುತ್ತಾನೆ. ತಂದೆ ಮಕ್ಕಳ ಆಗಮನ ನಿರೀಕ್ಷೆಯಲ್ಲಿ ತಾಯಿ ಕುರಿತು ಅಮ್ಮಾ ಎಂದು ಹೇಳುವ ಪರವಾಗಿದೆ. ರಣರಂಗದಲ್ಲಿ ತಂದೆಯನ್ನು ಯಾರು ತಿಳಿಯರು ನಿನ್ನ ಭುಜಬಲದ ಪರಾಕ್ರಮ... ಎಂದು ಹೇಳಲಾಗಿರುತ್ತದೆ.

**ವೀರರಸ :**

ವೀರರಸದ ಶಬ್ದಾನುಭಾವ ಉತ್ಸಾಹ ಪೌರುಷವನ್ನು ಅಭಿವ್ಯಕ್ತಿಸುವ ಕ್ಷಾತ್ರಗುಣ ಧಮನವನ್ನು ವೀರರಸ ಬಹುಶಃ ನವರಸಗಳಲ್ಲಿಯೇ ಶ್ರೇಷ್ಠ ಎಂದು ಹೇಳುತ್ತಾರೆ. ರಾಜಕುಮಾರ ನಟಿಸಿರುವ ರಣಧೀರ ಕಂಠೀರವ, ಇಮ್ಮಡಿ ಪುಲಿಕೇಶಿ, ಶ್ರೀಕೃಷ್ಣದೇವರಾಯ, ಮಯೂರ, ಹುಲಿಯ ಹಾಲಿನ ಮೇವು, ಈ ಚಿತ್ರಗಳು ನಮ್ಮ ಉಜ್ವಲ ಐತಿಹಾಸಿಕ ವೀರರನ್ನು ಸಾಕ್ಷಾತ್ಕರಿಸಿದ ಬೃಹತ್ ಕಥೆಗಳಾಗಿವೆ. ಹಾಗೆಯೇ ದಯೆ-ದಾನದ ಪಾತ್ರಗಳು ಸತ್ಯಹರಿಶ್ಚಂದ್ರ ಕಸ್ತೂರಿ ನಿವಾಸದಿಂದ ಆಧುನಿಕ ಕರ್ಣನವರೆಗೆ ವ್ಯಾಪಿಸಿದೆ. ಇಂತಹ ಚಿತ್ರಗಳು ಬಹುಪಾಲು ಜನತೆಯಲ್ಲಿ ದಯೆ ದಾನದ ಮನೋಭಾವವನ್ನು ವೃದ್ಧಿಸಿದೆ. ಇನ್ನು ರಕ್ತದಾನ, ನೇತ್ರದಾನ, ಅಂಗಾಂಗಳ ದಾನದ ಅಂಶಗಳನ್ನು ಚಿತ್ರದಲ್ಲಿ ಮೂಡಿ ಜಾಗೃತಿ ಉಂಟು ಮಾಡಿವೆ.

**ಭಯಾನಕ ರಸ :**

ಇದರ ವರ್ಣ ಕಪ್ಪು ಭಯ ಸ್ಥಾಯಿಭಾವವಾಗಿದೆ. ಮೋಹಿನಿ, ಪಿಶಾಚಿ, ಭೂತ, ಕ್ರೂರಮೃಗಗಳು ಇವುಗಳ ಅನೇಕ ಒಳಗೊಂಡಿವೆ. ಪ್ರೇಮದ ಕಾಣಿಕೆಯಲ್ಲಿ ಆರತಿಯ ಅಭಿನಯದ ಮೂಲಕ ಮೊದಲಿಂದಲೇ ಭಯಾನಕತೆ ಕಾಡುತ್ತಲೇ ಬರುತ್ತದೆ. ಕೊಲೆಯ ನಿಗೂಢತೆಯ ಪತ್ತೆಯಾಗುವ ತನಕ ಭಯದ ವಾತಾವರಣ ಸನ್ನಿವೇಶದಿಂದ ಸನ್ನಿವೇಶಕ್ಕೆ ಹೆಪ್ಪು ಗಟ್ಟುತ್ತಲೇ ಹೋಗುತ್ತದೆ. ಅದೇ ಕಣ್ಣು, ಅದೇ ಕಣ್ಣು, ಬೇಟೆ ಆಡುತಿದೆ ಭಯ ತುಂಬಿದೆ ಭಯ ತುಂಬಿದೆ. ಗೀತೆಯ ಸಾಲುಗಳಲ್ಲಿ ಭಯವೇ ತುಂಬಿಕೊಂಡಿದೆ. ಇನ್ನೂ ಅನೇಕ ಚಿತ್ರಗಳಲ್ಲಿ ಭಯವನ್ನು ರಾಜ್ ಅವರು ಚೆನ್ನಾಗಿ ನಿಭಾಯಿಸಿದ್ದಾರೆ.

**ಭೀಭತ್ಸ ರಸ :**

ಇದರ ಜಿಗುಪ್ಸೆ ಸ್ಥಾಯಿಭಾವವಾಗಿದೆ. ಇಲ್ಲ ಹಿಂಸೆ ರಕ್ತಪಾತದಿಂದ ಭೀಭತ್ಸ ವ್ಯಕ್ತಿಯು ಪಶ್ಚಾತ್ತಾಪ ಪಡುವುದನ್ನು ನೋಡಿದ ಪ್ರೇಕ್ಷಕ ತಪ್ಪು ಮಾಡುವ ಮೊದಲು ಯೋಚಿಸುವಂತೆ ಮಾಡುತ್ತದೆ. ರಾಜ್ ಚಿತ್ರಗಳಲ್ಲಿ–ಭೀಭತ್ಸವವನ್ನು ಗುರುತಿಸುವುದಾದರೆ ಮೊದಲ ಚಿತ್ರ ಬೇಡರ ಕಣ್ಣಪ್ಪನಿಂದಲೇ ಮೊದಲು ಮಾಡಬಹುದು ಮುಗ್ಧವಾದ ಶಿವಭಕ್ತ ದಿಣ್ಣ ಶಿವನ ಕಣ್ಣಿಗೆ ಪ್ರತಿಯಾಗಿ ತನ್ನ ಕಣ್ಣನ್ನೇ ಬಾಣದಿಂದ ಕಿತ್ತು ರಕ್ತಸಿಕ್ತವಾಗಿ ನೀಡುವುದು ಈ ಚಿತ್ರದಲ್ಲಿ ಕಾಣಬಹುದು. ಐತಿಹಾಸಿಕ ಶ್ರೀಕೃಷ್ಣ ದೇವರಾಯದಲ್ಲಿನ ಮಹಾಮೂರ್ತಿ, ಕಣ್ಣನ್ನು ಕೀಳಿಸುವ ಭೀಭತ್ಸ ದೃಶ್ಯವಿದೆ. ಹೀಗೆ ಹಲವು ಚಿತ್ರದಲ್ಲಿ ರಾಜ್ ಅವರ ದರ್ಶನಗಳು ಇದೆ.

**ಅದ್ಭುತ ರಸ :**

ವಿಸ್ಮಯ ಸ್ಥಾಯಿಭಾವವಾಗಿದೆ. ಕನ್ನಡದ ಪೌರಾಣಿಕ ಚಿತ್ರಗಳಲ್ಲಿ ವಿಸ್ಮಯದ ದೃಶ್ಯಗಳು ಹೇರಳವಾಗಿವೆ. ಹೀಗೆ ಶಂಕರ್‌ನಾಗ್ ನಿರ್ದೇಶನದ ಒಂದು ಮುತ್ತಿನ ಕಥೆ ಯಲ್ಲಿ ಮಾಲ್ಡೀವ್ಸ್ ದ್ವೀಪ ಸಾಗರದಲ್ಲಿ ಕೃತಕ ಉಸಿರಾಟದ ಸಂಪರ್ಕವಿಲ್ಲದೆ ರಾಜ್ ಉಸಿರು ಬಿಗಿಹಿಡಿದು ಅಕ್ಟೋಪಸ್‌ನೊಂದಿಗೆ ಹೊಡೆದಾಡುವ ದೃಶ್ಯ ಚಿತ್ರರಂಗದಲ್ಲಿ ಇತಿಹಾಸದಲ್ಲಿ ಅತ್ಯಂತ ಅದ್ಭುತವೆನಿಸಿದೆ.

**ಶಾಂತರಸ :**

ಶಮ ಸ್ಥಾಯಿಭಾವವಾಗಿದೆ. ಇಲ್ಲಿ ಶಾಂತರಸವು ಕನ್ನಡ ಚಲನಚಿತ್ರಗಳಲ್ಲಿ ಅತೀ ಪ್ರಾಚೀನವೆನ್ನಬಹುದು. ಏಕೆಂದರೆ ಚಿತ್ರಗಳು ಪ್ರಾರಂಭದಿಂದ ಮೂಕಿಯಿಂದ ಟಾಕಿಯವರೆಗೆ ತತ್ವ ಒಳವುನಿಂದ ಕೂಡಿದೆ. ರಾಜ್ ಅಭಿನಯದ ಬೇಡರ ಕಣ್ಣಪ್ಪ 'ವಾಲ್ಮೀಕಿ', ಚಂದ್ರಕುಮಾರ, ಸತಿ ಅನಸೂಯ, ಸತಿಸಾವಿತ್ರಿ, ಭಕ್ತ ಪ್ರಹ್ಲಾದ ಇನ್ನು ಶಾಂತಿರಸ ಒಳಗೊಂಡಿದೆ.

ಇದಕ್ಕೆ ಕಾರಣ ಕಾರ್ಯ ನಿಷ್ಠೆ ಒಲವು ಭಾಷೆಯ ಒಲವು ಆಗಿತ್ತು. ಈ ನಿಟ್ಟಿನಲ್ಲಿ ಡಾ.ರಾಜ್ ಅವರು ತಮ್ಮ ಕಲಾ ಸೇವೆಯಲ್ಲಿ ನವರಸಗಳನ್ನು ನಿರ್ಮಾಣ ಮಾಡಿದ್ದಾರೆ.

**ಕೊನೆ ಟಿಪ್ಪಣಿ :**

೧. ರಾಜಾಂತರಂಗ (ಸಂ) ಗೌರಿ ಸುಂದರ್ : ಪುಟ-೫೨
೨. ಸನಾದಿ ಅಪ್ಪಣ್ಣ ಕೃಷ್ಣಮೂರ್ತಿ ಪುರಾಣಿಕ ಪುಟ-೧೭೦
೩. ಅ.ನಾ.ಪ್ರಹ್ಲಾದ ರಾವ್ 'ಪ್ರಾಣಪದಕ' ಪುಟ-೧೭
೪. ಗೌರಿ ಸುಂದರ್ (ಸಂ) ರಾಜಾಂತರಂಗ) ಪುಟ ಮುನ್ನುಡಿ
೫. ಜಗನ್ನಾಥ ಬಹುಳೆ.ಎಸ್., 'ವರನಟ' ಪುಟ-೧೨೪
೬. ಅದೇ ಪುಸ್ತಕ, ಪುಟ-೯೭
೭ ಅದೇ ಪುಸ್ತಕ, ಪುಟ-೯೭
೮. ಅದೇ ಪುಸ್ತಕ, ಪುಟ-೧೦೫
೯. ಅದೇ ಪುಸ್ತಕ, ಪುಟ-೧೦೦
೧೦. ಪ್ರಹ್ಲಾದ್‌ರಾವ್.ಅ.ನಾ., ಬಂಗಾರದ ಮನುಷ್ಯ, ಪು.ಸಂ-೪೯
೧೧. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯ ಕೋಶ, ಪು.ಸಂ-೨೫೦
೧೨. ಜಗನ್ನಾಥ ಬಹುಳೆ.ಎಸ್., 'ವರನಟ' ಪುಟ-೧೯
೧೩. ಜಗನ್ನಾಥ ಬಹುಳೆ.ಎಸ್., 'ವರನಟ' ಪುಟ-೧೬

**ಅಧ್ಯಾಯ : ಐದು**

**ಡಾ.ರಾಜ್‌ಕುಮಾರ್ ಸಿನಿಮಾಗಳು : ಪ್ರಭಾವ ಮತ್ತು ಪ್ರೇರಣೆಗಳು**

೫.೧ ಡಾ.ರಾಜ್‌ಕುಮಾರ್ ಅವರು ಕನ್ನಡ ಚಳುವಳಿಗಳಲ್ಲಿ ತೊಡಗಿರುವ ಪ್ರಕ್ರಿಯೆ

೫.೨ ರಾಜ್‌ರ ಚಿತ್ರಗಳಲ್ಲಿ ಕನ್ನಡ ಪ್ರಜ್ಞೆ ಮತ್ತು ಜನಪದ ನೋಟ

೫.೩ ರಾಜ್ ಅವರು ಕನ್ನಡ ಉಚ್ಚಾರಣೆ

೫.೪ ನಾಡೋಜ ರಾಜ್‌ಕುಮಾರ್ ಅವರ ಸಿನಿಮಾಗಳಲ್ಲಿ ಸಾಮಾಜಿಕ ಅನನ್ಯತೆ ಮತ್ತು ಅನ್ಯಭಾಷೆಯ ಚಿತ್ರಗಳ ಮೇಲೆ ಪ್ರಭಾವ

೫.೪.೧ ಅನ್ಯಭಾಷೆಯ ಚಲನಚಿತ್ರ ನಟರ ಮೇಲೆ ರಾಜ್ ಅವರ ಪ್ರಭಾವ

೫.೪.೨ ಅನ್ಯಭಾಷಾ ಚಲನಚಿತ್ರಗಳ ಮೇಲೆ ರಾಜ್ ಅವರ ಪ್ರಭಾವ

# ಅಧ್ಯಾಯ-೫
# ಡಾ.ರಾಜಕುಮಾರ ಸಿನಿಮಾಗಳು ಪ್ರಭಾವ ಮತ್ತು ಪ್ರೇರಣೆಗಳು

ಡಾ.ರಾಜಕುಮಾರ ಅವರ ಸಿನಿಮಾಗಳು ಜನರಲ್ಲಿ ಯಾವ ರೀತಿಯ ಮನಸ್ಥಿತಿಯಲ್ಲಿ ಒಡಮೂಡಿವೆ. ಎಂಬುದಕ್ಕೆ ಅವರ ಸಿನಿಮಾಗಳು ಒಡಹುಟ್ಟಿದವರು, ಸಂಪತ್ತಿಗೆ ಸವಾಲು, ನಾನಿನ್ನ ಮರೆಯಲಾರೆ, ಬಬ್ರುವಾಹನ, ಮಯೂರ, ಬಂಗಾರದ ಮನುಷ್ಯ, ಇನ್ನೂ ಅನೇಕ ಸಿನಿಮಾಗಳನ್ನು ಗಮನಿಸಬಹುದು. ತೆಲುಗಿನಲ್ಲಿ ಎನ್.ಟಿ.ಆರ್. ಹೇಗೆಯೋ ಹಾಗೆಯೇ ರಾಜ್ ಅವರು ಕೂಡ ಕನ್ನಡಿಗರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದ್ದಾರೆ. ರಾಜ್ ಅವರ ಶ್ರೀಕೃಷ್ಣದೇವರಾಯ ಸಿನಿಮಾ ಚಾರಿತ್ರಿಕ, ಸಾಮಾಜಿಕ, ರಾಜಕೀಯ ಹಿನ್ನೆಲೆಯಲ್ಲಿ ನೋಡುವುದು ಸೂಕ್ತವಾಗಿದೆ. ನಾವುಗಳು ಓದುಗರರಾಗಿ ಶ್ರೀಕೃಷ್ಣದೇವರಾಯ ಚರಿತ್ರೆಯನ್ನು ತಿಳಿದಿರಬಹುದು ಅಥವಾ ಗಮನಿಸಿರಬಹುದು. ಶ್ರೀಕೃಷ್ಣದೇವರಾಯನನ್ನು ನೋಡಿಲ್ಲ. ಆದರೆ ಶ್ರೀಕೃಷ್ಣದೇವರಾಯ ಸಿನಿಮಾ ಮೂಲಕ ರಾಜಕುಮಾರನನ್ನು ಕಾಣುತ್ತೇವೆ. ರಾಜಕುಮಾರನ ಮೂಲಕ ಶ್ರೀಕೃಷ್ಣದೇವರಾನ ಮುಖಸ್ಥಿತಿಯನ್ನು ನಮ್ಮ ಮನಸ್ಸಿನಲ್ಲಿ ಉಳಿದುಕೊಂಡಿರುತ್ತದೆ. ಇಲ್ಲಿ ಅರ್ಥಮಾಡಿಕೊಳ್ಳುವುದು ನಮ್ಮ ನಾಡಿನ ಚಾರಿತ್ರಿಕ ಅಂಶವನ್ನು ತಿಳಿಯಬೇಕಾದರೆ ಒಂದು ಸಿನಿಮಾ. ನಟನೆಯ ಸಾಂದರ್ಭಿಕ ಹಿನ್ನೆಲೆಯಾಗಿ ಅರ್ಥ ಮಾಡಿಕೊಳ್ಳುತ್ತೇವೆ. ಬಸವಣ್ಣ ವಚನಗಳು ಎಷ್ಟೊಂದು ಶ್ರೇಷ್ಠವಾಗಿವೆ. ಆದರೆ ಬಸವಣ್ಣ ವ್ಯಕ್ತಿಯ ಛಾಯಾಚಿತ್ರ ಕಲಾವಿದನ ಮೂಲಕ ನಮ್ಮಲ್ಲಿ ಉಳಿದುಕೊಂಡಿದೆ. ಹೀಗಾಗಿ ಒಬ್ಬ ಮನುಷ್ಯನ ವ್ಯಕ್ತಿತ್ವ ಅವನ ಮಾತಿನ ಮೂಲಕ ತಿಳಿಯಬಹುದು. ಹಾಗಾಗಿ ರಾಜಕುಮಾರ್ ವ್ಯಕ್ತಿತ್ವ ಸಿನಿಮಾದಲ್ಲಿ ಹೇಗಿತ್ತೋ ನಿಜಜೀವನದಲ್ಲಿ ಕೂಡ ಅಷ್ಟು ಮಹತ್ವ ಹೊಂದಿತ್ತು. ಹೀಗಾಗಿ ರಾಜ್ ನಮ್ಮನ್ನು ಅಗಲಿದರೂ ಅವರ ವ್ಯಕ್ತಿತ್ವ, ನಡತೆ, ಜೀವನ, ಅವರ ಸಿನಿಮಾಗಳು ಕೂಡ ಜನರಲ್ಲಿ ರಕ್ತಗತವಾಗಿ ಉಳಿದುಕೊಂಡಿದೆ. ಪ್ರಸ್ತುತ ರಾಜಕುಮಾರ್ ಅವರನ್ನು ಅವರ ಮಕ್ಕಳಲ್ಲಿ ನೋಡುವುದು

ಅಸಾಧ್ಯ. ಆದರೆ ರಾಜ್‌ರ ವ್ಯಕ್ತಿತ್ವವನ್ನು ಇನ್ನೊಬ್ಬರಿಗೆ ಹೋಲಿಸಲಾಗದು. ಅವರ ಹಲವು ಸಾಮಾಜಿಕ ನಿಲುವಿನ ಸಿನಿಮಾಗಳು ಜನರಲ್ಲಿ ತಮ್ಮ ಜೀವನದ ಒಂದು ಭಾಗ ಎಂದು ತಿಳಿದುಕೊಂಡವರು ಇದ್ದಾರೆ. ಅದು ಹೇಗೆಂದರೆ ೮೦ರ ದಶಕದಲ್ಲಿ ಸಮಾಜಮುಖಿಯಾದ ಅಂಶಗಳು ಮನೆತನದ ಜವಾಬ್ದಾರಿಯ ಅವಿಭಕ್ತ ಕುಟುಂಬ ಪರಿಕಲ್ಪನೆಯ ಸಿನಿಮಾಗಳು ಹೆಚ್ಚಾಗಿ ಬಂದವು. ಇದರಿಂದ ಜನರು ರಾಜಣ್ಣ ನವರನ್ನು ಮೆಚ್ಚಿಕೊಂಡರು ಮತ್ತು ಆನಂದಿಸಿದರು. ಅವರ ಸಿನಿಮಾಗಳ ಆಯ್ಕೆ, ತಮ್ಮ ಜೊತೆಗಾರನನ್ನು ಪ್ರೀತಿಸುವ ಮನೋಭಾವ ಅವರಲ್ಲಿತ್ತು ಎಂಬುದು ಗಮನಿಸಬಹುದು. ಡಾ.ರಾಜ್ ಅವರು ನಿಧನದ ಸುದ್ಧಿ ತಿಳಿಯುತ್ತಿದ್ದರಂತೆ ಹಲವು ಜನರು ಪ್ರತಿಭಟನೆಗೆ ಇಳಿದಿದ್ದರು. ಅವರು ನಮ್ಮಿಂದ ದೂರವಾದರೂ ಎಂಬ ಭಾವನೆ ಒಂದು ಕಡೆ ಇದ್ದರೆ ಇನ್ನೊಂದು ಕಡೆ ಅಂದಿನ ಸರಕಾರಗಳು ಒಬ್ಬ ಪ್ರಸಿದ್ಧ ನಟನ ಬಗ್ಗೆ ತಿರಸ್ಕಾರ ಮಾಡಿದ್ದಾರೆ ಎಂಬುದು ಜನರಲ್ಲಿ ಕಾಡಿರಬಹುದು. ಈ ಎಲ್ಲಾ ಹಿನ್ನೆಲೆಯಿಂದ ಡಾ.ರಾಜ್ ಅವರ ಸವಿನೆನಪು ಅವಿಸ್ಮರಣೀಯವಾಗಿದೆ. ೭೦-೮೦ರ ದಶಕದಲ್ಲಿ ರಾಜ್ ಅವರ ಸಿನಿಮಾಗಳು ಹೇಗೆಂದರೆ ಕೆ.ಪ್ರವೀಣ್‌ನಾಯಕ್ ಅವರು ಹೇಳುವಂತೆ "ಬೆಂಗಳೂರಿನಲ್ಲಿ ರಾಜ್‌ಕುಮಾರ ಚಿತ್ರಗಳು ಬಿಡುಗಡೆಯಾದಾಗ ಹಬ್ಬದ ವಾತಾವರಣ, ಅಭಿಮಾನಿಗಳ ಭರಾಟೆ-ಗಲಾಟೆ, ಸ್ಟಾರ್‌ಗಳನ್ನು ಕಟ್ಟಿಕೊಂಡು ಬೀದಿ ಬೀದಿಯಲ್ಲಿ ಅಭಿಮಾನಿಗಳ ಮೆರವಣಿಗೆ, ಮೆಜೆಸ್ಟಿಕ್‌ನಲ್ಲಿ ಪ್ರಕ್ಷುಬ್ಧ ಪರಿಸ್ಥಿತಿ, ಟಿಕೆಟ್ ಸಿಗದ ಅಭಿಮಾನಿಗಳಿಂದ ಕಲ್ಲುತೂರಾಟ, ಪೋಲಿಸರಿಂದ ಲಾಠಿಚಾರ್ಜ್ ಇವೆಲ್ಲವನ್ನೂ ಬೆಕ್ಕಸಬೆರಗಾಗಿ ನೋಡುತ್ತಿದ್ದೆ"[೧] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಜನರು ಅಥವಾ ಸಮಾಜ ಸಿನಿಮಾದಿಂದ ಹಾಗೂ ಒಬ್ಬ ನಟನ ಮೂಲಕ ಏನನ್ನೋ ಅಪೇಕ್ಷಿಪಡುತ್ತದೆ ಎಂಬುದು ರಾಜರ ಸಿನಿಮಾಗಳ ಪ್ರಭಾವಗಳು ಕಾರಣವಾಗಿವೆ.

ಹಾಗೆಯೇ ಕನ್ನಡ ಚಿತ್ರರಂಗದ ತುಂಬೆಲ್ಲಾ ರಾಜ್ ಪ್ರಭಾವಳಿ ನಿರಂತರ ವ್ಯಾಪಿಸಿಕೊಂಡಿದೆ. ಅವಲೋಕನಕ್ಕೆ ಹೊರಟರೆ ಖುಷಿಯ ಅನುಭವಗಳೇ ಹೆಚ್ಚಾಗಿ ಕಂಡುಬಂದಿದೆ. ದೇವರಗುಡಿ ಚಿತ್ರದಲ್ಲಿ ನವಜೋಡಿಗಳಾದ ವಿಷ್ಣು-ಭಾರತಿ ಜೊತೆಗೂಡಿ ಸಿನಿಮಾ ನೋಡುತ್ತಾರೆ. ಆ ಸನ್ನಿವೇಶ "ಮೆಲ್ಲಿಗೆ ನಡೆ ಮೆಲ್ಲಿಗೆ ಈ ಕೋಪವೇಕೆ ಚಿನ್ನಾ"[೨] ಎಂದು ರಾಜ್ ಹಾಡುವ ಚೂರಿ ಚಿಕ್ಕಣ್ಣ ಚಿತ್ರದ ಗೀತೆ, "ಹಾಯಾಗಿದೆ ಈ ತನುಮನ ಹಗುರವಾಗಿದೆ"[೩] ಎಂಬ ರಾಜ್-ಭಾರತಿ ಜೋಡಿಯೂ ನಿಲ್ಲಿಸಿ ನೋಡುಗರ ಪ್ರತಿಯೊಬ್ಬರಲ್ಲಿ ಮನೆಮಾಡುವಂತೆ ತಲ್ಲಿಸಿದೆ. ಅಂಬರೀಷ್ ಪತ್ರಕರ್ತರಾಗಿ ಅಭಿನಯಿಸಿರುವ "ಒಂಟಿ ಧ್ವನಿ" ಸಿನಿಮಾದಲ್ಲಿ ತಂಗಿ ರಾಜ್‌ರವರ ಅಭಿಮಾನಿ ತಂಗಿಗಾಗಿ ಹಾಡುವ ಗೀತೆಯೊಂದರಲ್ಲಿ ರಾಜ್‌ರ ಚಿತ್ರಗಳು ಹೆಸರುಗಳನ್ನು ಆಧರಿಸಿಯೇ ನೋಡಿ ಹೆಣೆಯಲಾಗಿದೆ. ಅಂಬರೀಷ್ ಚಿತ್ರಗಳಲ್ಲಿ ರಾಜ್‌ರ ದೃಶ್ಯ ಕಲ್ಪನೆಗಳ ಛಾಯೆ ಕಂಡುಬಂದಿವೆ. ರಾಜ್‌ರ ಪ್ರಭಾವ ಅಷ್ಟೇ ಅಲ್ಲದೇ ಹಲವಾರು ಸಿನಿಮಾಗಳಲ್ಲಿ ಅವರ ಹೆಸರು ಸಿನಿಮಾ ದೃಶ್ಯಗಳು ಕಂಡು ಬಂದಿವೆ. ರಾಜ್ ವಿಧಿವಶರಾಗಿ ೧೨ ವರ್ಷಗಳು ಕಳೆದಿವೆ. ಆದರೆ ಅವರ ಸಿನಿಮಾದ ನೆನಪು ಈಗಿನ ಚಿತ್ರಗಳಲ್ಲಿ ಕಂಡುಬಂದಿವೆ. ಇತ್ತೀಚಿನ ಸಿನಿಮಾದಲ್ಲಿ ರಾಜ್ ಅವರ ಪ್ರಭಾವ ಅವರ ಪುತ್ರರಾದ ಪುನೀತ್ ರಾಜ್‌ಕುಮಾರ್, ಶಿವರಾಜ್‌ಕುಮಾರ್ ಇನ್ನಿತರ ನಟರ

ಸಿನಿಮಾಗಳಲ್ಲಿ ಕಂಡುಬಂದಿವೆ. 'ಬ್ರಹ್ಮ ವಿಷ್ಣು ಮಹೇಶ್ವರ' ಚಿತ್ರದಲ್ಲಿ ರವಿಚಂದ್ರನ್‌ರನ್ನು ಕೇಡಿಗಳು ಸುತ್ತು ತಿರುಗಿದಾಗ ಅವರ ಕಣ್ಣಿನಲ್ಲಿ 'ದಾರಿ ತಪ್ಪಿದ ಮಗ' ಚಿತ್ರದಲ್ಲಿನ ರಾಜ್ ಸಮುದ್ರದ ಹಡಗಿನಲ್ಲಿ ಕೇಡಿಗಳನ್ನು ಸದೆಬಡಿಯುವ ದೃಶ್ಯ ತೇಲಿಬರುತ್ತದೆ. ಈ ಸ್ಫೂರ್ತಿಯಿಂದ ರೌಡಿಗಳಿಗೆ ಚೆನ್ನಾಗಿ ನಾಯಕ ಒದ್ದು ನೀರು ಕುಡಿಸುತ್ತಾರೆ.

ಪುನೀತ್ ಅವರ ರಾಜಕುಮಾರ ಸಿನಿಮಾ "ಗೊಂಬೆ ಹೇಳುತೈತೆ, ಮತ್ತೆ ಹೇಳುತೈತೆ ನೀನೇ ರಾಜಕುಮಾರ" ಎಂಬ ಹಾಡು ಡಾ.ರಾಜ್ ಅವರ ಸಿನಿಮಾ ಕಸ್ತೂರಿ ನಿವಾಸದಿಂದ ಪ್ರಭಾವ ಹೊಂದಿದೆ ಎಂದು ಗಮನಿಸಬೇಕು. ಶಿವಣ್ಣ ಅವರ ರಾಜಕುಮಾರ್ ವರ್ಸಸ್ ಬಂಗಾರದ ಮನುಷ್ಯ ಸಿನೆಮಾ ಕೂಡ ರಾಜ್‌ರವರ ಸಿನೆಮಾದಿಂದ ಪ್ರಭಾವಿತವಾಗಿದೆ. ಹಳ್ಳಿಗಳಲ್ಲಿ ಜನರು 'ನೀನು ರಾಜ್‌ಕುಮಾರ್ ಇದ್ದಂಗೆ ಇರಬೇಕು. ನನ್ನ ರಾಜ್‌ಕುಮಾರ್ ಆಗಬೇಕು, ನೀನೇನ್ ರಾಜ್‌ಕುಮಾರನಾ? ಎಂದು ತಮ್ಮ ದಿನನಿತ್ಯದ ಮಾತುಗಳಲ್ಲಿ ಬಳಸುತ್ತಾರೆ. ಇದರ ಹಿಂದೆ ರಾಜಕುಮಾರ್ ಸಾಮಾಜಿಕ, ಕೌಟುಂಬಿಕ ಚಿತ್ರಗಳು ಅವರ ಆಯ್ಕೆ ನಿಲುವು ನಿಂತ ಅವರ ವ್ಯಕ್ತಿತ್ವ ಆಕಾಶಕ್ಕೂ ಮುಟ್ಟಿವೆ ಎಂದು ಹೇಳಿದರೆ ತಪ್ಪಾಗಲಾರದು. 'ಸಿಂಹದ ಮರಿ ಸೈನ್ಯ'ದಲ್ಲಿ ಅಪಹೃತ ಮಕ್ಕಳ ಚಿತ್ರದಲ್ಲಿ ಮಂಜುಳ ಮತ್ತು ದ್ವಾರಕೀಶ್ ಅವರು ಸಾಹಸದಿಂದ ಮಕ್ಕಳನ್ನು ಬಿಡುಗಡೆಗೊಳಿಸಿದಾಗ ಮಕ್ಕಳು ದ್ವಾರಕೀಶ್ ಅವರನ್ನು ಕಂಡು ನೀವು 'ಮೇಯರ್ ಮುತ್ತಣ್ಣ'ದಲ್ಲಿ ರಾಜಕುಮಾರ ಜೊತೆ ನಟಿಸಿದ್ದೀರ ಎಂತಲೂ ಮಂಜುಳಾರನ್ನು 'ಸಂಪತ್ತಿಗೆ ಸವಾಲ್'ನಲ್ಲಿ ರಾಜ್‌ಕುಮಾರ್ ನಟಿಸಿದ್ದೀರ ಎಂದು ಕೇಳಿದಾಗ ಮಂಜುಳಾ ಅವರು ಖುಷಿ ಪಟ್ಟಿದ್ದಾರೆ. ಸಿನಿಮಾ ರಂಗದಲ್ಲಿ ಸ್ಪರ್ಧಾತ್ಮಕತೆ ಇರುತ್ತೆ ಆದರೆ ಅಭಿನಯ, ಅಭಿರುಚಿ, ಕಲೆ ಎಂಬ ಜ್ಞಾನದ ಅರಿವು ಮುಖ್ಯವಾಗಿರುತ್ತದೆ. ರಾಜ್ ಅವರ ಮುಖಭಾವ, ಅವರ ನಟನೆಯ ಭಾವಭಂಗಿ ಎಲ್ಲವೂ ಜನಮೆಚ್ಚಿದ ಸಂಘಟನೆಯಾಗಿ ಹೊರಹೊಮ್ಮಿದೆ.

ಜೀವನಚೈತ್ರ ಚಿತ್ರದ ಚಿತ್ರೀಕರಣ ಸಂದರ್ಭದಲ್ಲಿ ಕೆ.ಪ್ರವೀಣನಾಯಕ್ ಅವರು ಹೇಳುವಂತೆ "ವಸಂತಪುರದ ವಸಂತ ವಲ್ಲಭಸ್ವಾಮಿ ದೇವಸ್ಥಾನದಲ್ಲಿ ಮಹೂರ್ತ, ಅಭಿಮಾನಿಗಳು ದೇವಸ್ಥಾನದ ಸುತ್ತಲೂ ಜಾತ್ರೆಯಂತೆ ಜಮಾಯಿಸಿದ್ದಾರೆ. ದೇವಸ್ಥಾನದಲ್ಲಿ ಪೂಜೆ ಮುಗಿಸಿ ಹೊರಬಂದ ರಾಜಕುಮಾರ್ ನನ್ನನ್ನು ಹತ್ತಿರ ಕರೆದು ಹೇಳಿದರು. ನೋಡಿ ಎದೆ ಡಬ್ ಡಬ್ ಅಂತ ಇದೆ. ಮೊದಲನೇ ಸಲ ಕ್ಯಾಮರಾ ಮುಂದೆ ನಿಲ್ಲೋಕೆ ಏನೇನೋ ಅನ್ನಿಸ್ತಿದೆ. ಎಷ್ಟು ಜನ ಬಂದಿದ್ದಾರೆ. ಎಷ್ಟು ಪ್ರೀತಿ ತೋರಿಸ್ತಿದ್ದಾರೆ... ಎಷ್ಟು ನಿರೀಕ್ಷೆ ಇಟ್ಕೊಂಡಿದ್ದಾರೆ. ಈ ನಿರೀಕ್ಷೆನೆಲ್ಲಾ ಪೂರೈಸ್ತೀನಾ ಅನ್ಸುತ್ತೆ..."[1] ಎಂದು ಹೇಳಿದ್ದರು. ಈ ಹಿನ್ನೆಲೆಯಿಂದ ರಾಜ್ ಅವರನ್ನು ಅವರ ಹಿನ್ನೆಲೆಯನ್ನು ಗ್ರಹಿಸಿದಾಗ ಅವರ ವ್ಯಕ್ತಿತ್ವ ಯಾವ ತೆರನಾಗಿ ಛಾಪು ಮೂಡಿಸಿದೆ ಎಂಬುದನ್ನು ಅರಿತುಕೊಳ್ಳಬಹುದು. ಹಾಗೂ ಅವರ ಮಾತಿನ ದಾಟಿ ಜನರ ಮೇಲಿನ ನಟಿಸಿ ಪ್ರೀತಿ ಮಹತ್ವ ಅವರಲ್ಲಿ ಕಂಡುಬಂದಿದ್ದರೆ ನಡುವೆ ಸಾಮಾಜಿಕ ಪ್ರೀತಿ ಕಳಕಳಿ ಅವರಲ್ಲಿ ಕಂಡುಬಂದಿದೆ. ಹಾಗೆಯೇ ಜನರಲ್ಲಿ ಕೂಡ ಅಭಿಮಾನಿಗಳ ದೇವರಾಗಿ ದೈವಿಸ್ವರೂಪ ರೀತಿಯಲ್ಲೂ ಡಾ.ರಾಜ್ ಅವರು ಒಡಮೂಡಿದ್ದಾರೆ. ಜನರಲ್ಲಿ ತಮ್ಮ ಪ್ರೀತಿಯ ನಟರನ್ನು ಕಾಣಲು

ಬರುತ್ತಾರೆ ಎಂದರೆ ಅದು ಕೈಯಲ್ಲಿ ಸಿಹಿ, ತಿಂಡಿ, ಹೂವಿನ ಹಾರ ಎಲ್ಲವನ್ನು ತಂದಿರುವುದು ಸಹಜವಾಗಿರುತ್ತದೆ. ಹೀಗಾಗಿ "ಹಲವಾರು ಊರುಗಳಿಗಿಂತ ಹಲವಾರು ಸಂಘ ಸಂಸ್ಥೆಗಳ ಪ್ರತಿನಿಧಿಗಳು ಬಂದರೆಂದರೆ ಪ್ರತಿಯೊಬ್ಬರ ಕೈಯಲ್ಲಿ ಸಿಹಿತಿಂಡಿಯ ಡಬ್ಬಿ. ಎಂ.ಟಿ.ಆರ್.ನ ಸಿಹಿತಿಂಡಿಯಿಂದ ರಸ್ತೆಬದಿಯಲ್ಲಿ ಮಾರುವ ಎಲ್ಲಾ ಸ್ಯಾಂಪಲುಗಳು ಅಲ್ಲಿರುತ್ತಿದ್ದವು"[೫] ಎಂದು ಹೇಳುತ್ತಾರೆ. ರಾಜ್‌ರ ಮೇಲಿನ ಪ್ರೀತಿ ಎಂದು ಕಡಿಮೆಯಾಗದೆ ರಾಜ್‌ರ ಸಿನಿಮಾಗಳು ಯಾವ ತೆರವಾಗಿ ಪ್ರಭಾವ ಬೀರಿದೆ ಎಂಬುದು ಗಮನಿಸಲಾಗಿದೆ. ರಾಜ್ ಅವರಿಗೆ ಅಷ್ಟು ತಿಂಡಿ ತಿನ್ನಿಸಿದಾಗ ರಾಜರು ಪ್ರೀತಿಯಿಂದ ಅಷ್ಟು ಸಿಹಿ ತಿನಿಸುಗಳನ್ನು ತಿಂದರೆಂದು ಹೇಳಲಾಗುತ್ತದೆ. ಕ್ಯಾಮರಾಮನ್, ರಾಜ್ ಅವರನ್ನು ಕೇಳಿದರಂತೆ "ಅಲ್ಲಾ ಸಾರ್ ಅಷ್ಟೊಂದು ಸ್ವೀಟ್ಸ್ ತಿಂದೀರಲ್ಲ...ಪರವಾಗಿಲ್ವಾ? ಜೀರ್ಣ ಆಗುತ್ತ? ಅದಕ್ಕೆ ರಾಜ್‌ರವರು, ಅಷ್ಟೊಂದು ಪ್ರೀತಿಯಿಂದ ಕೊಡ್ತಿದ್ದಾರೆ, ಎಷ್ಟೆಷ್ಟೋ ದೂರದಿಂದ ಬಂದಿದ್ದಾರೆ. ಹ್ಯಾಗೆ ಬೇಡ ಅನ್ನೋದು? ಯೋಗಾಸನದಲ್ಲಿ ಮಯೂರಾಸನ ಅಂತ ಒಂದಿದೆ, ಅದನ್ನು ದಿನಾ ಹಾಕಿದ್ರೆ ಗುಂಡುಕಲ್ಲೂ ಜೀರ್ಣ ಮಾಡೋ ಶಕ್ತಿ ಅದಕ್ಕಿದೆ:"[೬] ಎಂದು ಹೇಳುವರು. ಹಾಗಾಗಿ ಅಭಿಮಾನಿಗಳಿಗೆ ಹತ್ತಿರವಾಗಿ ಅವರ ಕುಶಲೋಪರಿಗಳನ್ನು ಕೇಳಿ ಮಾತಾಡಿಸಿ ಅವರ ಕಷ್ಟ ಸುಖವನ್ನು ತಾವು ಕೇಳಿದ್ದರಂತೆ. ಹಾಗಾಗಿ ಅವರ ಮನಸ್ಸು ಮೌನ ಎಂಥ ಕಟು ಶಕ್ತಿಯನ್ನು ಮಣಿಸಲು ಅವರ ಮಾನಸಿಕ ಧೈರ್ಯ ನೀಡಿತ್ತು. ಹೀಗಾಗಿ ಕಾಡುಗಳ್ಳ ವೀರಪ್ಪನ್ ಯಾಕಾದರೂ ರಾಜ್ ಅವರನ್ನು ಸೆರೆ ಹಿಡಿದಿದ್ದೇವೆ ಎಂದು ಮನಸ್ಸಿನಲ್ಲಿ ಅಂದುಕೊಂಡಿದ್ದು ಇದೆ. ಜೊತೆಗೆ ರಾಜಕುಮಾರ್ ಬಿಡುಗಡೆ ಆದಾಗ ವೀರಪ್ಪನ್ ಕಣ್ಣಲ್ಲಿ ನೀರು ಒತ್ತಿ ಬಂದು ಭಾವುಕರಾಗಿದ್ದು ಜೊತೆಗೆ ಕಣ್ಣೊದ್ದೆಯಾಗಿದ್ದು ಇದೆ. ಅವರನ್ನು ಸಂತೈಸಿದ ರಾಜ್ ಅವರ ಮನಸ್ಥಿತಿ ಹಿಂದೆ ಅವರ ವ್ಯಕ್ತಿತ್ವ ಸಾರಿ ಸಾರಿ ಹೇಳುತ್ತದೆ.

ಕಮಲಹಾಸನ್ ಅವರು ಬಿ.ಎಂ.ಟಿ.ಸಿ.ನಲ್ಲಿ ಕಂಡಕ್ಟರ್ ಆಗಿ ಹಾಡುವ ಒಂದು ದೃಶ್ಯ ಬೆಂಕಿಯಲ್ಲಿ ಅರಳಿದ ಹೂವು ಚಿತ್ರದಲ್ಲಿ ಬಂದಿದೆ "ಮುಂದೆ ಬನ್ನಿ ಇನ್ನು ಮುಂದೆ ಬನ್ನಿ" ಎನ್ನುವ ಹಾಡಿನಲ್ಲಿ ಬಸ್ಸಿನಲ್ಲಿ ಅಳುವ ಮಗುವಿಗೆ ಕಮಲ್ ಅವರು ರಾಜ್ ಅವರ ಚಿತ್ರ ತೋರಿಸಿದಾಗ ಮಗು ಸುಮ್ಮನಾಗುತ್ತದೆ. ಇದೇ ರೀತಿಯಲ್ಲಿ ರಾಜ್‌ಕುಮಾರ್ ಪೋಲೀಸ್ ಅಧಿಕಾರಿಯಾಗಿದ್ದಂತಹ ತಮ್ಮ ಚಿತ್ರವೊಂದರಲ್ಲಿ ಜನಸಾಮಾನ್ಯರನ್ನು ಉದ್ದೇಶಿಸಿ ಕಷ್ಟಪಟ್ಟು ಸ್ವಾವಲಂಬನೆಯಿಂದ ಮೇಲೆ ಬನ್ನಿ ಖಂಡಿತ ಯಶಸ್ಸು ಸಿಗುತ್ತದೆ ಎಂದು ನೀಡುವ ಅನೇಕ ಉದಾಹರಣೆಗಳಿವೆ. ಬಹು ಮುಖ್ಯವಾದುದು ಎಂದರೇ ಹಳ್ಳಿಗಾಡಿನಲ್ಲಿ ಹುಟ್ಟಿದ ಸಾಮಾನ್ಯ ವ್ಯಕ್ತಿ ಸ್ವಯಂ ಕೃಷಿಯಿಂದ ದಾದಾಸಾಹೇಬ್ ಫಾಲ್ಕೆಯಾದ ನಮ್ಮ ರಾಜ್ ಅವರನ್ನು ನೋಡಿ ನಾವು ಕಲಿಯಬೇಕಾಗಿದೆ. ರಾಜ್‌ರವರ ಸಾಮಾಜಿಕ ಸಂದೇಶ "ಎಲ್ಲರಿಗೂ ನಾವು ಮಾರ್ಗದರ್ಶನ ಮಾಡುವುದು ಸುಲಭ ಆದರೆ ನಮ್ಮನ್ನು ನಾವು ಮಾರ್ಗದರ್ಶನ ಮಾಡಿಕೊಳ್ಳುವುದು ಕಷ್ಟ" ಮಾಡಲು ಸುಖಃ ದುಃಖಗಳ ಮೂಲಕ ನಮ್ಮಲ್ಲಿ ಹುದಕಗೊಳ್ಳುವ ಗಟ್ಟಿತನವೇ ನಿಜವಾದ ಶಕ್ತಿ ಎಂದು ಹೇಳುತ್ತಾರೆ. ಹೀಗಾಗಿ ಸಮಾಜದಲ್ಲಿ ಎಲ್ಲ ಬಡವರು ಒಂದು ಕ್ಷೇತ್ರಗಳಲ್ಲಿ ಶ್ರೀಮಂತರಾಗುತ್ತಾರೆ.

## ೫.೧ ಡಾ.ರಾಜ್‌ಕುಮಾರ್ ಅವರು ಕನ್ನಡ ಚಳುವಳಿಯಲ್ಲಿ ತೊಡಗಿರುವ ಪ್ರಕ್ರಿಯೆ

ಕರ್ನಾಟಕದ ಇತಿಹಾಸದಲ್ಲಿ ಕಂಡು ಕೇಳರಿಯದ ಒಂದು ಭಾರಿ ಬೃಹತ್ ಚಳುವಳಿ ನಡೆದುಹೋಗಿದೆ. ಈ ಚಳುವಳಿಯಲ್ಲಿ ಅಪಾರವಾದ ಸಾಹಿತಿಗಳು, ರೈತರು, ನಟರು, ರಾಜಕಾರಣಿಗಳು ಸಾಮಾನ್ಯರು ತೊಡಗಿದ್ದಾರೆ. ಇಲ್ಲಿಯ ಮುಖ್ಯ ಉದ್ದೇಶ ಆಶಯ ಕನ್ನಡ ನಾಡು ನುಡಿಯ ಪರವಾಗಿದೆ. ಚಳುವಳಿ ಗೋಕಾಕ್ ಚಳುವಳಿ ಎಂದೇ ಪ್ರಸಿದ್ಧವಾಯಿತು. ವಿ.ಕೃಗೋಕಾಕ್ ಅವರು ಕರ್ನಾಟಕದಲ್ಲಿ ಆಡಳಿತಭಾಷೆಯಾಗಿ ಕನ್ನಡವನ್ನು ಜಾರಿಗೆ ತರಲು ಹಾಗೂ ಶೈಕ್ಷಣಿಕ ರಂಗದಲ್ಲಿ ಕನ್ನಡವು ಪ್ರಥಮ ಭಾಷೆಯಾಗಿರಬೇಕೆಂದು ಸಿದ್ಧಪಡಿಸಿದ ವರದಿ ಇದಾಗಿತ್ತು. ಅಂದಿನ ಸರಕಾರ ಯಾವ ಪ್ರತಿಕ್ರಿಯೆ ನೀಡದೆ ಸುಮ್ಮನಾಯಿತು. ಅನಂತರ ಸಾಹಿತಿಗಳು, ಕವಿಗಳು ಬರಹಗಾರರು, ಕನ್ನಡಪರ ಹೋರಾಟಗಾರರು ರಾಜಕುಮಾರ ಅವರನ್ನು ಭೇಟಿ ಮಾಡಿ ಚಳುವಳಿಗೆ ಬರಲು ಆಹ್ವಾನಿಸಿದರು. ಆಗ ರಾಜ್‌ಕುಮಾರ್ ಅವರು ಒಂದು ಮಾತು ಹೇಳುತ್ತಾರೆ "ನಿಮ್ಮಂತಹ ಜ್ಞಾನಿಗಳು, ಸಾಹಿತಿಗಳು, ಕನ್ನಡ ಭಾಷೆಗೆ ಅನ್ಯಾಯವಾಗಿದೆ ಎಂದು ಹೇಳುವುದಾದರೆ ನಿಮ್ಮೊಂದಿಗೆ ಹೋರಾಟಕ್ಕೆ ಬರಲು ನಾನು ಎಂದಿಗೂ ಸಿದ್ಧ."[೭] ರಾಜ್ ಅವರು ಚಳುವಳಿಗೆ ಪ್ರವೇಶಿಸುತ್ತಾರೆ. ಗೋಕಾಕ್ ಚಳುವಳಿಗೆ ರಾಜ್‌ಕುಮಾರ್ ಧುಮುಕಿದಾಗ ಕರ್ನಾಟಕದಾದ್ಯಂತ ಈ ಸುದ್ದಿ ಕಾಡ್ಗಿಚ್ಚಿನಂತೆ ಹಬ್ಬಿತು, ರಾಜ್‌ಕುಮಾರ್ ಅವರ ಅಭಿಮಾನಿಗಳಲ್ಲಿ ಹೋರಾಟದ ಅಲೆಯೆ ಬಂದಂಗಾಯಿತು. ನಾಡಿನ ಅನೇಕಾನೇಕ ಸ್ಥಳಗಳಿಂದ ಅಭಿಮಾನಗಳ ಮಹಾಪೂರವೇ ಹರಿದುಬಂದಿತು. ಎಲ್ಲರ ಮನದಲ್ಲಿ ಹುದುಗಿದ್ದ ಕನ್ನಡಾಭಿಮಾನ ರಾಜ್‌ಕುಮಾರ್ ಎಂಬ ಬೆಳಕು ಬಿದ್ದ ತಕ್ಷಣ ಕನ್ನಡ ತಾಯಿನುಡಿಗಾಗಿ ಪ್ರಜ್ವಲಿಸಿತು. ಚಳುವಳಿಯ ಗಂಧವೇ ಅರಿಯದ ಎಷ್ಟೋ ಜನ ಬೀದಿಗಿಳಿದರು. ಅಂದಿನ ಗುಂಡುರಾಯರ ಸರಕಾರ ರಾಜ್‌ಕುಮಾರ್ ಅಭಿಮಾನಿಗಳ ಆಕ್ರೋಶಕ್ಕೆ ನಡುಗಿಹೋಯಿತು. ಚಳುವಳಿಯನ್ನು ಹತ್ತಿಕ್ಕಲು ಗೋಲಿಬಾರ್, ಲಾಠಿಪ್ರಹಾರ, ಅಶ್ರುವಾಯು, ಮುಂತಾದವುಗಳಿಂದ ಪ್ರಯತ್ನಿಸಿತು. ಅದಾವುದೇ ಫಲಿಸದೇ ಚಳುವಳಿಯನ್ನು ದಮನ ಮಾಡಲು ಸರ್ಕಾರ ಪ್ರಯತ್ನ ಮಾಡಿದರು. ಚಳುವಳಿಗಾರರ ಬಲ ಹಿಗ್ಗುತ್ತಲೇ ಮುಂದುವರೆಯಿತು.

ಬೆಂಗಳೂರಿನಲ್ಲಿ ನಡೆದ ಬೃಹತ್ ಬಹಿರಂಗ ಸಭೆಯಲ್ಲಿ ರಾಜಕುಮಾರ್ ನೇತೃತ್ವದಲ್ಲಿ ಕಲಾವಿದರೂ, ಬರಹಗಾರರು ನಾಡಿನ ಗಣ್ಯರು, ವೇದಿಕೆ ಏರಿದಾಗ ಲಕ್ಷೋಪಲಕ್ಷ ಜನರ ಪ್ರವಾಹವೇ ಅಲ್ಲಿ ನೆರೆದಿತ್ತು. ಇದೊಂದು ಐತಿಹಾಸಿಕ ಸಭೆಯಾಗಿತ್ತು. ಅಂದು ಮೆರವಣಿಗೆಯಲ್ಲಿ ವಿಧಾನಸೌಧದ ಎದುರು ಗೋಪಾಲಗೌಡ ವೃತ್ತದ ಎದುರು ಪೋಲೀಸರು ಗೋಲಿಬಾರ್ ಮಾಡಿದಾಗ ಇಬ್ಬರು ಯುವಕರು ಸ್ಥಳದಲ್ಲಿಯೇ ಮೃತರಾದರು. ಇವರು ಕನ್ನಡನುಡಿಗೆ, ಜೊತೆಗೆ ರಾಜಕುಮಾರ್ ಅಭಿಮಾನಿಗಳು ಎಂಬುದು ಮುಖ್ಯವಾಗಿತ್ತು. ನಂತರ ಈ ಚಳುವಳಿ ಉಗ್ರರೂಪ ತಾಳಿತು. ಇದರ ಮಧ್ಯದಲ್ಲಿ ಪೋಲೀಸರು ರಾಜಕುಮಾರ್‌ರನ್ನು ಜನರಿಂದ ಬೇರ್ಪಡಿಸಲು ಪೋಲಿಸರು ಪ್ರಯತ್ನಿಸಿದರು. ಜೊತೆಗೆ ಪೋಲೀಸರು ತಮ್ಮ ವ್ಯಾನ್‌ನಲ್ಲಿ ಅವರನ್ನು ಕರೆದುಕೊಂಡು ಹೋದಾಗ ಜನರು ಕೂತಲ್ಲಿಂದ ಸಿಕ್ಕ ಸಿಕ್ಕ ಕಡೆಯಲ್ಲಿ ಕಲ್ಲು ತೂರಾಟ, ಬೆಂಕಿ ಹಚ್ಚುವ ಕಾರ್ಯ ನಡೆಯಿತು. ಇದರಿಂದ ಇಡೀ ನಾಡಿಗೆ ನಾಡೇ ರಾಜಕುಮಾರ್ ನೇತೃತ್ವಕ್ಕೆ

ಸ್ಪಂದಿಸಿತು. ಕಾರ್ಮಿಕರು, ರೈತರು, ವಿದ್ಯಾರ್ಥಿಗಳು, ಚಿತ್ರನಟರು, ಅಷ್ಟು ಸಮಾಜದ ಎಲ್ಲಾ ವರ್ಗದ ಜನ ಈ ಚಳುವಳಿಯಲ್ಲಿ ಭಾಗವಹಿಸಿದರು. ಗೋಕಾಕ್ ಚಳುವಳಿ ಬರೀ ಬೆಂಗಳೂರು ನಗರಕ್ಕೆ ಸೀಮಿತವಾಗದೆ ಇಡೀ ನಾಡಿಗೇ ಹಬ್ಬಿತು. ರಾಜಕುಮಾರ್ ಹಾಗೂ ಇತರ ಚಿಂತಕರು ನಾಡಿನುದ್ದಕ್ಕೂ ಎಲ್ಲಾ ಜಿಲ್ಲೆಗಳಲ್ಲೂ ಜಾಥಾ ನಡಿಸಿದರು. ಪ್ರತಿ ಜಿಲ್ಲೆಯಲ್ಲೂ ಅಭಿಮಾನಿಗಳ ದಂಡೇ ಸಾಲಾಗಿ ಬರುತ್ತಿತ್ತು. ಇದರಿಂದ ಗೋಕಾಕ್ ಚಳುವಳಿಯ ಪರಿಣಾಮವಾಗಿ ಗುಂಡೂರಾಯರ ಕಾಂಗ್ರೆಸ್ ಸರಕಾರ ಧೂಳೀಪಟವಾಗಿ ಹೋಯಿತು. ಎಲ್ಲಾ ಪಕ್ಷದವರು ರಾಜಕುಮಾರ್ ಅವರ ಜನಪ್ರಿಯತೆ ಕಂಡು ರಾಜಕೀಯಕ್ಕೆ ಬರಲು ಆಹ್ವಾನಿಸಿದರು. ಆದರೆ ರಾಜಕುಮಾರ್‌ರವರು ಮಾತ್ರ ರಾಜಕೀಯಕ್ಕೆ ಹೋಗದೆ ಸಿನಿಮಾಗಳ ಮೂಲಕ ಜನರ ನಂಬಿಕೆಯಾಗಿ ಚಳುವಳಿಯ ನೆಲೆಯಲ್ಲಿ ಜಾಗೃತಿ ಮೂಡಿಸಿದರು.

ಒಂದು ಮನಕಲಕುವ ಘಟನೆ, ಕನ್ನಡ ಪ್ರೇಕ್ಷಕರನ್ನು ಕಲಾವಿದರನ್ನು ಒಂದಾಗಿ ಬೆಸೆಯಿತು. ಕರ್ನಾಟಕವೇ ತತ್ತರಿಸುವಂತೆ ಮಳೆ, ಎಲ್ಲೆಡೆ ಭೀಕರ ಪ್ರವಾಹ, ಮನೆ, ಮಠ, ಜನ ಜಾನುವಾರು ಕಳೆದುಕೊಂಡು ಜನರ ಆರ್ತನಾದ ಎಲ್ಲೆಡೆ ಕೇಳುತ್ತಿತ್ತು. ಅಂತಹ ಸಮಯದಲ್ಲಿ ಚಿತ್ರ ಕಲಾವಿದರು ನೊಂದ ಜನರಿಗೆ ನೆರವಾಗಲು ನಿಧಿ ಸಂಗ್ರಹಿಸಲು ಕಂಕಣಬದ್ಧರಾದರು. ರಾಜ್‌ಕುಮಾರ್, ಉದಯ್‌ಕುಮಾರ್, ಜಿ.ಹೆಚ್. ವೀರಣ್ಣ, ನಾಗೇಂದ್ರರಾವ್, ಕೆಂಪರಾಜ್, ಕಲ್ಯಾಣಕುಮಾರ್, ನರಸಿಂಹ ರಾಜು, ಹೊನ್ನಪ್ಪ ಭಾಗವತಾರ್, ಸುಬ್ಬಯ್ಯ ನಾಯ್ಡು, ಪಂತುಲು, ಬಿ. ಸರೋಜದೇವಿ, ಲೀಲಾವತಿ, ಹರಿಣಿ, ಪಂಡರಿಬಾಯಿ, ಮುಂತಾದವರ ತಂಡ ನಾಡಿನಾದ್ಯಂತ ಸಂಚರಿಸಿ ಜನರ ನೋವಿಗೆ ಸ್ಪಂದಿಸಿದರು. ೩೫ ಸಾವಿರ ರೂ. ಸಂಗ್ರಹಿಸಿ ಅಂದಿನ ಮುಖ್ಯಮಂತ್ರಿ ಬಿ.ಡಿ. ಜತ್ತಿ ಅವರಿಗೆ ಸಮರ್ಪಿಸಿದರು. ೧೯೬೧ ರ ಆಗಸ್ಟ್ ೧೯ ಮತ್ತು ೨೦ ರಂದು ರಸಮಂಜರಿ ಏರ್ಪಡಿಸಿ ಹಣ ಸಂಗ್ರಹಿಸಿದರು. ಈ ಘಟನೆ ಜನರಲ್ಲಿ ಕಲಾವಿದರ ಬಗ್ಗೆ ಅಭಿಮಾನದ ಮಹಾಪೂರವನ್ನೆ ಹರಿಸಿತು. ಇದೇ ಅವಧಿಯಲ್ಲಿ ಚಿತ್ರರಂಗದಲ್ಲಿ ಡಬ್ಬಿಂಗ್ ಚಿತ್ರಗಳು ಹೆಚ್ಚು ಹೆಚ್ಚಾಗಿ ಬರತೊಡಗುತ್ತವೆ. ಇದರಿಂದ ಸೀಮಿತ ವಲಯದ ಮಾರುಕಟ್ಟೆ ಹೊಂದಿರುವ ಕನ್ನಡ ಚಿತ್ರರಂಗಕ್ಕೆ ಧಕ್ಕೆ ಬಂದೊದಗುತ್ತದೆ.

ಆ ಸಮಯಕ್ಕೆ ಅ.ನ.ಕೃ., ಮ. ರಾಮಮೂರ್ತಿ, ವಾಟಾಳ್ ನಾಗರಾಜ್, ಮುಂತಾದವರು ಡಬ್ಬಿಂಗ್ ಸಂಸ್ಕೃತಿ ವಿರುದ್ಧ ಹೋರಾಟ ಸಂಘಟಿಸುತ್ತಾರೆ. ಈ ಕನ್ನಡ ಚಳುವಳಿ ಕನ್ನಡ ಚಿತ್ರರಂಗದ ಉಳಿವಿಗೆ ಸಹಕಾರಿಯಾಗುತ್ತದೆ. ಕನ್ನಡ ಚಿತ್ರಗಳಿಗೆ ಚಿತ್ರಮಂದಿರವೇ ದಕ್ಕದಿದ್ದ ಕಾಲದಲ್ಲಿ ಈ ಚಳುವಳಿ ಕನ್ನಡ ಚಿತ್ರಗಳಿಗೆ ಇತರ ಚಿತ್ರಮಂದಿರಗಳು ಲಭ್ಯವಾಗುವಂತೆ ಮಾಡುತ್ತದೆ. ಈ ಚಳುವಳಿ ಬೆಂಗಳೂರಿನ ಭಾರತ್ ಚಿತ್ರಮಂದಿರ ಕನ್ನಡ ಚಿತ್ರ ಮಾತ್ರ ಪ್ರದರ್ಶಿಸುವ ಪ್ರತಿಜ್ಞೆ ಮಾಡುತ್ತದೆ. (ಈಗ ಈ ಚಿತ್ರಮಂದಿರ ಇಲ್ಲವೆನ್ನುವುದು ದುಃಖದ ವಿಷಯ) ಕನ್ನಡ ಚಳುವಳಿಯು ಕೆಲವು ಹಳ್ಳಿ ಹಳ್ಳಿಗೂ ತಲುಪಿ ಕನ್ನಡ ಚಿತ್ರಗಳ ನಿರ್ಮಾಣ ಪ್ರಮಾಣ ಹೆಚ್ಚುತ್ತದೆ.

ಆದರೆ ೧೯೬೦ರ ಹೊತ್ತಿಗೆ ಕನ್ನಡ ಚಿತ್ರಗಳ ತಯಾರಿಕೆ ಇಳಿಮುಖವಾಗುತ್ತದೆ. ಇದು ಕಲಾವಿದರು ನಿರುದ್ಯೋಗಿಗಳಾಗುವಂತಹ ಸನ್ನಿವೇಶ ಸೃಷ್ಟಿ ಮಾಡುತ್ತದೆ. ತಾನು ನಡೆದು ಬಂದ ಹಾದಿಯಲ್ಲೆ ಇಷ್ಟು

ವರ್ಷಗಳನ್ನು ತಲುಪಿದ್ದ ಕನ್ನಡ ಚಿತ್ರೋದ್ಯಮದ ಒಳ್ಳೆ ಸ್ವರೂಪ ಪಡೆದುಕೊಳ್ಳುವ ಹಂತ ತಲುಪುವ ಕಾಲಕ್ಕೆ ಇದ್ದಕ್ಕಿದ್ದಂತೆ ಕಚ್ಚಾ ಫಿಲಂ ಮುಗ್ಗಟ್ಟು ತಲೆದೋರುತ್ತದೆ. ಇದರಿಂದ ಕಂಗಾಲಾದ ಕಲಾವಿದರು ಸಂಘಟಿತರಾಗಿ ಸಹಕಾರ ಸಂಸ್ಥೆ ಸ್ಥಾಪಿಸಿ, ಊರೂರಿಗೆ ಹೋಗಿ ನಾಟಕ ಆಡುತ್ತಾರೆ.

ಕನ್ನಡದ ಉಳಿವಿಗಾಗಿ ಸಾಹಿತಿಗಳ ನೇತೃತ್ವದಲ್ಲಿ ಹೋರಾಟ ಚಳುವಳಿ ಆರಂಭವಾಗುತ್ತದೆ. ಈ ಹೋರಾಟದ ಫಲವಾಗಿ ೧೯೬೨ ರಲ್ಲಿ ಕನ್ನಡ ಕಾದಂಬರಿಯೊಂದನ್ನು ಆಧರಿಸಿದ ಚಿತ್ರ ತೆರೆಕಾಣುವಂತಾಯಿತು. ಸದಭಿರುಚಿ ಚಿತ್ರ ತಯಾರಿಕೆಗೆ ಹೆಸರಾದ ಸಂಸ್ಥೆ ಶೈಲಶ್ರೀ ಪ್ರೊಡಕ್ಷನ್‌ರವರು ಕೃಷ್ಣಮೂರ್ತಿ ಪುರಾಣಿಕ ಅವರ ಧರ್ಮದೇವತೆ ಕಾದಂಬರಿ ಆಧರಿಸಿ "ಕರುಣೆಯೇ ಕುಟುಂಬದ ಕಣ್ಣು" ಚಿತ್ರ ನಿರ್ಮಾಣ ಮಾಡುತ್ತದೆ. ಇಲ್ಲಿಂದ ಸಾಹಿತ್ಯ ಮತ್ತು ಸಿನಿಮಾ ಕ್ಷೇತ್ರಗಳ ನಡುವೆ ನಂಟು ಮತ್ತಷ್ಟು ಬಲವಾಗುತ್ತದೆ. ಸಂಗೀತ ಜಿ.ಕೆ. ವೆಂಕಟೇಶ, ನಿರ್ದೇಶನ–ಟಿ.ವಿ. ಸಿಂಗರಾಜು, ಗೀತ ರಚನೆ–ಕಣಗಾಲ್ ಪ್ರಭಾಕರ ಶಾಸ್ತ್ರಿ, ಸಂಭಾಷಣೆ–ಸದಾಶಿವಯ್ಯ, ತಾರಾಗಣ–ರಾಜ್‌ಕುಮಾರ್, ಲೀಲಾವತಿ, ಉದಯ ಕುಮಾರ್, ಆದಿವಾನಿ ಲಕ್ಷ್ಮಿದೇವಿ, ರಾಜಶ್ರೀ, ಬಾಲಕೃಷ್ಣ, ನರಸಿಂಹರಾಜು, ಲೀಲಾವತಿ, ರಾಜಾಶಂಕರ್, ಮಾಸ್ಟರ್ ಉದಯಶಂಕರ್, ಗಣಪತಿ ಭಟ್ ಮುಂತಾದವರು. ಈ ಹೋರಾಟದ ಫಲವೇ ೧೯೬೩ ರಲ್ಲಿ ಚಿತ್ರ ನಿರ್ಮಾಣ ಸಂಖ್ಯೆ ದಿಢೀರನೆ ಹೆಚ್ಚಲು ಕಾರಣವಾಗುತ್ತದೆ. ಈ ವರ್ಷ ೨೧ ಸಿನಿಮಾ ಬಿಡುಗಡೆಯಾಗುತ್ತದೆ.

ಕನ್ನಡವೇ ಸತ್ಯ, ಕನ್ನಡವೇ ನಿತ್ಯ ಎಂದು ಕುವೆಂಪು ಅವರು ಕನ್ನಡಿಗರಿಗೆ ಸಂದೇಶ ನೀಡಿದ್ದಾರೆ. ಕನ್ನಡಕ್ಕಾಗಿ ಕೈ ಎತ್ತು ನಿನ್ನ ಕೈ ಕಲ್ಪವೃಕ್ಷವಾಗುತ್ತದೆ ಎನ್ನುವ ಮಾತು ಸತ್ಯ. ಕರ್ನಾಟಕದಲ್ಲಿ ಕನ್ನಡಿಗನೇ ಸಾರ್ವಭೌಮ. ಆದಿ ಕವಿ ಪಂಪ ಕನ್ನಡ ನಾಡನ್ನು ಬನವಾಸಿಯನ್ನು ಹಾಡಿ ಹೊಗಳಿದ್ದಾನೆ. ಪಂಪ, ರನ್ನ, ಪೊನ್ನ, ಕುಮರವ್ಯಾಸ, ಲಕ್ಷ್ಮೀಶ, ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ, ಅಡಿಗ, ಕಂಬಾರರು ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಜನಪದ ಕವಿಗಳು ಓದಲು ಬರೆಯಲು ಬಾರದಿದ್ದರೂ ತಮ್ಮ ಅನುಭವ ಸಾರದಲ್ಲಿ ಕನ್ನಡದ ಮುತ್ತುನ್ನು ಪೋಣಿಸಿ ಜಾನಪದ ಭಂಡಾರವನ್ನು ನಿರ್ಮಾಣ ಮಾಡಿದ್ದಾರೆ. ಇಂಥಹ ಕನ್ನಡ ನಾಡಲ್ಲಿ ಹುಟ್ಟುವುದೇ ಒಂದು ಹೆಮ್ಮೆ. ಹಲವಾರು ಸಾಹಿತಿಗಳು, ನಿರ್ದೇಶಕರು, ಭಾಷಾ ತಜ್ಞರು, ಕಲಾವಿದರು, ರಾಜಣ್ಣನವರ ಚಿತ್ರಗಳ ಕನ್ನಡದ ಬಗ್ಗೆ ಮಾತನಾಡಿದ್ದಾರೆ. ಕನ್ನಡ ನಾಡು ನಮ್ಮ ಮನೆ. ಇಲ್ಲಿ ಜನ್ಮ ಪಡೆದ ನಾವು ಈ ಮಣ್ಣಿನ ಋಣ ಮರೆಯಬಾರದು. ಕನ್ನಡನಾಡನ್ನು ಉಳಿಸಿ ಬೆಳೆಸಿ ಪ್ರೀತಿಸಿ ಪೋಷಿಸುವ ಹಕ್ಕು ಕರ್ತವ್ಯ ಜವಾಬ್ದಾರಿ ಕನ್ನಡಿಗರಾದ ನಮಗಿದೆ. ಇಂತಹ ಹೆಮ್ಮೆಯ ಕನ್ನಡ ಮಣ್ಣಿನಲ್ಲಿ ಕನ್ನಡದ ಮಗನಾಗಿ ಹುಟ್ಟಿ ಕನ್ನಡದ ಕೀರ್ತಿಯನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ತೆಗೆದುಕೊಂಡು ಹೋದ ಕೀರ್ತಿ ನಾಡೋಜ ರಾಜಣ್ಣನವರದು.

ಸಿನೆಮಾ ಎಂದಾಗ ಇಡೀ ರಾಜ್ಯದಲ್ಲಿ ಅದರ ಪ್ರಭಾವ ಇರುತ್ತದೆ. ಹಾಗಾಗಿ ಇತ್ತ ಮಂಡ್ಯ ಕನ್ನಡ, ಹಳೆ ಮೈಸೂರು ಕನ್ನಡ, ಧಾರವಾಡ ಕನ್ನಡ, ಮಂಗಳೂರು ಕನ್ನಡ, ಎಂದು ವಿಂಗಡಿಸುತ್ತಾ ಹೋದರೆ ಎಲ್ಲರೂ ಮೆಚ್ಚುವ ಕನ್ನಡ ಯಾವುದು ಎಂಬ ಪ್ರಶ್ನೆ ಬರುತ್ತದೆ. ಕನ್ನಡದ ಎಲ್ಲ ಪ್ರಾಂತ್ಯದವರಿಗೂ ಕನ್ನಡ ಎಂದರೆ ನಮ್ಮ ಮನೆಯ ಭಾಷೆಯೇ ಎನಿಸಬೇಕು ಅಂತಹ ತಿಳಿಕನ್ನಡವನ್ನು ರಾಜಣ್ಣನವರ ಸಿನೆಮಾಗಳಲ್ಲಿ

ಬಳಸಲಾಗಿದೆ. ಮಯೂರ, ಕವಿರತ್ನ ಕಾಳಿದಾಸ, ರಣಧೀರ ಕಂಠೀರವ, ಮುಂತಾದ ಚಿತ್ರಗಳಲ್ಲಿ ರಾಜಣ್ಣನವರಿಗಾಗಿ ಅವರ ಸಂಭಾಷಣೆಕಾರರು ಬರೆದ ಕನ್ನಡವನ್ನು ರಾಜಣ್ಣನವರು ಎಷ್ಟು ಸಲೀಸಾಗಿ ನುಡಿಯುತ್ತಾರೆ. ಅದೇ ಎಮ್ಮೆ ತಮ್ಮಣ್ಣ, ಸಂಪತ್ತಿಗೆ ಸವಾಲ್ ಮುಂತಾದ ಚಿತ್ರಗಳಲ್ಲಿ ಜಾನಪದ ಕನ್ನಡವನ್ನು ಬಳಸಿದ್ದಾರೆ. ಸ್ಪಷ್ಟ ಉಚ್ಚಾರಣೆ ದೇವರು ಅವರಿಗೆ ಕೊಟ್ಟ ವರ. ಬಾಲ್ಯದಿಂದಲೂ ಕೂಡ ಸೀಸ ಪದ್ಯಗಳನ್ನು ಹಾಡುತ್ತಾ ಉದ್ದುದ್ದ ಸಂಭಾಷಣೆಗಳನ್ನು ಸಲೀಸಾಗಿ ನುಡಿಯುತ್ತಿದ್ದ ಮುತ್ತುರಾಜನಿಗೆ ಸಿನೆಮಾದ ಸಂಭಾಷಣೆ ಕಷ್ಟವೇ ಎನಿಸುತ್ತಿರಲಿಲ್ಲ. ರಾಮ, ಕೃಷ್ಣ, ಶಿವ, ಅರ್ಜುನ, ಮುಂತಾದ ಸಾತ್ವಿಕ ಪಾತ್ರಗಳು ಬಂದಾಗ ದೈವಿಪುರುಷರಂತೆ ಕನ್ನಡ ಒಂದು ದೈವ ಭಾಷೆ ಎನ್ನುವಂತೆ ಕನ್ನಡವನ್ನು ನುಡಿಯುತ್ತಾರೆ. ಅವರ ಓದು ಅಷ್ಟಕಷ್ಟೆ ಆದರೂ ಅವರ ಕನ್ನಡ ಭಾಷಾ ಜ್ಞಾನ ಅಪಾರವಾದದ್ದು. ರಾಮಾಯಣ, ಮಹಾಭಾರತ, ಭಗವದ್ಗೀತೆ, ಪುರಾಣಗಳನ್ನು ಹಲವು ಕತೆ ಕಾದಂಬರಿಗಳನ್ನು ಅವರು ಓದಿದ್ದರು. ಆಧ್ಯಾತ್ಮಿಕ ಪುಸ್ತಕಗಳನ್ನು ಅವರು ಅರ್ಥ ಮಾಡಿಕೊಳ್ಳುತ್ತಿದ್ದರು. ಧ್ವನಿಯ ಏರಿಳಿತ, ಹಾವ ಭಾವದೊಂದಿಗೆ ಭಾಷೆಯ ಭಾವದ ಬದಲಾವಣೆ ಇವರನ್ನು ನೋಡಿ ಕಲಿಯಬೇಕು. ಎಂದಿಗೂ ಅನ್ಯ ಭಾಷೆಯ ಬಗ್ಗೆ ಅಸಹಿಷ್ಣುತೆ ಅವರಲ್ಲಿ ಇರಲಿಲ್ಲ. ೩೦-೪೦ ದಶಕಗಳ ಕಾಲ ಕನ್ನಡ ಸಿನೆಮಾ ನೆಲೆ ಪಡೆದಿದ್ದು ಮದ್ರಾಸಿನಲ್ಲಿ ಎಂದು ಎಲ್ಲರಿಗೂ ಗೊತ್ತು. ಅಲ್ಲಿದ್ದ ಎಲ್ಲ ತಂತ್ರಜ್ಞರು ತಮಿಳಿನಲ್ಲಿ ಮಾತನಾಡುತ್ತಿದ್ದರು. ಅದು ಅನಿವಾರ್ಯವಾಗಿತ್ತು. ಆದರೆ ಆ ವಾತಾವರಣದಿಂದ ಹೊರ ಬಂದ ತಕ್ಷಣ ರಾಜಣ್ಣ ತಮ್ಮ ಮಾತೃಭಾಷೆ ಕನ್ನಡಕ್ಕೆ ಮೊರೆ ಹೋಗುತ್ತಿದ್ದರು. ಮದ್ರಾಸಿನಲ್ಲಿ ತಮ್ಮ ಮಕ್ಕಳಿಗೆ ಕಡ್ಡಾಯ ಕನ್ನಡ ಕಲಿಸಿದರು. ಮನೆಯಲ್ಲಿ ಕನ್ನಡ ಮಾತನಾಡುವುದು ಅನಿವಾರ್ಯವಾಗಿತ್ತು. ಕ್ರಮೇಣ ಮೈಸೂರು ಬೆಂಗಳೂರಿಗೆ ಚಿತ್ರ ತಂಡ ಮರಳಿದ ಮೇಲೆ ತಮಿಳುನಾಡು ನಮಗೆ ಕೊಟ್ಟ ಸಹಕಾರವನ್ನು ಅವರು ಮರೆಯಲಿಲ್ಲ. ತಮಿಳು ಭಾಷೆಯ ಬಗ್ಗೆ ಒಂದು ಕೊಂಕು ನುಡಿ ಆಡಲಿಲ್ಲ. ಎಂ.ಜಿ.ಆರ್., ಎನ್.ಟಿ.ಆರ್., ನಾಗೇಶ್ವರರಾವ್, ರಜನೀಕಾಂತ್, ಕಮಲಹಾಸನ್, ಮುಂತಾದ ಪ್ರೌಢ ಕಲಾವಿದರೊಂದಿಗೆ ಕೊನೆಯವರೆಗೂ ಸ್ನೇಹ ಪ್ರೀತಿ ಇಟ್ಟುಕೊಂಡಿದ್ದರು.

ಕನ್ನಡ ನಾಡು ನುಡಿಯ ಹಿರಿಯ ಗರಿಮೆಗಳನ್ನು ಸಾರುವ ಹಲವು ಕನ್ನಡ ಗೀತೆಗಳನ್ನು ಅವರು ಹಾಡಿದ್ದಾರೆ. "ಹುಟ್ಟಿದರೆ ಕನ್ನಡ ನಾಡಲ್ಲಿ ಹುಟ್ಟಬೇಕು, ಜೇನಿನ ಹೊಳೆಯೋ ಹಾಲಿನ ಮಳೆಯೊ, ಸುಧೆಯೋ ಕನ್ನಡ ಸವಿನುಡಿಯೋ" ಎಂದು ಹಾಡಿ ನಮ್ಮನ್ನು ತನ್ಮಯಗೊಳಿಸಿದ್ದಾರೆ. ಗ್ರಾಮೀಣ ಸೊಗಡಿನ ಕಥಾಹಂದರ ಹೊಂದಿರುವ ಚಂದವಳ್ಳಿಯ ತೋಟ, ಸರ್ವಮಂಗಳಾ, ಸಂಪತ್ತಿಗೆ ಸವಾಲ್, ಮುಂತಾದ ಸಿನೆಮಾಗಳಲ್ಲಿ ಮಧ್ಯೆ ಮಧ್ಯೆ ಒಗಟು, ಗಾದೆ ಒಡಪುಗಳನ್ನು ಬಳಸುತ್ತ ಶುದ್ಧ ಗ್ರಾಮ್ಯ ಕಲಾವಿದ ಎನಿಸಿಕೊಂಡಿದ್ದಾರೆ. ಕನ್ನಡ ಭಾಷೆಯ ಸೊಗಡು ಚಿತ್ರವನ್ನು ಗೆಲ್ಲಿಸಿದೆ. ಈಗಲೂ ಸಾವಿರಾರು ಅಬಿಮಾನಿಗಳು ಹುಚ್ಚರಂತೆ ಅವರ ಸಿನೆಮಾ ಡೈಲಾಗ್‌ಗಳನ್ನು ಅಲ್ಲಿ ಇಲ್ಲಿ ಹೇಳುತ್ತಿರುತ್ತಾರೆ. ಅವರ ಪ್ರೀತಿ ದೊಡ್ಡದು. ಅದನ್ನು ಹುಚ್ಚು ಎನ್ನಿ, ತುಸು ಜಾಸ್ತಿ ಆಯಿತು ಎನ್ನಿ, ಏನೇ ಹೇಳಿದರೂ ಅವರ ಡೈಲಾಗ್‌ಗಳನ್ನು ಅಭಿಮಾನಿಗಳು ಈಗಲೂ ಜೀವಂತವಾಗಿ ಇಟ್ಟಿದ್ದಾರೆ.

ಇನ್ನು ಚಳುವಳಿ ಎನ್ನುವ ವಿಷಯಕ್ಕೆ ಬಂದಾಗ ಚಲನಚಿತ್ರ ಕಲಾವಿದರ ಬಳಗ ಪ್ರಪ್ರಥಮ ಬಾರಿಗೆ ದೊಡ್ಡ ಸೈನ್ಯದೊಂದಿಗೆ ಕನ್ನಡ ಹೋರಾಟಕ್ಕೆ ಇಳಿದದ್ದು ಈಗ ಇತಿಹಾಸ. ಈ ಇತಿಹಾಸವನ್ನು

ಸೃಷ್ಟಿಮಾಡಿದ್ದೆ ರಾಜಣ್ಣನವರು. ಪಾಟೀಲ ಪುಟ್ಟಪ್ಪನವರು ರಾಜಣ್ಣನವರನ್ನು ಗೋಕಾಕ್ ಚಳುವಳಿ ಜಾರಿಗೆ ಬರಲಿ ಎನ್ನುವ ಹೋರಾಟಕ್ಕೆ ರಾಜಣ್ಣನವರನ್ನು ಪ್ರೇರೇಪಿಸಿದ್ದು , ಜನರು ಸಮುದ್ರದಂತೆ ಸಾಗರದಂತೆ ಅವರ ಹಿಂದೆ ಬಂದದ್ದು ಕನ್ನಡ ಹೋರಾಟಗಳಲ್ಲಿ ಕನ್ನಡಿಗರಿಗೆ ಜಯ ಸಿಕ್ಕಿದ್ದು ಈಗ ಇತಿಹಾಸ. ಯಾವುದೇ ರಾಜಕೀಯ ಪಕ್ಷಕ್ಕೆ ಅಂಟಿಕೊಳ್ಳದೆ, ಪರಾವಲಂಬಿ ಜೀವಿಯಾಗಿ ತನ್ನ ಅಭಿಮಾನಿಗಳೇ ತನ್ನ ದೇವರೆಂದು ಅನ್ನದಾತರೆಂದು ನಂಬಿದ ರಾಜಣ್ಣನವರು ಕನ್ನಡಕ್ಕೆ ಜೈ ಎಂದು ಚಳುವಳಿಗೆ ಧುಮುಕಿದ್ದೆ ತಡ, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಕನ್ನಡಿಗರು ಚಳುವಳಿಗೆ ಧಾವಿಸಿ ಬಂದರು. ಸಮರೋಪಾದಿಯಲ್ಲಿ ಯುದ್ಧ ಸೈನಿಕರಂತೆ ಸಿಪಾಯಿಗಳಂತೆ ಕನ್ನಡಿಗರು ರಾಜಣ್ಣನವರ ನಾಯಕತ್ವದಲ್ಲಿ ಹೋರಾಟ ನಡೆಸಿ ಗೆದ್ದು ಕನ್ನಡವನ್ನು ಗೆಲ್ಲಿಸಿದರು. ಇತ್ತೀಚೆಗಿನ ಹೋರಾಟ ಎಂದರೆ ದುಡ್ಡು ಮಾಡುವ ದಂಧೆ ಎನಿಸಿಬಿಟ್ಟಿದೆ. ಹೋರಾಟಗಾರರ ಅಸ್ತಿತ್ವದ ಬಗ್ಗೆ ಅನುಮಾನ ಮೂಡಿಬರುತ್ತದೆ. ಎಲೆ ಮರೆಯ ಕಾಯಿಯಂತೆ ಇದ್ದು ಕನ್ನಡ ಸೇವೆಯನ್ನು ಸಲ್ಲಿಸುತ್ತಿರುವ ಹಲವು ಕನ್ನಡಿಗರು ಹಿಂದೆಯೂ ಇದ್ದರು, ಈಗಲೂ ಇದ್ದಾರೆ. ಆದರೆ ಹೋರಾಟವನ್ನು ವೃತ್ತಿಯನ್ನಾಗಿ ಮಾಡಿಕೊಂಡು ಬೇರೆ ಏನೂ ಕೆಲಸ ಮಾಡದೆ ಹೋರಾಟದ ನೆಪವೊಡ್ಡಿ ಹಣಕ್ಕೆ ಕೈಚಾಚುವ ಹೋರಾಟಗಾರರು ಇದ್ದಾರೆ. ಇಂಥವರನ್ನು ಕನ್ನಡಾಂಬೆ ಕ್ಷಮಿಸುವುದಿಲ್ಲ. ಇಲ್ಲಿ ಯಾವಾಗಲೂ ಸತ್ಯ ಗೆಲ್ಲುತ್ತದೆ.

ರಾಜಕಾರಣ ಎಂಬ ಪ್ರಶ್ನೆ ಬಂದಾಗ ರಾಜಣ್ಣನವರು ತಮ್ಮ ಪಾಡಿಗೆ ತಾವು ಕಲಾಸೇವೆಯನ್ನು ಮಾಡಿಕೊಂಡು ಹೋದವರು. ಅವರಿಗೆ ರಾಜಕೀಯ ಬೇಕಾಗಿರಲಿಲ್ಲ. ಅವರನ್ನು ಜನ ಅದಾಗಲೇ ನಾಯಕ ಎಂದು ಗುರುತಿಸಿ ಆಗಿತ್ತು. ರಾಜಕೀಯಕ್ಕೆ ಅವರನ್ನು ಬಲವಂತವಾಗಿ ಕರೆತರಲು ಯಾರಿಂದಲೂ ಸಾಧ್ಯವಾಗಿರಲಿಲ್ಲ. ರಾಜಕೀಯ ಅವರ ಆಸಕ್ತಿ ಆಗಿರಲಿಲ್ಲ. ಕನ್ನಡ ಸೇವೆ, ಕಲಾಸೇವೆ ಅವರ ಆಸಕ್ತಿ ಆಗಿತ್ತು. ತಮ್ಮ ಜೀವನದ ಅವಧಿಯಲ್ಲಿ ಕನ್ನಡ ಭಾಷೆ ಮಾತನಾಡುತ್ತಾ ಕನ್ನಡ ಹಾಡನ್ನು ಹಾಡುತ್ತಾ ಕನ್ನಡ ನಾಡಿಯಲ್ಲಿಯೇ ಜೀವಿಸಿದ್ದು ಇದೇ ಮಣ್ಣಿಗೆ ಇದೇ ಭೂಮಿಗೆ ಇದೇ ಭಾಷೆಗೆ ಅಂಟಿಕೊಂಡಿದ್ದು ಒಂದು ದೊಡ್ಡ ಚಳುವಳಿ ಅಲ್ಲವೇ? ಇದೇ ಒಬ್ಬ ಹುಟ್ಟು ಹೋರಾಟಗಾರನ ಗುಣ. ತನ್ನತನವನ್ನು ಬಿಡದೆ ಮಾತೃಭಾಷೆಗೆ ಅಂಟಿಕೊಂಡ ಮೋಹ ಉಸಿರು ಇರುವವರೆವಿಗೂ ಹೋಗಲಿಲ್ಲ.

ಸ್ವಾತಂತ್ರ್ಯ ಸಂಗ್ರಾಮಕ್ಕೆ ಮಹಾತ್ಮ ಗಾಂಧೀಜಿಯವರು ಒಂದು ಕರೆ ಕೊಡುತ್ತಾರೆ. ಇಡೀ ದೇಶವೇ ಅವರನ್ನು ಹಿಂಬಾಲಿಸುತ್ತದೆ. ಇದು ನಾಯಕನ ಗುಣ. ಮೊದಲು ನಾಯಕ ತ್ಯಾಗ ಮಾಡುತ್ತಾನೆ. ತ್ಯಾಗ ನಾಯಕನ ಪ್ರಥಮ ಗುಣ. ಅವನು ಸ್ವಾರ್ಥಿಯಾದರೆ ಅವನ ಹಿಂದೆ ಯಾರೂ ಬರುವುದಿಲ್ಲ. ರಾಜಣ್ಣನವರು ತಮಗಾಗಿ ಏನನ್ನೂ ಕೇಳಲಿಲ್ಲ. ಕನ್ನಡ ನಾಡಿಗಾಗಿ ಕನ್ನಡಿಗರೆ ಎಚ್ಚೆತ್ತುಕೊಳ್ಳಿ ಬನ್ನಿ ಕನ್ನಡ ಉಳಿಸಿ ಎಂದು ಕರೆ ಕೊಡುತ್ತಾರೆ. ಇಡೀ ಕರ್ನಾಟಕದ ಜನತೆ ಮಂತ್ರಮುಗ್ಧವಾಗಿ ಅವರನ್ನು ಹಿಂಬಾಲಿಸುತ್ತಾರೆ. ದೇವೇಗೌಡರನ್ನು ಮಣ್ಣಿನ ಮಗ ಎಂದು ಕರೆಯುತ್ತಾರೆ. ಅವರ ರೈತಪರ ಹೋರಾಟಗಾರ. ರಾಜಕೀಯ ಅವರ ಉಸಿರು. ವೃದ್ಧಾಪ್ಯದಲ್ಲಿಯೂ ರಾಜಕೀಯ ಅವರನ್ನು ಬಿಡದು. ತಾನು ಗೆದ್ದೆ ಗೆಲ್ಲುತ್ತೇನೆ ಎನ್ನುವ ಅವರ ಛಲ ಮೆಚ್ಚತಕ್ಕದ್ದು. ಗೆಲ್ಲಲ್ಲಿ ಸೋಲಲಿ ಫೀನಿಕ್ಸ್‌ನಂತೆ ಮತ್ತೆ ಮತ್ತೆ ಎದ್ದು

ಬರುವಂತೆ ಕನ್ನಡಿಗನು ಸದಾ ಕಾಲ ಚೈತನ್ಯದ ಚಿಲುಮೆಯಂತೆ ಪುಟಿಯುತ್ತ ಕನ್ನಡಕ್ಕಾಗಿ ಹೋರಾಡಬೇಕು ಎಂಬುದು ರಾಜಣ್ಣನವರ ಆಸಕ್ತಿಯಾಗಿತ್ತು. ತಮ್ಮ ೭೭ನೇ ವಯಸ್ಸಿನಲ್ಲಿಯೂ ಬುದ್ಧ, ಅಂಬರೀಷನ ಪಾತ್ರ ಮಾಡಬೇಕು, ಸಿನೆಮಾಕ್ಕೆ ಬಣ್ಣ ಹಚ್ಚಬೇಕು, ಕನ್ನಡ ಸಿನೆಮಾ ಕನ್ನಡ ಸಿನೆಮಾ ಎನ್ನುವ ಅವರ ಹಂಬಲ ನೋಡಿದರೆ ಇವರೊಬ್ಬ ಕನ್ನಡ ಸೇನಾನಿ ಎನ್ನದೆ ಇನ್ನೇನೂ ಅನ್ನಬೇಕು? ಇದು ನಿಜವಾದ ಹೋರಾಟಗಾರನ ಚೈತನ್ಯ. "ಎಲ್ಲಾದರೂ ಇರು ಎಂತಾದರೂ ಇರು ಎಂದೆಂದಿಗೂ ನೀ ಕನ್ನಡವಾಗಿರು, ಕನ್ನಡವೇ ಸತ್ಯ ಕನ್ನಡವೇ ನಿತ್ಯ" ಎನ್ನುವ ಕುವೆಂಪು ಅವರ ಸಾಹಿತ್ಯಕ್ಕೆ ಧ್ವನಿಯಾದವರು ರಾಜಣ್ಣನವರು. ಸಾಹಿತ್ಯಕ್ಕೆ ಕುವೆಂಪು ಇದ್ದಹಾಗೆ ಸಿನೆಮಾಕ್ಕೆ ರಾಜಣ್ಣನವರು.

ಅಂದು ರಾಜಣ್ಣನವರ ಅಮೃತಹಸ್ತದಿಂದ ಹಚ್ಚಿದ ಕನ್ನಡದ ದೀಪ ಈಗಲೂ ಆರಿಲ್ಲ. ಸದಾ ಉರಿಯುತ್ತಿದೆ. ಕನ್ನಡಕ್ಕೆ ಏನಾದರೂ ದ್ರೋಹ ಅನ್ಯಾಯ ಆದರೆ ಕನ್ನಡಿಗರು ಡಾ. ರಾಜ್‌ಕುಮಾರ್ ಜೈ ಎನ್ನುತ್ತ ಘೋಷಣೆ ಕೂಗುತ್ತ, ರಾಜಣ್ಣನವರ ಭಾವಚಿತ್ರ ಹಿಡಿದು ಹೋರಾಟಕ್ಕೆ ಧುಮುಕುವುದುಂಟು. ಅಂತಹ ನಾಯಕರು ರಾಜಣ್ಣನವರು. ಹೋರಾಟಗಾರರಿಗೆ ಬೆಂಬಲ ಶಕ್ತಿ ಸ್ಫೂರ್ತಿ. ಆ ಕಾಲಕ್ಕೆ ಅನ್ಯ ಭಾಷೆಯ ಸಿನೆಮಾಗಳು ಬಿಡುಗಡೆ ಹೊಂದಿ ಕನ್ನಡ ಭಾಷೆಯ ಸಿನೆಮಾಕ್ಕೆ ಥಿಯೇಟರ್ ಸಿಗದ ಕಾಲದಲ್ಲಿ ಅದರ ವಿರುದ್ಧ ಹೋರಾಡಿದರು. ಅನ್ಯ ಭಾಷೆಯ ಪ್ರಭಾವವನ್ನು ಕಡಿಮೆಗೊಳಿಸಿ ಅತ್ಯುತ್ತಮ ಕನ್ನಡ ಚಿತ್ರಗಳನ್ನು ನೀಡುವುದರ ಮೂಲಕ ಕನ್ನಡದ ಹೋರಾಟಗಾರರು ಎನಿಸಿಕೊಂಡರು. ಡಬ್ಬಿಂಗ್ ಕನ್ನಡ ರಂಗವನ್ನು ಪ್ರವೇಶಿಸುವುದಕ್ಕೆ ತಡೆದರು. ಟಿಪ್ಪು ಸುಲ್ತಾನ್ ಮುಂತಾದ ಹಿಂದಿ ಧಾರಾವಾಹಿಗಳು ಕನ್ನಡ ನಾಡನ್ನು ಪ್ರವೇಶಿಸಲು ಸಾಧ್ಯವಾಗಲೇ ಇಲ್ಲ. ಹಾಗೆಂದು ಅವರು ಅನ್ಯ ಭಾಷೆಯನ್ನು ಎಂದೂ ದ್ವೇಷಿಸಲು ಇಲ್ಲ, ಹೃದಯದ ಭಾಷೆ ಕನ್ನಡ ಎಂದೇ ಎಲ್ಲೆಡೆ ಹೇಳುತ್ತಿದ್ದರು. ಹಲವು ಭಾಷೆಗಳು ಅವರಿಗೆ ತಿಳಿದಿದ್ದರೂ ಸದಾಕಾಲ ಕನ್ನಡ ಮಾತನಾಡುತ್ತಾ ಕನ್ನಡ ಮಾತನಾಡಲು ಪ್ರೋತ್ಸಾಹಿಸುತ್ತಿದ್ದರು. ಇದು ಸದ್ದಿಲ್ಲದೆ ನಡೆಯುವ ಹೋರಾಟ.

ಇನ್ನು ಕನ್ನಡ ಸಾಹಿತಿಗಳೊಂದಿಗೆ ಅವರ ಒಡನಾಟ, ಕಾದಂಬರಿಕಾರರ ಚಿತ್ರಗಳನ್ನು ಚಿತ್ರ ಮಾಡುವಾಗ ಕಾದಂಬರಿಕಾರರಿಗೆ ನೀಡುತ್ತಿದ್ದ ಗೌರವ ಅಪಾರವಾದದ್ದು. ಮೂಲ ಕೃತಿಕಾರರಿಗೆ ದ್ರೋಹ ಮಾಡಿ ಸಾಹಿತಿಗಳಿಗೆ ನೋವುಂಟು ಮಾಡುವ ಕೆಲಸ ರಾಜಣ್ಣನವರಾಗಲೀ ಅವರ ಚಿತ್ರತಂಡ ಮಾಡಿಲ್ಲ. ಬದಲಾಗಿ ೩೩ ಕಾದಂಬರಿಗಳು ೨ ನಾಟಕ, ೧ ಸಣ್ಣ ಕಥೆಯನ್ನು ಚಿತ್ರಕಥೆಯನ್ನಾಗಿ ಮಾಡಿ ಸಾಹಿತ್ಯವನ್ನು ಜನಸಾಮಾನ್ಯರಿಗೆ ಉಣಬಡಿಸಿದರು. ಇದು ಸಹಾ ಒಂದು ಕನ್ನಡದ ಹೋರಾಟವಲ್ಲವೇ? ಕಾದಂಬರಿ ಕ್ಷೇತ್ರಕ್ಕೆ ಕೀರ್ತಿ ತಂದವರು ರಾಜಣ್ಣನವರು. ಹೋರಾಟ ಎಂದರೆ ಕನ್ನಡಕ್ಕೆ ಜೈ, ಕನ್ನಡಕ್ಕೆ ಜೈ ಎಂದು ಕೂಗಿದರೆ ಮಾತ್ರ ಹೋರಾಟ ಪೂರ್ತಿಗೊಳ್ಳುವುದಿಲ್ಲ. ಹಾರಾಟ, ಕೂಗಾಟ, ಕಿರುಚಾಟ ಇಲ್ಲದೆಯೇ ಮರದೊಳಗಿನ ಕಿಚ್ಚಿನಂತೆ ಹೋರಾಟಗಾರ ತನ್ನ ಹೋರಾಟದ ಕಿಚ್ಚನ್ನು ಸದಾಕಾಲ ತನ್ನ ಮನದಲ್ಲಿ ಆರದಂತೆ ನೋಡಿಕೊಳ್ಳುವುದು ಸಮಯ ಬಂದಾಗ ಅದಕ್ಕೆ ಒಂದು ಕಿಡಿ ಬೆಂಕಿ ಹತ್ತಿದರೂ ಅದು ಧಗ್ಗನೆ ಹತ್ತಿ ಉರಿಯುವುದು. ಹೋರಾಟಗಾರನ ಲಕ್ಷಣ. ಸಹಿಷ್ಣುತೆ ಎಂದರೆ ಅಸಹಾಯಕತೆ

ಎಂದಲ್ಲ, ಶಾಂತತೆ ಎಂದರೆ ಸೋಲು ಎಂದಲ್ಲ. ಸಹಿಷ್ಣುತೆ ಜೊತೆ ಪೌರುಷತ್ವವೂ ಕೆಚ್ಚೆದೆಯ ಕನ್ನಡಿಗ, ಮಯೂರವರ್ಮನಲ್ಲಿ ರಾಜಣ್ಣನವರಲ್ಲಿ ಅಡಗಿತ್ತು. ಸಮಯ ಬಂದಾಗ ಧಗ್ಗನೆ ಹತ್ತಿ ಉರಿದು ಲಕ್ಷ ಲಕ್ಷ ಜನರನ್ನು ಹೋರಾಟದ ಹಾದಿಗೆ ಕರೆದೊಯ್ಯಿತು.

**೫.೨ ರಾಜರ ಚಿತ್ರಗಳಲ್ಲಿ ಕನ್ನಡ ಪ್ರಜ್ಞೆ ಮತ್ತು ಜನಪದ ನೋಟ**

ಡಾ.ರಾಜ್ ಅವರ ಸಿನಿಮಾಗಳಲ್ಲಿ ಕನ್ನಡ ಪ್ರಜ್ಞೆಯನ್ನು ಕಾಣಬಹುದು. ಕನ್ನಡ ಸಂಸ್ಕೃತಿಯನ್ನು ಅನೇಕ ಸಿನಿಮಾಗಳಲ್ಲಿ ತುಂಬಿದ್ದಾರೆ. ನಾಡುನುಡಿಗಳ ಉದಾತ್ತ ಸ್ಮರಣೀಯಕೆ. ಅವರ ಪ್ರೇರಣೆ ಜನರಲ್ಲಿ ಕನ್ನಡ ಭಾಷೆ ನಮ್ಮ ಜಲ ಮೂಲ ತಾಯಿ, ನೆಲಸಂಸ್ಕೃತಿಯಾಗಿ ಹೊರಹೊಮ್ಮಿದೆ ಎಂದು ಹೇಳಬಹುದು.

"ನನ್ನೀ ಪ್ರಾಣದಾಣೆ ಇಂಥ ನೆಲವ ಕಾಣೆ
ನನ್ನ ಕನ್ನಡ ಸೇವೆ ಅದೇ ಗುರಿ ಎನ್ನುವುದೇ
ಈ ದಿನ ಮಜ ಕಂಡನು ನಿಜ ಆದೇನು ರಾಜ"[೮]

ಈ ಗೀತೆಯು ದೇವರ ಮಕ್ಕಳು ಸಿನಿಮಾದಲ್ಲಿ ಕಂಡುಬರುತ್ತದೆ. ಈ ಗೀತೆಯು ಕನ್ನಡ ಭಾಷೆಯ ನೆಲೆ ಆಳ ಮನಪ್ರಜ್ಞೆಯಾಗಿ ಜನರಲ್ಲಿ ಮುಖ್ಯವಾಗಿ ಬುಡಕಟ್ಟುಗಳ ಸಮುದಾಯದ ಈ ಚಿಂತನೆಗಳು ನೆಲವೂರಲು ಸಹಕರಿಸುತ್ತದೆ.

"ಶ್ರೀಗಂಧ ಸೀಮೆಯಲಿ ತಂಗಾಳಿಯಂತೆ
ಬಂಗಾರದ ಭೂಮಿಯ ಹೊಂಬಾಳೆಯಂತೆ
ಪುಣ್ಯ ಪುರುಷರ ಇತಿಹಾಸದಂತೆ
ಕನ್ನಡ ಜನರ ಔಧಾರ್ಯದಂತೆ
ಜನ್ಮ ಜನ್ಮದ ಅನುಬಂಧ ಹೃದಯ ಹೃದಯಗಳ ಪ್ರೇಮಾನುಬಂಧ"[೯]

ಎಂದು (ಸಾಕ್ಷಾತ್ಕಾರ) ರಾಜ್ ಹಾಡುತ್ತಾರೆ. ಕನ್ನಡ ಪ್ರಜ್ಞೆಯ ಗೀತೆ "ಹುಟ್ಟಿದರೆ ಕನ್ನಡ ನಾಡಲಿ ಹುಟ್ಟಬೇಕು/ಮೆಟ್ಟಿದರೆ ಕನ್ನಡ ಮಣ್ಣಲ್ಲಿ ಮೆಟ್ಟಬೇಕು" ಎಂದು ಹೇಳಿದಾಗ ಅಭಿಮಾನದ ಮಹಾಪೂರದ ಶಕ್ತಿಯನ್ನೇ ಅಡಗಿಸಿಕೊಂಡಿದೆ ಎಂದು ಹೇಳಬಹುದು.

ಇನ್ನು ಕನ್ನಡದಲ್ಲಿ ಮಾತೆಯ ರೂಪವನ್ನೆ ಕಂಡು ಮನದುಂಬಿ ಸ್ತುತಿಸಿದ ಅನೇಕ ಗೀತೆಗಳು ರಾಜ್ ಚಿತ್ರಗಳಲ್ಲಿ ಬಳಸಲ್ಪಟ್ಟಿವೆ. ಕನ್ನಡ ಪ್ರಜ್ಞೆಯನ್ನು ಜಾಗೃತಿಗೊಳಿಸುವ ಒಂದು ಗೀತೆ ;

"ಯಾರು ಏನು ಮಾಡುವರು
ನನಗೇನು ಕೇಡು ಮಾಡುವರು
ಸತ್ಯದ ಹಾದಿಯಲಿರುವಾಗ
ಧರ್ಮವೇ ರಕ್ಷಿಸುತ್ತಿರುವಾಗ

ಈ ನಾಡಿಗೆ ನಾಡೆ ಹಿಂದಿರುವಾಗ
ಕನ್ನಡವೇ ನನ್ನುಸಿರಾಗಿರುವಾಗ”[೧೧]

ಎಂದು ಹಾಡುತ್ತಾರೆ. ಹೀಗೆ ರಾಜ್‌ರ ಸಿನಿಮಾಗಳಲ್ಲಿ ಕನ್ನಡ ಭಾಷೆ ಪ್ರಜ್ಞೆಯ ಕನ್ನಡತನ ಅಸ್ತಿತ್ವವನ್ನೇ ಮೂಡಿಸಲಾಗಿದೆ. ಇದರಿಂದ ಕನ್ನಡ ಧಾರೆಯಲ್ಲಿ ಮಿಂದ ಯಾರೊಬ್ಬರೂ ಸಹ ಅದನ್ನು ಮರೆಯಲು ಸಾಧ್ಯವಿಲ್ಲ. ಕನ್ನಡದ ಕಲಾವಿದರಾಗಿ ತಮ್ಮ ಹೊಣೆಯನ್ನು ಅರಿತು ಚಿತ್ರಗಳು ಸಾರ್ವಜನಿಕ ವೇದಿಕೆಗಳು, ಉತ್ಸವಗಳು ಸಮಾರಂಭಗಳು ಕನ್ನಡ ಹಿರಿಮೆಯನ್ನು ಪ್ರತಿ ಎಡೆಯಲ್ಲಿಯೂ ಕನ್ನಡ ನುಡಿಯ ಸವಿಯನ್ನೇ ಚೇತೋಹಾರಿಯಾಗಿ ಹಂಚುವ ನಮ್ಮ ಸಂಸ್ಕೃತಿಯ ಹೆಮ್ಮೆಯ ಪ್ರತೀಕ ಹೌದು. ಹಳೆಯಬೇರು ಹೊಸಚಿಗುರಿನ ಹೊಸತನ ಮೂಡಿಸಲು ರಾಜ್ ಅವರ ಅಭಿನಯದ ಕನ್ನಡವನ್ನು ಕುರಿತು ಒಂದು ಗೀತೆಯ ಮೂಲಕ ಅಥವಾ ಡೈಲಾಗ್ ಮೂಲಕ ಜನರಲ್ಲಿ ಭಿತ್ತರಿಸಲಾಗುತ್ತದೆ. ಹೀಗೆ ಹಲವಾರು ಕನ್ನಡತನ ಜಾಗೃತಿ ಧ್ವನಿ ಸುರುಳಿಗಳಲ್ಲಿ ರಾಜ್ ಗಾಯನ ಹಾಡುವಿಕೆಯಿಂದ ಕೂಡಿದೆ. 'ಕನ್ನಡವೆ ಸತ್ಯ' ಧ್ವನಿ ಸುರುಳಿಯಾಗಿ ಕನ್ನಡ ಭಾಷೆಯ ಸ್ವಾರಸ್ಯಕರ ರಚನೆಯಾಗಿವೆ. ಕುವೆಂಪು ಅವರ 'ಎಲ್ಲಾದರು ಇರು ಎಂತಾದರು ಇರು ಎಂದೆಂದಿಗೂ ನೀ ಕನ್ನಡವಾಗಿರು' ಈ ಗೀತೆಯಿಂದ ಸಾಹಿತ್ಯ ಅಭಿರುಚಿಯಿಂದ ಕನ್ನಡ ಭಾಷೆ, ಸಂಸ್ಕೃತಿ ದರ್ಶನವಾಗಲಿ ಅದು ಸಾರ್ವಕಾಲಿಕ ಚಿಂತನೆಯಾಗಿ ಮೇರು ಪಕ್ವತೆಯಿಂದ ಹಳೆಯದರಿಂದ ಹೊಸತನ ಮೂಡುವುದಾಗಲಿ ಎನ್ನುವುದು ರಾಜ್ ಅವರ ಆಶಯವಾಗಿದೆ. ಕುವೆಂಪು ಅವರು ನಾಡು ನುಡಿಯ ಹಿನ್ನೆಲೆಯಾಗಿ ರಾಜ್ ಅವರನ್ನು ಹೀಗೆ ಕರೆಯುತ್ತಾರೆ "ವಿಶ್ವಮಾನವೀಯತೆಯು ಕರ್ನಾಟಕದಲ್ಲಿ ಸಾರಬಲ್ಲ ಸಮರ್ಥರು ಡಾ.ರಾಜಕುಮಾರ"[೧೨] ಎಂದು ಹೇಳುತ್ತಾರೆ. ರಾಜ್ ಅವರನ್ನು ಕುರಿತು ಕುವೆಂಪು ಅವರು ಹೊಗಳಿಕೆಯ ಮಾತುಗಳನ್ನು ಆಡಿದ್ದಾರೆ. ಈ ಸಾರಸ್ವತ ದಿಗ್ಗಜರ ಉಸಿರಾಟ ವಿಶ್ವ ಮಾನವತಾವಾದವನ್ನು ತವರು ನೆಲದಲ್ಲಿ ಸಾರಚೆಲ್ಲಿ ಸಮರ್ಥರನ್ನು ಕುವೆಂಪು ಮನ ಅರಸುತ್ತಲೇ ಇದ್ದಾಗ ಅವರ ಮನ ತಟ್ಟಿದೆ. ಈ ಹಿನ್ನೆಲೆಯಲ್ಲಿ ರಾಜ್ ಅವರ ಶ್ರದ್ಧೆ ಮಾನವೀಯತೆ ಮೌಲ್ಯಗಳು, ಜೀವನ ದೃಷ್ಟಿ ಸಾಮಾಜಿಕ, ನಾಡುನುಡಿ ಭಾಷೆ ಮೌಲ್ಯವನ್ನು ಎತ್ತಿಹಿಡಿಯುವ ಪ್ರವೃತ್ತಿ ಇದೆ ಎಂಬುದನ್ನು ಕುವೆಂಪು ಗುರುತಿಸಬಲ್ಲರು. ಅಂತರಾತ್ಮದಲ್ಲಿ ಕನ್ನಡ ಡಿಂಡಿಮ ಭಾರಿಸುವ ಹೃದಯವೆಲ್ಲ ಶಿವನಾಗಿ ಡಾ.ರಾಜ್ ಅವಿರ್ಭವಿಸಿದರು. ಹಲವಾರು ಮಹೋನ್ನತ ಪಾತ್ರಗಳಲ್ಲಿ ಪರಕಾಯ ಪ್ರವೇಶ ಪಡೆಯುವ ಮೂಲಕ ರಾಜ್ ಎರಡು ಸಾವಿರ ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯದ ಸಿರಿವಂತ ಸಂಸ್ಕೃತಿಯನ್ನು ಪಂಡಿತರಿಂದ ಪಾಮರರವರೆಗೆ ತಲುಪಿಸಿ ಜ್ವಲಂತ ಸಮಸ್ಯೆಯಾದ ಕನ್ನಡ ನುಡಿ, ಭಾಷೆ, ಸಂಸ್ಕೃತಿಯ ರಾಯಭಾರಿಯಾಗಿದ್ದು ಸಾರ್ಥಕತೆ ಎಂದು ಕುವೆಂಪು ಅವರ ಅಭಿಪ್ರಾಯವಾಗಿದೆ.

ಡಾ.ರಾಜ್ ಅವರ 'ಸರ್ವಮಂಗಳಾ' ಸಿನಿಮಾವು ಕೂಡ ಚಳುವಳಿಯಾತ್ಮಕ ಅಂಶವನ್ನು ಒಳಗೊಂಡಿತು ರಾಷ್ಟ್ರಭಕ್ತಿ ಮತ್ತು ಕನ್ನಡ ನೆಲದ ಬದುಕುಗಳಿಗೆ ಹೋರಾಡುವ ಪ್ರವೃತ್ತಿ ಕಂಡುಬರುತ್ತಾರೆ. ಮಹಾತ್ಮ ಗಾಂಧೀಜಿಯವರ ಅಸಹಕಾರ ಚಳುವಳಿಯಿಂದ ಪ್ರಭಾವಿತನಾಗಿ ಕಾಲೇಜು ದಿನಗಳಿಂದಲೇ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದ ಯುವಕನಾಗಿ ರಾಜ್ ಅಭಿನಯಿಸಿದ ಚಿತ್ರವಾಗಿದೆ. ಹಾಗೆಯೇ "ಸತ್ಯದ

ನುಡಿಯ ಆಲಿಸಿರೋ ಪಾಲಿಸಿರೋ, ಸೋದರ ದ್ವೇಷ ಹೆಣ್ಣಿನ ದೋಷ ಆಯಿತೋ ದೇಶಕ್ಕೆ ಯಮಪಾಶ[೧೧೨] ಎಂದು ಹಾಡುವುದರ ಮೂಲಕ ಜನರಲ್ಲಿ ದೇಶೀಯ ಪ್ರಜ್ಞೆ ಮೂಡಿಸಿದ್ದಾರೆ. ರಾಜಕುಮಾರ್ ಅವರು ನಾಡಿಗೆ ನೀಡಿದ ಕೊಡುಗೆ ಏನು ಎಂಬುದಕ್ಕೆ ಹಲವಾರು ರೀತಿಯಲ್ಲಿ ಉತ್ತರ ಕೊಟ್ಟಿದ್ದಾರೆ. ಸಾಂಸ್ಕೃತಿಕ ಲೋಕದಲ್ಲಿ ರಾಜಕುಮಾರ್ ಅವರ ಸೃಜನಾತ್ಮಕ ಕೃತಿಗಳಿಂದಲೇ ಅವರ ಚಿತ್ರಗಳಾಗಿವೆ ಎಂದು ಹೇಳಬಹುದು. ಚಿತ್ರಗಳ ಮೂಲಕ ಅವರು ಮೂಡಿಸಿದ ಸಾಮಾಜಿಕ ಪರಿಣಾಮಗಳೇನು ? ಸಾಂಪ್ರದಾಯಿಕ ನೆಲೆಬೆಲೆಯೇನು? ಸಾಂಸಾರಿಕ ಚೌಕಟ್ಟಿಗೆ ಅವರ ಚಿತ್ರಗಳು ನೀಡಿದ ಸಂದೇಶಗಳೇನು? ನಾಡಿನ ಚಾರಿತ್ರಿಕ ಸಂದರ್ಭಗಳಿಗೆ ರಾಜಕುಮಾರ ಚಿತ್ರಗಳು ಸ್ಪಂದಿಸಿದ್ದು ಹೇಗೆ ಎಂಬುದನ್ನು ಚಿತ್ರಗಳ ಮೂಲಕ ತೋರಿಸಿ ಕೊಟ್ಟಿದ್ದಾರೆ.

ಡಾ.ರಾಜಕುಮಾರ ಅವರು ತಮ್ಮ ವೃತ್ತಿಜೀವನದಲ್ಲಿ ಜಾನಪದ ವಸ್ತುಗಳಿಗೆ ಒತ್ತು ನೀಡಿದವರು ಏಕೆಂದರೆ ಅವರ ಬಹುತೇಕ ಚಿತ್ರಗಳು ಜಾನಪದ ಅಂಶಗಳ ಮೂಲಕ ಮುನ್ನೆಲೆಗೆ ಬಂದಿವೆ. ಅವರು ಬುಡಕಟ್ಟು ಜೀವನದ ಒಂದು ಪ್ರತೀಕವಾಗದೆ ಬಿ.ಎಂ.ಶ್ರೀ.ಯವರು ಹೇಳುತ್ತಾರೆ. 'ಜನವಾಣಿ ಹೂ ಕವಿವಾಣಿ ಬೇರು' ಎಂಬ ತತ್ವದಲ್ಲಿ ಬಂದವರು ಹೀಗಾಗಿ ಅವರ ೨೦೫ ಕನ್ನಡ ಚಿತ್ರಗಳು ಕನ್ನಡ ರಸಿಕರಿಗೆ ಕೇವಲ ಮನೋರಂಜನೆಯನ್ನು ನೀಡಿದ್ದಲ್ಲದೆ ಕನ್ನಡ ಉಳಿಸಿ ಬೆಳೆಸಿದೆ. ರಾಜಣ್ಣನವರ ಕನ್ನಡ ಪ್ರೀತಿ ಅಗಾಧವಾದದ್ದು ಅನ್ಯಾಥಾ ಶರಣಂ ನಾಸ್ತಿ ಎನ್ನುವಂತೆ ಕನ್ನಡ ಭಾಷೆಯನ್ನು ಹೊರತುಪಡಿಸಿ ಅನ್ಯ ಭಾಷೆಯ ಸಿನಿಮಾಗಳಲ್ಲಿ ಅವರು ಅಭಿನಯಿಸಿಲ್ಲ. ಅವರಿಗೆ ಹಿಂದಿ ಚಿತ್ರರಂಗದಿಂದ ದೊಡ್ಡ ಅವಕಾಶ ಸಿಕ್ಕರು, ಅದನ್ನು ನಿರಾಕರಿಸಿ ಕನ್ನಡ ಭಾಷೆಯೇ ನನಗೆ ಬೇಕಾದೆಲ್ಲವನ್ನು ಕೊಟ್ಟಿದೆ ಎಂದು ಸಂತೃಪ್ತಿ ಪಟ್ಟು ಹಿರಿಯತನ ತೋರಿಸಿದ್ದಾರೆ. ಹಾಗೆಯೇ ನಾವು ನಂಬಿದ ಕನ್ನಡ ಮಾತೃಭಾಷೆಗೆ ತಾಯಿ ಭಾಷೆಯಂತೆ ಬೆಳೆಸಿಕೊಂಡ ನಂಟನ್ನು ಬಿಡಬಾರದು ಎನ್ನುವರು. ಅಂತಹದರ ಜೊತೆಗೆ ಕನ್ನಡ ನಾಡು ನಮಗೆ ಬಹಳಷ್ಟನ್ನು ನೀಡಿದೆ ಅದಕ್ಕೆ ನಾವು ಪ್ರತಿಯಾಗಿ ಏನು ನೀಡಿದ್ದೇವೆ ಎನ್ನುವುದನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ.

೧೯೫೪ ರಿಂದ ೨೦೦೬ರವರೆಗಿನ ಅವರ ಕನ್ನಡ ಸೇವೆಯನ್ನು ಗಮನಿಸುತ್ತ ಹೋದರೆ ಒಂದಕ್ಕಿಂತ ಒಂದು ಅಮೂಲ್ಯವಾದ ಚಿತ್ರವನ್ನೆ ಅವರು ಕನ್ನಡ ನಾಡಿಗೆ ನೀಡಿದ್ದಾರೆ. ಅವರು ಕನ್ನಡನಾಡನ್ನು ಅಗಲಿರಬಹುದು ಅವರ ಸಿನಿಮಾಗಳು ಇಂದಿಗೂ ಚಿರಸ್ಥಾಯಿಯಾಗಿ ಉಳಿದಿದೆ. ರಾಜಣ್ಣನವರ ಒಂದೊಂದು ಚಿತ್ರಗಳು ಮುತ್ತು ರತ್ನಗಳಂತೆ ಕಂಗೊಳಿಸುವುದರ ಜೊತೆಗೆ ಪೌರಾಣಿಕ, ಸಾಮಾಜಿಕ, ಐತಿಹಾಸಿಕ ಜನಪದೀಯ ಅಂಶಗಳನ್ನು ಚಿತ್ರಗಳು ಕನ್ನಡ ನಾಡಿನ ಕನ್ನಡ ಮಣ್ಣಿನ ವಾಸನೆ ಉಳ್ಳವುಗಳಾಗಿವೆ. ಕನ್ನಡ ಸಂಸ್ಕೃತಿಯನ್ನು ಬೀರುತ್ತಿರುವ ಮಲ್ಲಿಗೆಯ ದಿಂಡಿನ ಹಾಗೇ ನಮ್ಮನ್ನು ನಮ್ಮೊಳಗೆ ಸುತ್ತಾಡುವ ಪ್ರಯತ್ನ ಮಾಡುತ್ತಿವೆ. ರಾಜಣ್ಣನವರನ್ನು ನೆನಪಿಸಿಕೊಳ್ಳುವುದು ಎಂದರೆ ಕನ್ನಡಭಾಷೆ ಮಾತಾಡುವ ಬಗೆ ನಮ್ಮ ಮನಸ್ಸಿಗೆ ಬರುತ್ತದೆ. ಅಲ್ಲಿ ಪುಸ್ತಕ ರೂಪದ ಕ್ಲಿಷ್ಟ ಪದಗಳ ಸಂಗ್ರಹವೂ ಇಲ್ಲ. ಅನ್ಯ ಭಾಷೆಗಳ ಸಮ್ಮಿಶ್ರಣವೂ ಇಲ್ಲ ಸಿನಿಮಾದಲ್ಲಿ ಕನ್ನಡ ಭಾಷೆ ಎಂದರೆ ಹೀಗಿರಬೇಕು ಎಂದು ಹೇಳಿದವರು

ರಾಜಕುಮಾರ್ ಅವರು. ಆದರೆ ಇಂದಿನ ಸಿನಿಮಾಗಳು ರಾಜಣ್ಣನವರನ್ನು ಅನುಕರಣೀಯ ಮಾಡುತ್ತಿವೆಯೇ. ಭಾಷೆಯಲ್ಲಿ ಹಿಡಿತವಿದೆಯೆ ಎಂದು ಕೇಳಬೇಕಿನಿಸುತ್ತದೆ.

ಸಿನಿಮಾ ಕ್ಷೇತ್ರದಲ್ಲಿ ಕಥೆಯ ವಸ್ತುವಿನ ಮೇಲೆ ಭಾಷೆ ಪ್ರಯೋಗ ನಡೆಯುತ್ತದೆ. ಹೀಗಾಗಿ ಮಂಡ್ಯ, ಮೈಸೂರು, ಧಾರವಾಡ, ರಾಯಚೂರು, ಮಂಗಳೂರು, ಕಲಬುರಗಿ, ಎಂದು ವಿಂಗಡಿಸುತ್ತಾ ಹೋದರೆ ಎಲ್ಲರೂ ಮೆಚ್ಚುವ ಕನ್ನಡ ಯಾವುದು ಎಂಬ ಪ್ರಶ್ನೆ ಬರುವುದು ಸಹಜ. ಹಾಗಾಗಿ ಕನ್ನಡ ಮಾತಾಡುವ ಎಲ್ಲರೂ ತಿಳಿಯುವ ಕನ್ನಡ ಎಂದರೆ 'ನಮ್ಮ ಮನೆಯ ಭಾಷೆ' ಎನಿಸಬೇಕು ಅಂತಹ ತಿಳಿ ಕನ್ನಡವನ್ನು ರಾಜಣ್ಣನವರ ಸಿನಿಮಾಗಳಲ್ಲಿ ಬಳಸಲಾಗಿದೆ. ಮಯೂರ, ಕವಿರತ್ನ ಕಾಳಿದಾಸ, ಬಬ್ರುವಾಹನ, ರಣಧೀರ ಕಂಠೀರವ, ಹೀಗೆಯೇ ಚಿತ್ರಗಳಲ್ಲಿ ರಾಜ್ ಅವರಿಗಾಗಿ ಅವರ ಸಂಭಾಷಣೆಕಾರರು ಬರೆದ ಕನ್ನಡವನ್ನೇ ರಾಜಣ್ಣನವರು ಎಷ್ಟು ಸಲೀಸಾಗಿ ನುಡಿಯುತ್ತಾರೆ. ಅವರ ಎಮ್ಮೆ ತಮ್ಮಣ್ಣ, ಸಂಪತ್ತಿಗೆ ಸವಾಲ್ ಮುಂತಾದ ಸಿನಿಮಾಗಳಲ್ಲಿ ಜಾನಪದ ಕನ್ನಡವನ್ನು ಬಳಸಿದ್ದಾರೆ. ಸ್ಪಷ್ಟ ಉಚ್ಚಾರಣೆ ದೇವರು ಅವರಿಗೆ ಕೊಟ್ಟ ವರ. ಮನೆಯಲ್ಲೂ ಕನ್ನಡ ಮಾತನಾಡುತ್ತಿದ್ದು ಕನ್ನಡ ನಾಡು ನುಡಿಯ ಹಿರಿಯ ಗರಿಮೆಗಳನ್ನು ಸಾರುವ ಹಲವು ಕನ್ನಡ ಗೀತೆಗಳಲ್ಲಿ ಅವರು ಹಾಡಿದ್ದರು. ಕನ್ನಡ ಮಾತನಾಡುವುದು ಧರ್ಮ. ಕನ್ನಡ ಬಗ್ಗೆ ಹೇಳುವುದು, ಹಾಡುವುದು, ನನ್ನ ವೃತ್ತಿ ಎಂದು ತಿಳಿದಿದ್ದರು. ಅವರ ಹಾಡುಗಳು 'ಹುಟ್ಟಿದರೆ ಕನ್ನಡ ನಾಡಿನಲ್ಲಿ ಹುಟ್ಟಬೇಕು, ಎಂಬುದು ನಾಣ್ಣುಡಿಯಾಗಿ ಬದಲಾಗಿದೆ.

ಗ್ರಾಮೀಣ ಸೊಗಡಿನ ಕಥಾಹಂದರ ಹೊಂದಿರುವ ಚಂದವಳ್ಳಿ ತೋಟ, ಸರ್ವಮಂಗಳಾ, ಸಂಪತ್ತಿಗೆ ಸವಾಲ್ ಮುಂತಾದ ಸಿನಿಮಾಗಳಲ್ಲಿ ಮಧ್ಯೆ ಮಧ್ಯೆ ಒಗಟು ಗಾದೆ, ಒಡಪುಗಳನ್ನು ಬಳಸಲಾಗಿದೆ. ಕನ್ನಡ ಭಾಷೆಯ ಸೊಗಡು ಚಿತ್ರವನ್ನು ಗೆಲ್ಲಿಸಿದೆ. ಈಗಲೂ ಕಸ್ತೂರಿ ನಿವಾಸದಂತಹ ಕೆಲವು ಹಳೆಯ ಸಿನಿಮಾಗಳು ಬಿಡುಗಡೆಯಾಗಿ ಜನರು ಪುನಃ ಮೆಚ್ಚಿದ್ದಾರೆ. "ಕನ್ನಡ ನಾಡು ನುಡಿಗಳ ಹಿತಾಸಕ್ತಿಗಳಿಗೆ ಧಕ್ಕೆಯಾಗುವ ವಿಷಯ ಸಂದರ್ಭಗಳಲ್ಲಿ ರಾಜಕುಮಾರ ಜನಪದದ ಸಮಷ್ಟ ಶಕ್ತಿಯನ್ನು ಎಚ್ಚರಿಸಿದ್ದಾರೆ. ಸ್ವರಕ್ಷಣೆಗೆ ಸಜ್ಜಾಗುವಂತೆ ಅದನ್ನು ಹುರಿದುಂಬಿಸಿದ್ದಾರೆ.[೧೪] ಎಂದು ನಿಸಾರ್ ಅಹಮದ್ ಅವರು ಗುರುತಿಸಿದ್ದಾರೆ. ಸಿನಿಮಾ ಬದುಕಿನಿಂದ ಅವರು ಕಲಿತಿದ್ದು ಬಹಳ. ಸಿನಿಮಾದ ವಸ್ತು, ಸಾಮಾಜಿಕ ಕಳಕಳಿಯಿಂದ ಕೂಡಿರಬೇಕು ಎಂಬುದನ್ನು ರಾಜಣ್ಣವನರು ತಿಳಿದುಕೊಂಡಿದ್ದರು. ಸಮಾಜದಲ್ಲಿ ಅನ್ಯಾಯ, ಅಕ್ರಮ ಮಾಡುವ ವಿಷಯ ಅವರು ಚಿತ್ರವನ್ನು ಒಪ್ಪಿಕೊಳ್ಳುತ್ತಿರಲಿಲ್ಲ ಎಂಬುದು ಮುಖ್ಯ ಸಂಗತಿಯಾಗಿದೆ. ರಾಜ್ ಅವರು ಅಭಿಮಾನಿಗಳನ್ನು ಹೆಚ್ಚು ಕಂಡಿದ್ದು ಗೋಕಾಕ್ ಚಳುವಳಿಯಲ್ಲೇ ಎಂದು ಹೇಳಿದ್ದಾರೆ. ರಾಜಕುಮಾರ್ ಅವರು ಒಂದು ಸಂದರ್ಭದಲ್ಲಿ "ಗೋಕಾಕ್ ಚಳುವಳಿ ಸಂದರ್ಭದಲ್ಲಿ ಧಾರವಾಡಕ್ಕೆ ಬಂದಿದ್ದೆ, ವೈಯಕ್ತಿಕವಾಗಿ ನನಗೆ ಗೋಕಾಕ್ ಚಳುವಳಿ ಬಗ್ಗೆ ಏನೂ ತಿಳಿದಿರಲಿಲ್ಲ. ನೀವು ಬಂದರೆ ಹೋರಾಟಕ್ಕೆ ಶಕ್ತಿ ಬರುತ್ತದೆ ಎಂದರು, ಅದಕ್ಕಾಗಿ ಬಂದೆ. ಅದರ ಮೂಲಕ ರಾಜ್ಯಾದ್ಯಾಂತ ಸುತ್ತಿ ನನ್ನ ಅಭಿಮಾನಿ ದೇವರುಗಳನ್ನು ನೋಡಲು ಸಾಧ್ಯವಾಯಿತು. ನನ್ನ ಅಭಿಮಾನಿಗಳಲ್ಲಿಯೇ ನಾನು ದೇವರನ್ನು ಕಾಣುತ್ತೇನೆ."[೧೫] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ಅಭಿಮಾನಿಗಳನ್ನು ದೇವರಾಗಿ ಕಂಡಿದ್ದಕ್ಕೆ

ಮುತ್ತುರಾಜನಲ್ಲಿ ಈಗ ಕರ್ನಾಟಕದ ಮನೆಯ ರಾಜಕುಮಾರನಾಗಿ ಎಲ್ಲರ ಮನಸ್ಸಿನಲ್ಲಿ ಒಡಮೂಡಿದ್ದಾರೆ.

ಡಾ.ರಾಜ್ ಅವರನ್ನು ಅಭಿಮಾನಿಗಳು ದೇವರೆಂದು ಭಾವಿಸುತ್ತಾರೆ. ತಮ್ಮ ಮನೆಯ ಬಳಿ ಬಂದ ಅಭಿಮಾನಿಗಳ ಮಾಹಿತಿ ಪಡೆದು ಉಪಚಾರ ಮಾಡುವ ಔದಾರ್ಯ ಅವರಲ್ಲಿತ್ತು. ಅಂದಿನ ಸರಕಾರ, ಸಾಹಿತ್ಯ ಕ್ಷೇತ್ರ ಪ್ರತಿನಿಧಿಗಳು ಹಾಗೂ ರಾಜ್‌ರೊಂದಿಗೆ ಮಾತನಾಡಿ ಹಸಿರು ನಿಶಾನೆ ತೋರಿಸುವ ಮೂಲಕ ಕನ್ನಡ ಕಡ್ಡಾಯ ಎಂದು ನಿರ್ಧಾರ ಮಾಡುತ್ತದೆ. ಗೋಕಾಕ್ ವರದಿಯಲ್ಲಿ ರಾಜ್‌ರ ಪಾತ್ರ ದೊಡ್ಡ ಮಹತ್ವ ಎಂದು ಹೇಳಬಹುದು. ಈ ನಿಟ್ಟಿನಲ್ಲಿ ಜನರ ಭಾವನೆಗಳು ಸಿನಿಮಾಗಳ ಮೂಲಕ ತಮ್ಮನ್ನು ತಾವು ಕಂಡುಕೊಳ್ಳಲು ಸಾಧ್ಯತೆಯಿಂದ ಎಂಬುದು ಅರಿತುಕೊಂಡವರು. ಹೀಗಾಗಿ ಸಾಮಾಜಿಕ ಜ್ವಲಂತ ಸಮಸ್ಯೆಗಳ ಬಗ್ಗೆ ಹೆಚ್ಚಿನ ಮಹತ್ವ ಕೊಡುವುದು ಅವರ ಉದ್ದೇಶವಾಗಿತ್ತು.

**೫.೩ ರಾಜ್‌ರವರ ಕನ್ನಡ ಉಚ್ಚಾರಣೆ :**

ಕನ್ನಡದ ಭಾಷೆಯನ್ನು ಅಚ್ಚ ಸೊಗಸುತನದಿಂದ ಮಾತನಾಡುವ ಪ್ರವೃತ್ತಿ ಡಾ.ರಾಜ್ ಅವರದು. ಇದನ್ನು ಅವರ ಸಿನಿಮಾದಲ್ಲಿ ಗಮನಿಸಬಹುದು. ಜೊತೆಗೆ ಬಹುಶಃ ಅವರಷ್ಟು ಸ್ಪುಟವಾಗಿ ಸ್ವಚ್ಛವಾಗಿ, ಸುಂದರವಾಗಿ ಕನ್ನಡವನ್ನು ಮತನಾಡುವ ನಟ ಪ್ರಸ್ತುತ ದಿನಗಳಲ್ಲಿ ಸಿಗುವುದು ವಿರಳವಾಗಿದೆ. ಹೀಗಾಗಿ ಅವರಿಂದ ಕನ್ನಡ ಭಾಷೆಯ ಸೊಗಡು, ಆ ಭಾಷೆಯ ಸತ್ವ-ಪ್ರೀತಿ ಸಾಮೂಹಿಕವಾಗಿ ವೃದ್ಧಿಸಿದೆ. ಅವರ ಭಾಷಾ ಪ್ರೀತಿ ಪರ್ಯಾಯವಾಗಿ ಅದೊಂದು ಆದರ್ಶವಾಗಿ ಪರಂಪರೆಯಾಗಿ ಅನುಕರಣೆಯಾಗಿ ಬೆಳೆಯುತ್ತಿದೆ. ಡಾ.ರಾಜ್ ಅವರಿಂದ ಕನ್ನಡ ಬೆಳೆದಿದೆ ಉಳಿದಿದೆ ಕನ್ನಡ ಪ್ರೀತಿ ಹೆಚ್ಚಿದೆ. ಗೋಕಾಕ್ ಚಳುವಳಿಗಳಂತೂ ಸಾವಿರಾರು ಆನೆ ಬಲ ಬಂದಂತಾಗಿತ್ತು. ಅದಕ್ಕೊಂದು ಚಾರಿತ್ರಿಕ ತಿರುವು ಲಭಿಸಿದ್ದೂ ಅವರ ಪ್ರವೇಶದಿಂದಲೇ 'ಹುಟ್ಟಿದರೆ ಕನ್ನಡ ನಾಡಿನಲ್ಲಿ ಹುಟ್ಟಬೇಕು' ಅನ್ನುವ ಹಾಡಿನ ಜನಪ್ರಿಯತೆ ಕೂಡ ನಾಡು, ನುಡಿಯ ಅಕ್ಕರೆಯನ್ನು ಪರೋಕ್ಷವಾಗಿ ಹೆಚ್ಚಿಸಿದೆ.

"ನಾವಾಡುವ ನುಡಿಯೇ ಕನ್ನಡ ನುಡಿ,
ನಾವಿರುವ ತಾಣವೇ ಗಂಧದ ಗುಡಿ,

"ಹಾಲಿನ ಮಳೆಯೋ ಜೇನಿನ ಹೊಳೆಯೋ
ಸುಧೆಯೋ ಕನ್ನಡ ಸವಿನುಡಿಯೋ"

ಹೀಗೆ ಭಾಷಾಭಿಮಾನ ನಾಡಾಭಿಮಾನದ ನೂರು ನೂರು ಹಾಡುಗಳು ಅವರ ಚಿತ್ರಗಳಿಂದ ಹೊರ ಹೊಮ್ಮಿದೆ. ಕನ್ನಡ ನಾಡನ್ನೇ ಸಾಂಸ್ಕೃತಿಕವಾಗಿ ಕಟ್ಟಲು ಅಪರೂಪದ ಕೊಡುಗೆ ಕೊಟ್ಟಿದೆ. ನಾಡನ್ನೇ ರಾಜಕೀಯವಾಗಿ, ಸಾಮಾಜಿಕವಾಗಿ ಕಟ್ಟುವುದು ಬಹಳ ಮುಖ್ಯ. ರಾಜಕುಮಾರ್ ಚಿತ್ರಗಳು ಬಹಳ ಸತ್ವಪೂರ್ಣವಾಗಿ ಮೂಡಿ ಬಂದಿದೆ. ಐತಿಹಾಸಿಕ ಕೆಲಸವನ್ನು ರಾಜ್ ಮತ್ತು ಅವರ ಚಿತ್ರಗಳು ಮಾಡಿದಷ್ಟು ಅನುಚಾನವಾಗಿ ಇನ್ಯಾರು ಮಾಡಿಲ್ಲ ಎಂದೆ ಹೇಳಬಹುದು.

## ೫.೪ ನಾಡೋಜ ರಾಜಕುಮಾರ್ ಅವರ ಸಿನಿಮಾಗಳಲ್ಲಿ ಸಾಮಾಜಿಕ ಅನನ್ಯತೆ ಮತ್ತು ಅನ್ಯಭಾಷೆಯ ಚಿತ್ರಗಳ ಮೇಲೆ ಪ್ರಭಾವ.

ನಾಡೋಜ ರಾಜಕುಮಾರ್ ಅವರ ಚಿತ್ರಗಳು ಸಾಮಾಜಿಕತೆಯ ಮೂಲಕ ಜನರಲ್ಲಿ ಸಾಮಾಜಿಕತ್ವದ ಅರಿವು ಮೂಡಿಸಿದವುಗಳಾಗಿವೆ. ರಾಜ್ ಅವರ ಸಿನಿಮಾ ನಡೆ 'ಬೇಡರ ಕಣ್ಣಪ್ಪ' ಚಿತ್ರದ ಮೂಲಕ ನಡೆಯಿತು. ನಂತರ ರಾಜ್‌ಕುಮಾರ್ ವಿಭಿನ್ನ ಬಗೆಬಗೆಯ ಪಾತ್ರಗಳಲ್ಲಿ ಅಭಿನಯಿಸಿದವರು. ಅವರು ಮೊದಲು ಸಮಾಜದಲ್ಲಿ ಭಕ್ತಿ ಪ್ರಾಧಾನ್ಯತೆ ಹೆಚ್ಚು ಹೊತ್ತುತಂದವರು, ಹಾಗೂ ಭಕ್ತಿಯ ಮೂಲಕ ಜನರಲ್ಲಿ ನಂಬಿಕೆ, ವಿಶ್ವಾಸ ಮನೋಸ್ಥೈರ್ಯತೆಯನ್ನು ಪ್ರೌಢಪಡಿಸಿದವರು ಎಂದು ಹೇಳಬಹುದು. ಇದಾದ ನಂತರ ಪೌರಾಣಿಕ ಹಾಗೂ ಜಾನಪದ ಪಾತ್ರಗಳಿಗೂ ಆಯ್ಕೆಯಾದರು. ರಾಯರ ಸೊಸೆ ಚಿತ್ರದ ಮೂಲಕ ಸಾಮಾಜಿಕ ಪಾತ್ರಗಳಿಗೂ ಸೈ ಎನಿಸಿಕೊಂಡವರು. ಅವರ ಅರವತ್ತಕ್ಕೂ ಹೆಚ್ಚು ವರ್ಷಗಳಿಗೂ ಮಿಗಿಲಾದ ಅವರ ಸುದೀರ್ಘ ಚಿತ್ರರಂಗದ ಜೀವನದಲ್ಲಿ 'ಆಡುಮುಟ್ಟದ ಸೊಪ್ಪಿಲ್ಲ ರಾಜಕುಮಾರ ನಿರ್ವಹಿಸದ ಪಾತ್ರವಿಲ್ಲ' ಎಂಬುದು ಹೆಗ್ಗಳಿಕೆಯ ವಿಷಯವಾಗಿದೆ. ಅವರ ರಸತತ್ವ ಒಂದು ಶೈಲಿಯಲ್ಲಿ ಐತಿಹಾಸಿಕ, ಸಾಮಾಜಿಕ ಭಕ್ತಿ, ಖಳ, ರಾಕ್ಷಸ, ದೇವ, ದಾನವ, ಬಾಂಡ್, ಜಾನಪದ ಆಶಯಗಳಾಗಿ ಅವರ ಪಾತ್ರಕ್ಕೆ ಮೂಲಕ ಜನರಲ್ಲಿ ಸಾಮಾಜಿಕ ಅನನ್ಯತೆಯನ್ನು ಸೃಷ್ಟಿಸಿದ್ದಾರೆ. ಹಾಗಾಗಿ ಒಬ್ಬ ಸಾಮಾನ್ಯ ವ್ಯಕ್ತಿ ಜನಮಾನಸರಲ್ಲಿ ನಾಡೋಜನಾಗಿ, ಡಾಕ್ಟರೇಟ್ ಪಡೆದು, ದಾದಾ ಸಾಹೇಬ್ ಫಾಲ್ಕೆ ವಿಜೇತನಾಗಿ ನಾಡಿನ ದೇವ ಮಾನವನಾಗಿ ಜನರಲ್ಲಿ ಅಚ್ಚಳಿಯದೇ ಉಳಿದಿದ್ದಾರೆ. ಅವರ ಅಭಿವ್ಯಕ್ತತೆಯಲ್ಲಿ ಯಾವುದೇ ಪಾತ್ರವಿರಲಿ, ಅದನ್ನು ನಟಿಸಿ ಎಲ್ಲರ ಮನದಲ್ಲಿ ಸೈ ಎನಿಸಿದವರು. ಡಾ.ರಾಜ್ ಅವರ ಅಭಿನಯ ಭಾಷೆಯ ಮತ್ತು ಅವರಲ್ಲಿ ಒಬ್ಬ ಭಾಷಾ ವಿಜ್ಞಾನಿಯನ್ನು ಮೀರಿ ಭಾಷೆಯ ತತ್ವವಾಗಿ ಒಳಗೊಂಡಿದ್ದರು ಎಂದು ಹೇಳಬಹುದು. ಹಾಗಾಗಿ ರಾಜ್ ಅವರ ಸಿನಿಮಾಗಳು ವಿದ್ಯುತ್ ಸಂಚಲನೆಯನ್ನು ಮಾಡಿದ್ದವು.

ಡಾ.ರಾಜ್ ಅವರು ಸಾಮಾಜಿಕ ಅನನ್ಯತೆಯನ್ನು ವಸ್ತುವಿನ ಮೂಲಕ ಅಥವಾ ವಸ್ತುವನ್ನು ಸಾಮಾಜಿಕ ವಿಡಂಬನೆಯ ಮೂಲಕ ಜನರಲ್ಲಿ ಸಾಮಾಜಿಕ ಕಳಕಳಿಯನ್ನು ಅನಾವರಣಗೊಳಿಸುತ್ತಾರೆ. ಕೌಟುಂಬಿಕ ಸಮಸ್ಯೆ, ಮೇಲು ಕೀಳು ದಲಿತ-ಬಲಿತರ ಆರ್ಥಿಕತೆ, ದುಡಿಸಿಕೊಳ್ಳುವ ಮನೋಭಾವನೆ ಕೃಷಿಯೇತರ ಸಂಬಂಧಿಗಳ ವಿಷಯ ಕುರಿತಂತೆ ಅವರ ಸಿನೆಮಗಳೂ ನಮ್ಮನ್ನು ಚಿಂತನೆಗೀಡು ಮಾಡುತ್ತದೆ. ಹೀಗೆ ಜನಪದ ಅಂಶಗಳು ಹಳ್ಳಿಯ ಸಂಸ್ಕೃತಿಯನ್ನು ಬಿಂಬಿಸುವ ಜೊತೆಗೆ ಅಲ್ಲಿ ನಡೆಯುವ ನೈಜ ಘಟನೆಗಳನ್ನು ಡಾ.ರಾಜ್ ಅವರ ಸಿನಿಮಾಗಳು ನಿರೂಪಿಸಿವೆ. ಈ ಹಿನ್ನೆಲೆಯಾಗಿ ಅವರ ಸಿನಿಮಾಗಳು ಸಾಮಾಜಿಕ ಅನನ್ಯತೆ. ವಿಡಂಬನೆ ಮೂಲಕ ಜನರ ಮನ ಮುಟ್ಟಿವೆ.

ಸಮಾಜದ ವ್ಯವಸ್ಥೆ ಹಾದಿ ತಪ್ಪಿದಾಗ ಮಾಧ್ಯಮಗಳೇ ಎಚ್ಚರಿಸುವ ಕೆಲಸ ಮಾಡುತ್ತವೆ. ಈ ನಿಟ್ಟಿನಲ್ಲಿ ಕಥೆ, ಕಾದಂಬರಿ, ಲೇಖನ, ವಿಮರ್ಶೆ, ಚಿಂತನೆ ಬರಹಗಳನ್ನು ರಂಗಭೂಮಿಯ ಮಿಲನದೊಂದಿಗೆ ಸಿನಿಮಾ ಕ್ಷೇತ್ರದಲ್ಲಿ ಜೊತೆ ಜೊತೆಯಾಗಿ ಒಡಮೂಡಿಸುವ ಕೆಲಸ ರಾಜಣ್ಣನವರ ಚಿತ್ರಗಳಲ್ಲಿ ಯಥೇಚ್ಛವಾಗಿ

ಕಂಡುಬಂದಿದೆ. ವರದಕ್ಷಿಣೆಯಂತಹ ಸಾಮಾಜಿಕ ಜ್ವಲಂತ ಪಿಡುಗಿನ ವಿರುದ್ಧ ಧ್ವನಿ ಎತ್ತಿದ್ದು ರಾಜ್‌ರ ಮೊದಲ ಸಾಮಾಜಿಕ ಚಿತ್ರ 'ರಾಯರ ಸೊಸೆ' ಕ್ರಮೇಣ ಕುಲವಧು, ಮದುವೆ ಮಾಡಿಕೊಂಡು ಚಿತ್ರಗಳಲ್ಲಿ ವರದಕ್ಷಿಣೆಗೆ ಬಲಿಯಾಗುವುದನ್ನು ಖಂಡಿಸಲಾಗಿದೆ. ಇಂಥ ವಿಷಯ ವಸ್ತುವನ್ನು ಸಾಹಿತ್ಯದ ಮಿಲನದೊಂದಿಗೆ ಪುರಾಣ, ಚರಿತ್ರೆ, ಸಾಮಾಜಿಕ ನೆಲೆಯಲ್ಲಿ ಚಿತ್ರಿಸಲಾಗಿದೆ. ಕನ್ನಡ ಖ್ಯಾತ ಸಾಹಿತಿಗಳ ಕಥೆ, ಕಾದಂಬರಿ ವಸ್ತುವನ್ನು ಆಯ್ಕೆ ಮಾಡಿಕೊಂಡು ಸಾಮಾಜಿಕ ಒಡಲೊಳಗೆ ನಡುವೆ ನಡೆಯುವ ಮನಸ್ಥಿತಿಯನ್ನು ಸಿನಿಮಾಗಳು ಒಡಮೂಡಿಸಿವೆ. ಇದರಿಂದ ರಾಜ್ ಅವರ ಸಿನಿಮಾಗಳು ಬಹುತೇಕ ಹಳ್ಳಿಯ ಸಂಸ್ಕೃತಿ. ಕೃಷಿ ಸಂಸ್ಕೃತಿ ದೀನ ದಲಿತರ ಸಾಮಾಜಿಕ ಪಿಡುಗುಗಳನ್ನು ತೋರಿಸುವ ಚಿತ್ರಗಳಾಗಿವೆ. ವರದಕ್ಷಿಣೆ ಎಂಬ ವಸ್ತುವಿಗಿಂತ ವರಕ್ಷಿಣೆಯ ವ್ಯಾಮೋಹದಲ್ಲಿ ಹೆಣ್ಣು ಹಡೆದವರ ಜೀವ ಹಿಂಡುವ ಪ್ರವೃತ್ತಿಯನ್ನು ಸಿನಿಮಾಗಳ ಮೂಲಕ ಅನಾವರಣಗೊಂಡಿವೆ. ಇದರಿಂದ ಜನರಲ್ಲಿ ಸಮಾಜದಲ್ಲಿ ಜಾಗೃತಿ ಮನೋಜ್ಞಾನ ಬೆಳೆಯುತ್ತದೆ.

ಸಾಹಿತ್ಯದ, ಸಾಂಸ್ಕೃತಿಕ ನಾಯಕರ ಜೀವನದ ಜೋಡಣೆ ಅವರ ಸಾತ್ವಿಕತೆಯನ್ನು ಭಕ್ತಿ ಎಂಬ ವಸ್ತುವಿನ ಮೂಲಕ ಸಾಮಾಜಿಕ ವಿಡಂಬನೆ ಅಂಶಗಳಾಗಿ ಸಮಾಜವನ್ನು ವಿಮರ್ಶೆ ಮಾಡಿವೆ. ಇದರಲ್ಲಿ ಮಹಾತ್ಮ ಕಬೀರ, ಕನಕದಾಸ, ಪುರಂದರದಾಸ, ಬಸವೇಶ್ವರನು ಸಂತ ತುಕಾರಾಂ. ಸರ್ವಜ್ಞ ಇನ್ನು ಅನೇಕ ಸಂತ ಮಹನೀಯರ ಚಿಂತನೆಗಳು ನಾಡೋಜ ರಾಜಕುಮಾರ ಚಿತ್ರಗಳಲ್ಲಿ ನೈಜ ಜಾಗೃತಿಗೆ ಮುನ್ನುಡಿಯಾಗಿ ನೀಡಿದ್ದಾರೆ "ಹಿಂದು ಮುಸ್ಲಿಂ ಭಾವೈಕ್ಯತೆಗಾಗಿ ತಮ್ಮ ಸುಧಾರಣಾ ಶೀಲನಾಗಿ ಬಾಳನ್ನೇ ಸಮರ್ಪಿಸಿಕೊಂಡ ಕಬೀರ್‌ನಾಗಿರಲುಬಹುದು. ಹಾಗೆಯೇ,

ಕುಲ ಕುಲ ಕುಲವೆಂದು ಹೊಡೆದಾಡದಿರಿ
ನಿಮ್ಮ ಕುಲದ ನೆಲೆಯ ಏನಾದರೂ ಬಲ್ಲಿರಾ...

ಎಂದು ಕನಕದಾಸ ಹೇಳುವ ವಿಚಾರವಾಗಿರಬಹುದು.

ಆಚಾರವಿಲ್ಲದ ನಾಲಿಗೆ
ನಿನ್ನ ನೀಚ ಬುದ್ಧಿಯ ಬಿಡುವ ನಾಲಿಗೆ..

ಎಂದು ಹೇಳಿದ ಪುರಂದರದಾಸರು,

ಕಲಬೇಡ, ಕೊಲಬೇಡ,
ಹುಸಿಯ ನುಡಿಯಲು ಬೇಡ
ಅನ್ಯರಿಗೆ ಅಸಹ್ಯ ಪಡಬೇಡ
ತನ್ನಬಣ್ಣಿಸಬೇಡ ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗ ಶುದ್ಧಿ

ಎಂಬುದಾಗಿ ಇಡೀ ವ್ಯಕ್ತಿತ್ವವನ್ನೇ ವಿಡಂಬಿಸಿದ ಬಸವೇಶ್ವರ ಚಿತ್ರದಲ್ಲಿ ಹೊನ್ನಪ್ಪ ಭಾಗವತರೊಂದಿಗೆ

ಬಿಜ್ಜಳನಾಗಿ ಸಾಮಾಜಿಕ ಸಾರ್ವಜನಿಕ ಸಮತೋಲನಕ್ಕೆ ಭಕ್ತಿ ಒಂದೇ ಮಾರ್ಗ ಎಂದು ಸಾರಿದ ಸಂತ ತುಕಾರಾಂ ಬದುಕಿನ ಎಲ್ಲಾ ಅಸಹನೆಗಳನ್ನು ಪ್ರಶ್ನಿಸಿ ಮೂಲಧಾತುವನ್ನು ತ್ರಿಪದಿಗಳಿಗಿಂತ ನಿಚ್ಚಳವಾಗಿ ತೋರಿದ ಸರ್ವಜ್ಞಮೂರ್ತಿ"೧೬ ಈ ಎಲ್ಲಾ ಪಾತ್ರಗಳು ಹಂಚಿರುವ ಸಾಮಾಜಿಕ ಅನನ್ಯತೆಯ ವಿಡಂಬನೆಯಲ್ಲಿ ಗಾಢವಾದ ಅರ್ಥಗಳು ಬಹು ಸರಳವಾಗಿ ರಾಜ್ ಮೂಲಕ ಜನಮನ ಸೇರಿವೆ. ಮನ ಮುಟ್ಟಿವೆ. ಜೊತೆಗೆ ಜನರನ್ನು ಆತ್ಮ ವಿಮರ್ಶೆ ಚಿಂತನೆಗೆ ಹಚ್ಚಿವೆ.

ನಾಡೋಜ ರಾಜ್ ಅವರ ಬದುಕಿನಲ್ಲಿ ತಮ್ಮನ್ನು ತಾವು ಒಗ್ಗಿಕೊಳ್ಳುವ ಮೂಲಕ ಚಿತ್ರಗಳು ಜನರ ಮನದಲ್ಲಿವೆ. ಹಾಗಾಗಿ ಚಂದವಳ್ಳಿ ತೋಟ, ಭೂದಾನ, ಮಲ್ಲಮ್ಮನ ಪವಾಡ ಚಿತ್ರಗಳು ಅವಿಭಕ್ತ ಕುಟುಂಬಗಳಿಗೆ ಬಂದೊದಗಿರುವ ಸಂಸ್ಕೃತಿಗಳ ವೈಪರಿತ್ಯಗಳಿಗೆ ವಿಡಂಬನೆಗೆ ಹಚ್ಚಿದ ಚಿತ್ರಗಳಾಗಿವೆ. ಜೊತೆಗೆ ಅರಿವು ಮೂಡಿಸುವುದು ಈ ಚಿತ್ರಗಳ ಉದ್ದೇಶ. 'ನಾಂದಿ' ಚಿತ್ರದಲ್ಲಿ ಕಿವುಡ, ಮೂಕ, ಅಂಗವಿಕಲ ಮಕ್ಕಳ ಮುಖ್ಯವಾಹಿನಿಯಲ್ಲಿ ಉಳಿದಿದ್ದಾರೆ ಎಂದು ಧೈರ್ಯದಿಂದ ಸಾರಿದ ಸಾಮಾಜಿಕ ಸುಧಾರಣಾ ಪಾತ್ರಗಳು ಮೂಡಿಬಂದಿವೆ. ಹಾಗೆಯೇ ಕುಷ್ಠರೋಗದ ಕುರಿತ ಭಯಾನಕ ಕಲ್ಪನೆಗಳಿಗೆ ಇದರಿಂದಾಗುವ ಸಾಂಸಾರಿಕ ಅರಿವಿನ ಅಲ್ಪತನಗಳಿಗೆ ಬುದ್ಧಿವಾದ ಹೇಳುತ್ತಾ ಕುಷ್ಠ ಗುಣಪಡಿಸಬಹುದಾದ ಕಾಯಿಲೆ ಎಂಬ ಸಾಮಾಜಿಕ ಅರಿವು ಮೂಡಿಸಿದ ಚಿತ್ರ ಬಂಗಾರದ ಹೂ. ಹಣ್ಣೆಲೆ ಚಿಗುರಿದಾಗ ಮತ್ತು ನಾ ನಿನ್ನ ಮರೆಯಲಾರೆ ಚಿತ್ರಗಳು ವಿಧವಾ ವಿವಾಹಕ್ಕೆ ಇರುವ ಸಾರ್ವಜನಿಕ ಅಡ್ಡಿಗಳಿಗೆ ಸವಾಲನ್ನು ಎಸೆದು ಸಮ್ಮತಿ ಸೂಚಿಸುವ ಪ್ರಗತಿಪರ ಕಾಳಜಿಯ ಚಿತ್ರಗಳಾಗಿ ಹೊರಹೊಮ್ಮಿದೆ. ಈ ಚಿತ್ರಗಳು ನೋಡುಗರಲ್ಲಿ ಮೈಮನವು ಚಿಂತನ ಮಂಥನ ಅವಕಾಶ ಮಾಡಿಕೊಡಬಲ್ಲದು. ವ್ಯವಸ್ಥೆಯ ಕಪ್ಪೆ ಚಿಪ್ಪಿನಿಂದ ಹೊರಬಂದು ಚಿಂತನೆಗೆ ನಮ್ಮನ್ನು ಒಳಪಡಿಸುತ್ತದೆ. ಕೌಟುಂಬಿಕ ನೀತಿಯ ಕ್ರಮಬದ್ಧತೆಯನ್ನು ಎತ್ತಿಹಿಡಿದ ಸಂದೇಶ ಚಿತ್ರಗಳಲ್ಲಿವೆ.

ಜೊತೆಗೆ ಕರುಳಿನ ಕರೆ ಚಿತ್ರದ ದೃಶ್ಯವೊಂದರಲ್ಲಿ ಕತ್ತಲಿನ ಈ ಸಮಾಜವನ್ನು ಪ್ರಗತಿಶೀಲ ವ್ಯಕ್ತಿ ಹೇಗೆ ಬೆಳೆಯಬಹುದು ಎಂಬುದನ್ನು ದೀಪವೊಂದರಿಂದ ಹಲವು ದೀಪಗಳಲ್ಲಿ ಬೆಳಗಿಸುವ ಮೂಲಕ ರಾಜ್ ಅವರು ಸಾಮಾಜಿಕ ಸಂದೇಶವನ್ನು ಪ್ರತ್ಯಕ್ಷ ಎಂಬುದಾಗಿ ತೋರಿಸಿದ್ದಾರೆ. ಅವರ 'ಬಿಡುಗಡೆ' ಚಿತ್ರದಲ್ಲಿ ಸಮಾಜದಲ್ಲಿ ನಡೆಯುವ ಕೆಲವು ಕ್ರೌರ್ಯ, ಅಕ್ರಮ, ಸುಳ್ಳು ಅತ್ಯಾಚಾರ, ಮೋಸ ವಿರುದ್ಧ ದನಿ ಎತ್ತಲಾಗಿದೆ. ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಎತ್ತಿ ಸಂದೇಶ ಸಾರುವ ವಿಚಾರಗಳು ರಾಜಣ್ಣನವರ ಚಿತ್ರಗಳಲ್ಲಿ ಬಿಂಬಿತವಾಗಿದೆ. ಜ್ವಾಲಾಮುಖಿ, ಧ್ರುವತಾರೆ, ಜೀವನಚೈತ್ರ, ಆಕಸ್ಮಿಕ ಮತ್ತು ಶಬ್ದವೇಧಿ ಚಿತ್ರಗಳು ಸಾಮಾಜಿಕ ನ್ಯಾಯದ ಜೊತೆಗೆ ಸಾಮಾಜಿಕ ಜ್ವಲಂತ ಸಮಸ್ಯೆಗಳಿಗೆ ಈ ಚಿತ್ರಗಳು ಮಾರ್ಮಿಕವಾಗಿ ವಿಡಂಬನೆಗೆ ಒಳಪಡಿಸಿದೆ. ಹಾಗೆಯೇ ಸಮಾಜವನ್ನು ಅವರಲ್ಲಿ ಹುಳುಕುಗಳನ್ನು ಚಿಕಿತ್ಸಕ ದೃಷ್ಟಿಯಿಂದ ಕಂಡ ಕಳಕಳಿಯ ಪತ್ರಕರ್ತನ ಸಾಧಕ ಬಾಧಕವನ್ನು ಜ್ವಾಲಾಮುಖಿ ಚಿಕಿತ್ಸೆಯಲ್ಲಿ ರಾಜ್ ಅವರು ತೋರಿಸಿದ್ದಾರೆ. "ಮತ್ತಿನಿಂದ ಮುಚ್ಚಿಕೊಂಡ ಕಣ್ಣನ್ನೊಮ್ಮೆ ಬಿಟ್ಟು ನೋಡಿ" ಉಳ್ಳವರನ್ನು ಉದ್ದೇಶಿಸಿ ಹೇಳುವ ಮಾತಾಗಿದೆ. ಇವರ ಚಿತ್ರಗಳು ರೈತಪರ ಕಾಳಜಿಯ ಪರವಾಗಿದ್ದು ನಾಡಿನ ರೈತರ

ವಿವಿಧ ಸಮಸ್ಯೆಗಳತ್ತ ಬೊಟ್ಟು ಮಾಡಿ ತೋರುವಂತಿದೆ. ಧ್ರುವತಾರೆ ಚಿತ್ರದಲ್ಲಿ ವಕೀಲರಾಗಿ ರಾಜ್ ರೈತರ ಪರವಾಗಿ ನಿಲ್ಲುವ ಪರಿ ಅತ್ಯಾದ್ಭುತವಾಗಿದೆ.

"ನ್ಯಾಯವೆಲ್ಲಿ ಅಡಗಿದೆ ?
'ಆರ ಕೇಳಿ ಬಾನಿನಿಂದ ಸೂರ್ಯ
ಬಿಸಿಲ ಚೆಲ್ಲುವ, ಯಾರಿಗಾಗಿ
ವಾಯು ಗಾಳಿಯಾಗಿ ಬೀಸುವ,
ಯಾರ ಕರೆಗೆ ಮೇಘರಾಜ
ಮಳೆಯ ಸುರಿಸುವ...

ಎಂದು ಗೀತೆಯೊಂದರಲ್ಲಿ ಪ್ರಶ್ನಿಸುವ ರಾಜ್ ರೈತ ಸಮುದಾಯದ ಆಶೋತ್ತರಗಳ ಈಡೇರಿಕೆಗೆ ನಾಯಕತ್ವ ವಹಿಸಿ ಸಂಘ ಶಕ್ತಿಯಾಗಿ, ಸಿಂಹಶಕ್ತಿಯಾಗಿ ಘರ್ಜಿಸುತ್ತಾರೆ. ಇಂತಹ ಚಿತ್ರಗಳು ಯಾವಾಗಲೂ ಸಮಾಜಕ್ಕೆ ರೈತರ ಪರ ಕಾಳಜಿ ಹೊಂದಿರುವ ಸಮೂಹಕ್ಕೆ ಮತ್ತು ರೈತರಿಗೆ ಪ್ರೇರಣೆಯಾಗುತ್ತದೆ. ಈ ಹಿನ್ನೆಲೆಯಿಂದ ರೈತರ ಸಮಸ್ಯೆ ಸವಾಲುಗಳು ಹಿಂದಿನಿಂದ ಇಂದಿನವರೆಗೆ ಉಳಿದುಕೊಂಡಿವೆ. ಸರಕಾರಗಳು ಶಾಶ್ವತ ಪರಿಹಾರ ನೀಡುವುದಿಲ್ಲ. ರೈತರಿಗೆ ಶಾಶ್ವತ ನೀತಿಯನ್ನೂ ಸಹಕಾರ ಕೊಡಲು, ನೆರವಾಗಬೇಕಾಗಿದೆ. ಜೀವನ ಚೈತ್ರವು ಕೂಡ ಜನರು ಕುಡಿದು ಹಾಳಾಗುವ ಪರಿಣಾಮವನ್ನು ತಿಳಿಸುತ್ತದೆ. ಹಿನ್ನೆಲೆಯಾಗಿ ಜೀವನಚೈತ್ರ ಲಿಕ್ಕರ್ ಲಾಬಿಯ ವಿರುದ್ಧವಾಗಿ ಬ್ರಹ್ಮಾಸ್ತ್ರವಾದ ಚಿತ್ರ ಸಾಮಾಜಿಕವಾಗಿಯೇ ಕುಡಿತದ ದುಷ್ಪರಿಣಾಮವನ್ನು ವಿಶ್ಲೇಷಿಸುತ್ತದೆ.

ಈ ಎಲ್ಲಾ ಅಂಶಗಳನ್ನು ಸಾಮಾಜಿಕ, ನ್ಯಾಯದ ತಳಹದಿಯೊಳಗೆ ಜನರಿಗೆ ಹೆಚ್ಚಾಗಿ ಯುವ ಶಕ್ತಿಗೆ ಮುಟ್ಟಬೇಕು. ಜೊತೆಗೆ ಯುವಶಕ್ತಿಯು ಮನಸಿಟ್ಟು ದುಡಿದರೆ ನಾಡಿಗೆ ಚಿನ್ನದ ಬೆಳೆ ಬೆಳೆಯಬಹುದು. ಯುವಕರಿಗೆ ಎದ್ದೇಳಿ ಸಂಸ್ಕೃತಿ ಕಾಪಾಡಿ ಯುವಕರೇ ನಾಡಿನ ಶಿಲ್ಪಿಗಳು ಎಂದು ರಾಜ್‌ರವರು ಒಂದು ಹಾಡಿನ ಮೂಲಕ ನಾಡಿನ ಯುವಶಕ್ತಿಯ ಮೇಲೆ ಸಾಮಾಜಿಕ ಹೊಣೆ ಅಪಾರವಾದುದು ಎಂದು ತಿಳಿಸುತ್ತಾರೆ. ಅಂದಿನ ಸ್ವಾಮಿ ವಿವೇಕಾನಂದರು 'ಎದ್ದೇಳಿ ಯುವಕರೇ ನಿಮ್ಮ ಗುರಿ ಮುಟ್ಟುವ ತನಕ' ಎಂದು ಕರೆಕೊಟ್ಟಿದ್ದರು. ರಾಜ್ ಅವರು ಸಾಮಾಜಿಕ ವಿಡಂಬನೆಯಲ್ಲಿ ಅತ್ಯಂತ ನಿರ್ಣಾಯಕ ಪಾತ್ರ ವಹಿಸಿದ್ದರು. ಸಾರ್ವಕಾಲಿಕ ಶ್ರೇಷ್ಠ ಚಿತ್ರ ಬಂಗಾರದ ಮನುಷ್ಯದಲ್ಲಿ ಹಾಡಿನ ಮೂಲಕ ಸಮಾಜಕ್ಕೆ

"ಆಗದು ಎಂದು ಕೈಲಾಗದು ಎಂದು ಕೈಕಟ್ಟಿ ಕುಳಿತರೆ
ಸಾಗದು ಕೆಲಸವು ಮುಂದೆ, ಮನಸ್ಸೊಂದಿದ್ದರೆ
ಮಾರ್ಗವು ಉಂಟು ಕೆಚ್ಚದೆ ಇರಬೇಕೆಂದು" ಎಂದು ನುಡಿದಿದ್ದಾರೆ.

ಡಾ.ರಾಜ್ ಅವರು ಅನೇಕ ಸಿನಿಮಾಗಳಲ್ಲಿ ನಟಿಸಿದರು, ಅವರ ಉದ್ದೇಶ ಸಮಾಜಕ್ಕೆ ನ್ಯಾಯವನ್ನು ಒದಗಿಸುವುದೇ ಆಗಿದೆ. ಅವರ ನಿಜ ಬದುಕು ಹೇಗೆ ಅವರ ಸಿನಿಮಾ ಬದುಕಿನ ಪಾತ್ರಗಳಲ್ಲಿ ಕುಳಿತು ಆಂತರ್ಯದ ಒಳಗೆ ಕೆಲಸ ಮಾಡಿವೆ ಎಂಬುದು ತಿಳಿಯಬೇಕಾಗಿದೆ. ಅವರ ಪಾತ್ರಗಳಿಗೆ ಪರಾಮರ್ಶಿಸುವ, ಹಾಗೂ ಆತ್ಮವಿಮರ್ಶಿಸುವ ಗುಣ ಇದೆ.

ನಾಡೋಜ, ರಾಜಕುಮಾರ್ ಅವರ ಸಿನಿಮಾ ಬದುಕು ಕನ್ನಡ ಭಾಷೆ, ನಾಡು ನುಡಿಗೆ ಸೀಮಿತವಾಗಿರಲಿಲ್ಲ. ಅವರ ಸಿನಿಮಾ ಪರಿಯನ್ನೂ ತಮಿಳುನಾಡಿನಿಂದ ಪ್ರಾರಂಭಗೊಂಡು ಅತ್ಯಂತ ಮುನ್ನಲೆಯಾಗಿ ಬೆಳೆದದ್ದು ಕನ್ನಡ ಕರ್ನಾಟಕದಲ್ಲಿ ಎಂದು ಹೇಳಬಹುದು. ಅವರ ಸಿನಿಮಾಗಳು ಕನ್ನಡಿಗರಿಗೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾಗಿತ್ತು ಅನ್ಯ ಭಾಷಿಕರಿಗೆ. ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ಜನರು ಕೂಡ ರಾಜಣ್ಣನವರನ್ನು ಅಷ್ಟೇ ಇಷ್ಟಪಟ್ಟಿದ್ದಾರೆ. ರಾಜ್ ಅವರ ಅಭಿವ್ಯಕ್ತಿಯ ಜೀವನದ ಬೇರೆ ರಾಜ್ಯದವರ ನಟರೊಂದಿಗೆ ಸಂಬಂಧ ಸಹ ಸುಲಲಿತವಾಗಿತ್ತು. ಹಾಗೆಯೇ ರಾಜ್ ಅವರ ಜೀವನ ಸಂಘಟಿತ ಜಾತಿಯಾಗಿ ಪ್ರೀತಿ, ವಾತ್ಸಲ್ಯ ಬದುಕು, ಅವರಲ್ಲಿ ಅತ್ಯಂತ ಮುಖ್ಯವಾಗಿತ್ತು. ಹಾಗಾಗಿ ಅನ್ಯ ಭಾಷಾ ನಟರೊಂದಿಗೆ ಪರಿಚಯ ಜೊತೆಗೆ ಸಂಬಂಧಿಯಾಗಿ ಕೂಡ ಮುಂದುವರೆದಿತ್ತು. ಹಾಗಾಗಿ ಭಾರತೀಯ ಚಿತ್ರರಂಗ ಹಲವಾರು ಮಹಾತಾರೆಯರನ್ನು ಕಂಡಿದೆ. ಅಂತಹ ಮಹಾಪರಂಪರೆಯಲ್ಲಿ ಧ್ರುವತಾರೆಯಾಗಿ ರಾಜಕುಮಾರರಾಗಿದ್ದಾರೆ. ಅವರ ಅಭಿನಯ ವೀಕ್ಷಿಸಿದ ಎಲ್ಲಾ ಭಾಷೆಯ ತಾರೆಯರು ಮುಕ್ತ ಕಂಠದಿಂದ ರಾಜ್‌ಕುಮಾರ್‌ರವರನ್ನು ಹೊಗಳಿರುತ್ತಾರೆ.

**೫.೪.೧ ಅನ್ಯಭಾಷೆಯ ಚಲನಚಿತ್ರ ನಟರ ಮೇಲೆ ರಾಜ್ ಅವರ ಪ್ರಭಾವ :**

ಬಾಲಿವುಡ್ ನಟ ಅಮಿತಾಬ್ ಬಚ್ಚನ್ ಅವರು "ರಾಜಕುಮಾರ್ ಹಿಂದಿ ಚಿತ್ರರಂಗದಲ್ಲಿ ಇದ್ದಿದ್ದರೆ ನಾನೆಲ್ಲಿ ಇರುತ್ತಿದ್ದೆನೋ ಏನೋ"[೧೭] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯದ ಹಿಂದೆ ಉತ್ಪ್ರೇಕ್ಷೆ ಕಂಡು ಬಂದರೂ ಒಬ್ಬ ಶ್ರೇಷ್ಠ ವ್ಯಕ್ತಿಯಿಂದ ಧ್ವನಿಯಿಂದ ಮತ್ತೊಬ್ಬ ಶ್ರೇಷ್ಠ ವ್ಯಕ್ತಿಯನ್ನು ಹೊಗಳಿದ್ದಾರೆ ಎಂಬುದು ಮನಗಾಣಬೇಕು. ತಮಿಳುನಾಡು ಮುಖ್ಯ ನಟ. ಎಂ.ಜಿ.ಆರ್. ಅವರು ರಾಜ್‌ರ ಕುರಿತಂತೆ "ಭಾರತದಲ್ಲಿ ನಿಜವಾದ ಸೂಪರ್ ಸ್ಟಾರ್ ಎಂದರೆ ಇಬ್ಬರೆ ಒಬ್ಬರು ಎಂ.ಜಿ.ಆರ್. ಇನ್ನೊಬ್ಬರು ರಾಜ್‌ಕುಮಾರ್. ರಾಜ್‌ಕುಮಾರ್ ಅವರು ತಾಯಿ ಮೇಲಿಟ್ಟಿರುವ ಪ್ರೀತಿ ಎಲ್ಲರಿಗೂ ಅನುಕರಣೀಯ. ಚಿತ್ರರಂಗದಲ್ಲಿ ಯುಗ, ಆಧ್ಯಾತ್ಮದಲ್ಲಿ ನಿರತರಾಗಿರುವ ಕಲಾವಿದರು ವಿರಳ, ವಿಲಾಸೀ, ಜೀವನದಲ್ಲಿ ಮುಳುಗಿರುವ ನಮ್ಮ ಬಹುತೇಕ ಕಲಾವಿದರಿಗೆ ರಾಜಕುಮಾರ್ ಜೀವನ ಮಾದರಿ"[೧೮] ಎಂದು ಹೇಳುತ್ತಾರೆ. ಈ ಹಿನ್ನೆಲೆಯಿಂದ ರಾಜ್‌ರ ವ್ಯಕ್ತಿತ್ವ ಪ್ರತಿಭೆ, ಅವರ ಬದುಕು ಇವೆಲ್ಲಾ ಪ್ರೇರಣಾದಾಯಕವಾಗಿವೆ. ಜೊತೆಗೆ ಎನ್.ಟಿ.ರಾಮರಾವ್ ಅವರು "ರಾಜಕುಮಾರ್ ಅವರನ್ನು ಗೌರವಿಸುವುದೆಂದರೆ ನಮಗೆ ಅದೊಂದು ಹೆಮ್ಮೆ ತರುವ ವಿಷಯ"[೧೯] ಎಂದು ಹೇಳಿದ್ದರು.

ರಜನಿಕಾಂತ್ ಅವರು "ಅಣ್ಣಾವರ ಚಿತ್ರ ಎಲ್ಲೇ ಬಂದರೂ ಬಿಡದೇ ಪ್ರಥಮ ದಿನ ಪ್ರಥಮ ಶೋ ನೋಡುವ ಫ್ಯಾನ್ ನಾನು. ಸಿಂಪ್ಲಿ ಹಿ ಈಸ್ ಗ್ರೇಟ್" ಎಂದು ಅಭಿಪ್ರಾಯ ಪಟ್ಟಿರುತ್ತಾರೆ. ಹಾಗೆಯೇ ಕಮಲ ಹಾಸನ್ ಅವರೂ ಕೂಡ "ನಾನು ನಟನಾಗುವ ಮುಂಚೆಯೇ ಅವರ ಅಭಿಮಾನಿಯಾಗಿದ್ದೆ. ನಾನು ಅವರನ್ನು ಕಂಡಾಗೆಲ್ಲಾ ಅವರ ಸರಳತೆ ಮತ್ತು ಅವರ ಕೃತ್ರಿಮವಲ್ಲದ ಆತ್ಮೀಯತೆಯನ್ನು ಕಂಡು ಮನಸೋತಿದ್ದೇನೆ. ತೆರೆಯ ಮೇಲಿನ ಅವರ ಅಭಿನಯ ಕಂಡು ಮೂಕವಿಸ್ಮಿತನಾಗಿದ್ದೇನೆ"[೨೦] ಎಂದು ಹೇಳಿದ್ದಾರೆ. ಅಭಿನಯದಲ್ಲಾಗಲೀ ಮಾತಿನಲ್ಲಾಗಲೀ ರಾಜಕುಮಾರ ಅವರ ಮಟ್ಟವನ್ನು ಟಚ್ ಮಾಡೋಕೂ

ಆಗಲ್ಲ ಎಂದು ಶಿವಾಜಿ ಗಣೇಶನ್ ಅವರು ತಿಳಿಸಿದ್ದಾರೆ. "ರಾಜಕುಮಾರ ಅವರ ಯೋಗಾಭ್ಯಾಸದ ಚಿತ್ರಗಳನ್ನು ಸ್ಕ್ರೀನ್ ಪತ್ರಿಕೆಯಲ್ಲಿ ನೋಡಿದ್ದೆ ಅಂದಿನಿಂದ ಅವರೇ ದ್ರೋಣಾಚಾರ್ಯ ನಾನೇ ಏಕಲವ್ಯ"[೨೧] ಎಂದು ಶತ್ರುಘ್ನ ಸಿನ್ಹಾ ಅವರು ತಿಳಿಸಿದ್ದಾರೆ. ಅಂದರೆ ರಾಜಕುಮಾರ್ ಒಬ್ಬ ನಟರಾಗಿರದೇ ಯೋಗದ ಗುರುವಾಗಿದ್ದಾರೆ ಎಂಬುದು ಶತ್ರುಘ್ನ ಸಿನ್ಹಾ ಅವರ ಅಭಿಪ್ರಾಯ.

ರಾಜಕುಮಾರ್ ಅವರು "ಸಕಲವಲ್ಲಭ" ರೀತಿಯಲ್ಲಿ ಕಂಡಿರುವರು. ನಟ, ನಿರ್ದೇಶಕ, ಯೋಗ ಗುರುವಾಗಿ, ಸಂಗೀತಗಾರ, ಹಾಡುಗಾರ, ಚಳುವಳಿಗಾರ, ಪ್ರೇಮಿಯಾಗಿ ಇನ್ನು ಅನೇಕ ರೀತಿಯ ಆಯಾಮಗಳಲ್ಲಿ ರಾಜ್ ಅವರ ವ್ಯಕ್ತಿತ್ವವನ್ನು ಗುರುತಿಸಬಹುದು ನಮ್ಮ ಕರ್ನಾಟಕದ ನಟ-ನಟಿಯರಿಗೆ ರಾಜ್ ಅವರು ದೇವರಾಗಿ ಕಂಡು ಬಂದಿದ್ದಾರೆ. ಅವರ ಸಿನಿಮಾಗಳು ಕೂಡ ಬಾಕ್ಸ್ ಪೆಟ್ಟಿಗೆ ಸದ್ದು ಮಾಡಿದ್ದು ಇನ್ನು ಇತಿಹಾಸ. ರಾಜ್ ಅವರು ಕೂಡ ಅನ್ಯಭಾಷಾ ಚಿತ್ರಗಳು ನಟರನ್ನೂ ತುಂಬಾ ಪ್ರೀತಿಯಿಂದ ಕಂಡಿದ್ದಾರೆ. ಒಂದು ಸಂದರ್ಭದಲ್ಲಿ ರಾಜ್ ಅವರು ನಟ "ನೋಡ್ರಿ ಶಿವಶಂಕರ್, ಕಮಲಹಾಸನ್‌ರಂಥ ಕಲಾವಿದರನ್ನು ಭಾಷೆ ಚೌಕಟ್ಟಿನಲ್ಲಿ ನೋಡಬಾರದು... ಎಂಥಾ ಕಲಾವಿದ. ಆತ ನೀವು ತಮಿಳು ಸಿನಿಮಾ ನೋಡದೇ ಇದ್ರೆ ಒಳ್ಳೆಯ ಕಲಾವಿದನ ಪ್ರತಿಭೆ ನೋಡೋ ಅವಕಾಶ ಕಳ್ಕೋತೀರಾ"[೨೨] ಎಂದು ರಾಜ್ ಅವರು ಹೇಳಿದ್ದರು. ಹೀಗೆ ರಜನಿಕಾಂತ್ ಕುರಿತಂತೆ 'ನನಗಂತೂ ರಜನಿಕಾಂತ್ ಕೂಡಾ ತುಂಬಾ ಇಷ್ಟ ಆಗ್ತಾರೆ. ಅವರ ಸ್ಟೈಲೇ ಒಂದು ಅಟ್ರಾಕ್ಷನ್' ಎಂದು ಹೇಳಿದ್ದರು. ಹೀಗೆ ಚಿರಂಜೀವಿಯ ಬಗ್ಗೆ ಹೇಳಿದ್ದಾರೆ. ಇಲ್ಲಿ ರಾಜ್ ಅವರ ಸರಳತೆ ಅವರ ಜೀವನ ವಿಧಾನದಲ್ಲಿ ಇನ್ನೊಬ್ಬರನ್ನು ಆತ್ಮೀಯತೆಯಿಂದ ನೋಡುವ ಕ್ಷಣಗಳು ಹಾಗಾಗಿ ರಾಜ್ ಪ್ರತಿಭೆ ರಾಷ್ಟ್ರ ಮಟ್ಟದಲ್ಲೂ ರಾರಾಜಿಸಿದೆ ಎಂದು ಕೇಳಬಹುದು. ಆದರೆ ಇಂದಿನ ಸ್ಥಿತಿಯಲ್ಲಿ ಇನ್ನೊಬ್ಬರನ್ನು ತೆಗಳುವುದು, ವೈಮನಸ್ಯ ಸಾಮಾನ್ಯವಾಗಿ ಕಂಡು ಬರುತ್ತಿವೆ.

ರಾಜ್‌ಕುಮಾರ್ ಅವರಿಗೆ ಸಮಕಾಲೀನ ಕಲಾವಿದರ ಪ್ರತಿಭೆಯನ್ನೂ ಗುರುತಿಸುವ ಸಾಮರ್ಥ್ಯವಿತ್ತು. ಎಲ್ಲಾ ಸಾಮಾನ್ಯ ಕಲಾವಿದರನ್ನು ಹಾರೈಸುವ ವ್ಯಕ್ತಿತ್ವ ಅವರಲ್ಲಿ ರಕ್ತಗತವಾಗಿತ್ತು. ಹಾಗೆಯೇ ಕನ್ನಡಿಗರನ್ನು ಮೀರಿ ಬೆಳೆದದ್ದು ಕರ್ನಾಟಕದಲ್ಲಿ ರಾಜ್‌ಕುಮಾರ್ ಒಬ್ಬರೇ ಎಂದರೆ ತಪ್ಪಾಗಲಾರದು. ಎಂ.ಜಿ.ಆರ್. ಅವರು ರಾಜಕುಮಾರ್ ಸೂಪರ್ ಸ್ಟಾರ್ ಎಂದು ಹೇಳಿದ್ದರು. ಅದಕ್ಕೆ ಶಿವಶಂಕರ್ ಇತಿಹಾಸದಲ್ಲಿ ರಾಜ್ ಅವರು ಸೂಪರ್ ಸ್ಟಾರ್ ಆಗಿ ಉಳಿದಿದ್ದಾರೆ ಎಂದಿದ್ದಾರೆ.

**೫.೪.೨ ಅನ್ಯಭಾಷಾ ಚಲನಚಿತ್ರಗಳ ಮೇಲೆ ರಾಜ್ ಅವರ ಪ್ರಭಾವ :**

ಡಾ.ರಾಜ್ ಅವರ ಕನ್ನಡ ಚಿತ್ರರಂಗ ಮತ್ತು ಇತರ ಚಿತ್ರರಂಗದ ಮೇಲೆ ಎಲ್ಲಾ ರೀತಿಯಲ್ಲೂ ಪ್ರಭಾವಳಿಯಾಗಿ ನಿರಂತರ ವ್ಯಾಪಿಸಿಕೊಂಡಿದೆ. ಹಾಗಾಗಿ ತಮಿಳಿನಲ್ಲಿ ಎಂ.ಜಿ.ಆರ್. ಇದ್ದರೆ ತೆಲುಗಿನಲ್ಲಿ ಎನ್.ಟಿ.ಆರ್. ಇದ್ದಾರೆ. ಕನ್ನಡಿಗರಿಗೊಬ್ಬ ನಾಯಕನ ಅಗತ್ಯವಿತ್ತು. ಜನರ ಭಾವನೆಯನ್ನು ಭಾವುಕತೆಯ ಮೂಲಕ ತಮ್ಮ ಆದರ್ಶಗಳನ್ನು ಪ್ರತಿನಿಧಿಸುವ ವೃತ್ತಿಯು ಇರುತ್ತಿತ್ತು. ಅಂತಹ ಸಮಯದಲ್ಲಿ ರಾಜಕುಮಾರ

ರಂಗ ಪ್ರವೇಶವಾಯಿತು. ಇದರಿಂದ ಕನ್ನಡಿಗರ ಮನಸ್ಸಿನಲ್ಲಿ ಉಸಿರಾಗಿ ಉಳಿದಿದ್ದಾರೆ. ಜೊತೆಗೆ ದೇಶದ ಬೇರೆ ರಾಜ್ಯದ ಭಾಷಿಕರಲ್ಲಿ ರಾಜಕುಮಾರ ಅವರು ಉಸಿರಾಗಿ ಹೊರಹೊಮ್ಮಿದ್ದಾರೆ.

ಡಾ.ರಾಜ್ ಅವರ ಪ್ರತಿಭೆ ಪ್ರತಿಷ್ಠೆ ಅನೇಕ ಭಾಷಾ ಚಲನಚಿತ್ರಗಳಲ್ಲಿ ಒಂದು ವಿದ್ಯುತ್ ಪರಿಚಲನೆಯನ್ನು ಮೂಡಿಸಿತು. ಅವರ ಮೊದಲ ಚಿತ್ರವೇ ಅತ್ಯಂತ ಜನಪ್ರಿಯತೆಗಳಿಸಿತ್ತು. ಜೊತೆಗೆ ಪ್ರಶಸ್ತಿಯನ್ನು ಪಡೆದುಕೊಂಡಿದೆ. ರಾಜ್ ಅವರು ಅನೇಕ ಸಿನಿಮಾಗಳು ಕಾದಂಬರಿ ಆಧಾರಿತವಾಗಿರುವುದರಿಂದ ಯಶಸ್ವಿಯಾಗಿ ಕನ್ನಡ ಚಲನಚಿತ್ರವನ್ನು ಮುನ್ನೆಲೆಗೆ ತಂದವು. ಚಿತ್ರರಸಿಕರು ಕನ್ನಡ ಚಿತ್ರರಂಗವನ್ನು ಉಳಿಸಿ ಬೆಳೆಸಿದರು. ಹಾಗೆಯೇ ಕರ್ನಾಟಕದಲ್ಲಿ ಬೇರೆ ಬೇರೆ ಭಾಷಾ ಚಲನಚಿತ್ರಗಳು ಬರುತ್ತಿದ್ದವು. ಆದರೆ ಕನ್ನಡ ರಾಜಕುಮಾರ್ ಚಿತ್ರಗಳು ಜನರ ಮೆಚ್ಚುಗೆ ಪಡೆದವು. ಜೊತೆಗೆ ಅನ್ಯಭಾಷಾ ಚಿತ್ರವಾಗಿ ಇತರೆ ರಾಜ್ಯಗಳಲ್ಲಿ ರಾಜಕುಮಾರ್ ಚಿತ್ರಗಳು ಜನರಲ್ಲಿ ಛಾಪು ಮೂಡಿಸಿದವು. ಕರ್ನಾಟಕದ ಚಿತ್ರಗಳು ಎಡಿಟಿಂಗ್ ಆಗಬೇಕಾದರೆ ಚೆನ್ನೈನಲ್ಲಿ ನಡೆಯುತ್ತಿತ್ತು. ಇದರಿಂದ ನಮ್ಮೆಲ್ಲರಿಗೂ ತಿಳಿದಿರುವಂತೆ ಕನ್ನಡ ಚಿತ್ರರಂಗದ ಇನ್ನು ನಿರ್ಮಾಣದ ೩೫ ವರ್ಷಗಳನ್ನು ತಮಿಳುನಾಡಿನ ಮದ್ರಾಸಿನಲ್ಲಿ ಕಳೆಯಿತು. ಒಂದೊಂದೇ ಹೆಜ್ಜೆ ಇಡುತ್ತ ಹಲವಾರು ಎಡರು ತೊಡರುಗಳಿಂದ ಸಾಗಿ ಬಂದಿತು. ಇಂದು ಕನ್ನಡ ಚಿತ್ರಗಳು ಇಡೀ ವಿಶ್ವದ ಹಲವು ಭಾಗಗಳಲ್ಲಿ ಯಶಸ್ವಿಯಾಗಿ ಕಾಣುತ್ತದೆ. ಅನ್ಯಭಾಷೆಯ ಚಿತ್ರಗಳ ಪ್ರಭಾವದಿಂದ ಕನ್ನಡ ಚಲನಚಿತ್ರಗಳ ಜನಪ್ರಿಯತೆಗೆ ಧಕ್ಕೆಯಾಗುತ್ತಿವೆ ಎಂಬುದು ಗುಮಾನಿಯಿತ್ತು. ಅದು ಬೆಂಗಳೂರು ಹೊರತುಪಡಿಸಿ ಗಡಿನಾಡುಗಳಲ್ಲಿ ಇರಬಹುದು. ರಾಜ್ ಅವರ ಸಿನಿಮಾಗಳು ಅನ್ಯಭಾಷೆಗಳ ಚಿತ್ರಗಳ ಮೇಲೆ ಪ್ರಭಾವ ಬೀರಿದವು. ಕರ್ನಾಟಕದಲ್ಲಿ ಹಲವು ಭಾಷಿಕರು ವಾಸಿಸುತ್ತಾರೆ. ಬಳ್ಳಾರಿಯ ಇತರೆ ಪ್ರದೇಶಗಳಲ್ಲಿ ಈಗಲೂ ತೆಲುಗು ಜನಪ್ರಿಯ ಭಾಷೆಯಾಗಿದೆ. ಆದರೂ ರಾಜಕುಮಾರ ಪ್ರಭಾವವಿತ್ತು. ನಂತರ ದಿನಗಳಲ್ಲಿ ತೆಲುಗಿನಲ್ಲಿ ಚಿರಂಜೀವಿ, ನಾಗಾರ್ಜುನ, ವೆಂಕಟೇಶ್ ಇತ್ಯಾದಿ ಅಂತರ ಸಿನಿಮಾಗಳು ಮುನ್ನೆಲೆಗೆ ಬಂದವು. ಹಾಗೆಯೇ ತಮಿಳುನಾಡಿನಲ್ಲಿ ರಜನಿಕಾಂತ್, ಕಮಲಹಾಸನ್ ಅವರು ಕೂಡ ಮುನ್ನೆಲೆಗೆ ಬಂದರು. ಇವರ ಪೂರ್ವದಲ್ಲಿ ಎಂ.ಜಿ.ಆರ್., ಎನ್.ಟಿ.ಆರ್., ನಾಗೇಶ್ವರರಾವ್, ಅವರ ಕಾಲದಲ್ಲಿ ರಾಜಕುಮಾರ ಅವರು ಮುನ್ನೆಲೆಗೆಯಲ್ಲಿದ್ದರು. ಅವರ ಸಿನಿಮಾಗಳನ್ನು ಮೀರಿ ರಾಜ್ ಅವರ ಸಿನಿಮಾಗಳು ಪ್ರಭಾವ ಬಂದಿದ್ದವು. ಎಂಬುದು ಸತ್ಯದ ಸಂಗತಿಯಾಗಿದೆ. ೭೦-೮೦ ದಶಕದಲ್ಲಿ ಆಯಾ ರಾಜ್ಯದ ಸಮಸ್ಯೆಯನ್ನು ಬಗೆಹರಿಸುವ ಮತ್ತು ಸಮಸ್ಯೆಯ ಬಗ್ಗೆ ಪ್ರಶ್ನೆ ಎತ್ತುವ ಸಿನಿಮಾಗಳು ಬಂದವು. ತ.ರಾ.ಸು., ಕುವೆಂಪು, ಅ.ನ.ಕೃ., ತ್ರಿವೇಣಿ, ಅನೇಕರ ಕಾದಂಬರಿ ಮೂಲಕ ಚಲನಚಿತ್ರಗಳು ಮೂಡಿಬಂದವು ಎಂಬುದು ಪ್ರಮುಖ ಸಂಗತಿಯಾಗಿದೆ. ಈ ಸಂಗತಿಯಿಂದ ಬೇರೆ ಬೇರೆ ರಾಜ್ಯಗಳಲ್ಲಿ ಚಲನಚಿತ್ರಕ್ಕಾಗಿ ಚಿತ್ರಕಥೆಗಳನ್ನು ಬರೆಯಲಾಗುತ್ತಿತ್ತು. ಆದರೆ ಕನ್ನಡ ಕರ್ನಾಟಕ ಸಂದರ್ಭಗಳಲ್ಲಿ ಸಮಾಜಮುಖಿಯಾದ ಸಮಾಜದ ನಿಲುವುಗಳನ್ನು ಹೊಂದಿರುವ ಕಥೆ ಕಾದಂಬರಿಗಳು ಬಂದವು. ಮನುಷ್ಯನ ಮಾನವೀಯತೆ, ಅಸ್ತಿತ್ವದ ನೆಲೆಯಾಗಿ ಕಾದಂಬರಿಗಳ ವಸ್ತುವನ್ನು ಯಥಾವತ್ತಾಗಿ ಬಳಸಲಾಯಿತು. ಇದರಿಂದ ಸಮಾಜದಲ್ಲಿ ಜನರಲ್ಲಿ ಹೊಸತನ ಮೂಡಿತು. ಹಾಗೂ ಸಮಾಜವು ಬದಲಾವಣೆ ಹೊರಳಿತು. ಇದರ ಪರಿಣಾಮಗಳು ಬೇರೆ ಬೇರೆ ರಾಜ್ಯಗಳಲ್ಲಿ ವ್ಯಾಪಿಸಿತು.

ಆ ಕಾಲಕ್ಕೆ ಒಂದೇ ಚಿತ್ರಕಥೆಯನ್ನು ಕನ್ನಡದಲ್ಲಿ ರಾಜಣ್ಣ, ತೆಲುಗಿನಲ್ಲಿ ನಾಗೇಶ್ವರರಾವ್, ತಮಿಳಿನಲ್ಲಿ ಶಿವಾಜಿ ಗಣೇಶನ್ ನಾಯಕ ಮೂರು ಭಾಷೆಗೂ ಬಿ. ಸರೋಜದೇವಿ, ಅಥವಾ ಜಯಂತಿ ಇರುತ್ತಿದ್ದರು. ಸಿನೆಮಾದ ಪೋಷಕ ಕಲಾವಿದರು ಭಾಷೆಗೆ ತಕ್ಕಂತೆ ಬೇರೆ ಬೇರೆ ಇರುತ್ತಿದ್ದರು. ಸಿನೆಮಾ ಎಲ್ಲ ಭಾಷೆಯಲ್ಲೂ ಗೆಲ್ಲುತ್ತಿತ್ತು. ಕೆಲವೊಮ್ಮೆ ತೆಲುಗಿನಲ್ಲಿ, ಕೆಲವೊಮ್ಮೆ ತಮಿಳಿನಲ್ಲಿ ಹಿಟ್ ಆದ ಸಿನೆಮಾಗಳನ್ನು ರಾಜಣ್ಣನವರು ಕನ್ನಡದಲ್ಲಿ ಮಾಡುತ್ತಿದ್ದರು. ಕನ್ನಡದಲ್ಲಿ ಗೆದ್ದ ಸಿನೆಮಾ ಅನ್ಯ ಭಾಷೆಯಲ್ಲಿಯೂ ತಯಾರಾಗುತ್ತಿತ್ತು. ಕಸ್ತೂರಿ ನಿವಾಸ ಎನ್ನುವ ಸಿನೆಮಾವನ್ನು ತಮಿಳಿನಲ್ಲಿ ಶಿವಾಜಿ ಗಣೇಶನ್, ಹಿಂದಿಯಲ್ಲಿ ಸಂಜೀವ ಕುಮಾರ್ ಮಾಡಿದರೂ ಕನ್ನಡದಲ್ಲಿ ರಾಜಣ್ಣನವರು ನೀಡಿದಷ್ಟು ಅಭಿನಯ, ಸಿನೆಮಾಕ್ಕೆ ಸಿಕ್ಕ ಯಶಸ್ಸು ಬೇರೆ ಭಾಷೆಯ ಸಿನೆಮಾಕ್ಕೆ ಸಿಗಲಿಲ್ಲ. ಒಮ್ಮೆ ಶಿವಾಜಿ ಗಣೇಶನ್ ಕಸ್ತೂರಿ ನಿವಾಸದ ತಮಿಳಿನಲ್ಲಿ ನಾನು ರಾಜಣ್ಣನವರಷ್ಟು ಚೆನ್ನಾಗಿ ಅಭಿನಯಿಸಿಲ್ಲ ಎಂದು ಹೇಳಿದರಂತೆ.

ಒಟ್ಟಾರೆ ಹೇಳುವುದಾದರೆ ರಾಜಣ್ಣನವರ ಚಿತ್ರದ ಯಶಸ್ಸನ್ನು ಕಂಡು ಅನ್ಯ ಭಾಷೆಯ ಸಿನೆಮಾಗಳು ತಯಾರು ಆಗಿದ್ದು ಉಂಟು. ಅನುರಾಗ ಅರಳಿತು ಸಿನೆಮಾ, ತೆಲುಗಿನಲ್ಲಿ ಘರಾನಾ ಮೊಗುಡು, ಹಿಂದಿಯಲ್ಲಿ ಲಾಡ್‌ಲಾ ಎನ್ನುವ ಹೆಸರಿನಲ್ಲಿ ಅದ್ಭುತ ಯಶಸ್ಸು ಕಂಡಿವೆ. ಹಿಂದೆ ತೆಲುಗು, ತಮಿಳು, ಕನ್ನಡ ಈ ಮೂರು ಚಿತ್ರರಂಗಗಳಲ್ಲಿ ಒಂದು ಅದ್ಭುತ ಅನ್ಯೋನ್ಯತೆ ಇತ್ತು. ಈಗಲೂ ಇದೆ. ಆದರೆ ಮೊದಲಿನಷ್ಟು ಇಲ್ಲ. ತಮ್ಮ ಬೇಳೆ ಬೇಯಿಸಿಕೊಳ್ಳಲು ಹೋರಾಟ ಎನ್ನುವ ಕಳಪೆ ಹೋರಾಟಗಾರರ ಕಾರಣ ಭಾಷೆ ಭಾಷೆಗಳ ಮಧ್ಯೆ ವೈಮನಸ್ಯ ಮೂಡಿಸಿದ್ದಾರೆ. ಕಲೆಗೆ ಭಾಷೆ ಇಲ್ಲ. ಕಲೆಗೆ ಹೃದಯ ಒಂದೇ ಸಾಕು. ಹಿಂದಿ ಚಿತ್ರರಂಗದ ಮನೋಜ್ ಕುಮಾರ್, ರಾಜ್‌ಕಪೂರ್ ಕುಟುಂಬ ಅಮಿತಾಬ್ ಬಚ್ಚನ್ ಮುಂತಾದವರು ರಾಜಣ್ಣನವರೊಡನೆ ಕನ್ನಡ ಸಿನೆಮಾದೊಡನೆ ಯಾವಾಗಲೂ ಅನ್ಯೋನ್ಯ ಸಂಬಂಧ ಇಟ್ಟುಕೊಂಡಿದ್ದರು. ದಕ್ಷಿಣ ಭಾರತದ ಸೂಪರ್ ಹಿಟ್ ಚಿತ್ರ ಹಿಂದಿಗೆ ರಿಮೇಕ್ ಆಗುತ್ತಿತ್ತು. ಇಂಥಹ ಸ್ನೇಹ ಸೌಹಾರ್ದ ಭಾರತೀಯ ಭಾಷೆಗಳ ನಡುವೆ ಇರಬೇಕು.

ರಾಜಣ್ಣನವರ ವಿಶಾಲ ಹೃದಯದ ಕಾರಣ ಅನ್ಯಭಾಷಿಕರೊಂದಿಗೆ ಕನ್ನಡ ಸಿನೆಮಾ ಒಳ್ಳೆಯ ಬಾಂಧವ್ಯ ಬೆಳೆಸಿಕೊಂಡು ಹೋಗಲು ಸಾಧ್ಯವಾಯಿತು. ಒಂದು ವಿಶೇಷ ಏನೆಂದರೆ, ರಾಜಣ್ಣನವರ ಯಾವುದೇ ಚಿತ್ರ ಹಿಟ್ ಆದರೂ ತಮಿಳುನಾಡು, ಆಂಧ್ರ ಪ್ರದೇಶದಲ್ಲಿ ಜನರು ನೋಡುತ್ತಿದ್ದರು. ಇಡೀ ಚಿತ್ರರಂಗ ಅದನ್ನು ನೋಡುತ್ತಿತ್ತು. ಅದೇ ರಾಜಣ್ಣನವರು ಅನ್ಯ ಭಾಷೆಯ ವಿಪರೀತ ಹಾವಳಿ ಹೆಚ್ಚಾದಾಗ ಕನ್ನಡ ಸಿನೆಮಾಗಳಿಗೆ ಥಿಯೇಟರ್ ಸಿಗದ ಕಾರಣ ಹೋರಾಟಕ್ಕೆ ಇಳಿದದ್ದು ಇದೆ. ಸಂಸ್ಕೃತಿ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಸ್ವಲ್ಪ ಭಿನ್ನವಾಗಿ ಹೋಗುತ್ತದೆ. ಆಂಧ್ರದಲ್ಲಿ ಕೆಲವು ಹಬ್ಬಗಳು ವಿಶೇಷ. ತಮಿಳಿನಾಡಿನಲ್ಲಿ ಪೊಂಗಲ್ ಎನ್ನುವ ಹಬ್ಬ ಬಹಳ ವಿಶೇಷ. ಜಲ್ಲಿಕಟ್ಟು ಎನ್ನುವ ಗ್ರಾಮೀಣ ಕ್ರೀಡೆ ತಮಿಳುನಾಡಿನಲ್ಲಿ ಬಹಳ ಜೋರು. ಅದೇ ಕರ್ನಾಟಕದಲ್ಲಿ ಸಂಕ್ರಾಂತಿ ಎಂದು ನಾವು ಕಿಚ್ಚು ಹಾಯಿಸುವ ಹಬ್ಬ ಮಾಡುತ್ತೇವೆ. ಗಣಪತಿ ಹಬ್ಬ ಮಹಾರಾಷ್ಟ್ರದಲ್ಲಿ ಅತಿ ದೊಡ್ಡ ಹಬ್ಬ. ಇಂಥಹ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಆಯಾ ಭಾಷೆಗೆ ತರುವಾಗ ಕನ್ನಡ ಸಂಸ್ಕೃತಿಗೆ ಹೊಂದುವಂತಹ ಹಬ್ಬ ಆಚರಣೆಗಳನ್ನು

ಸಿನೆಮಾದಲ್ಲಿ ಅಳವಡಿಸಲಾಗುತ್ತಿತ್ತು. ಅನ್ಯ ಭಾಷೆಯ ಚಿತ್ರ ಕನ್ನಡದಲ್ಲಿ ಪುನರ್ ನಿರ್ಮಾಣ ಆದಾಗ ಈ ಕನ್ನಡ ಮಣ್ಣಿಗೆ ಹೊಂದುವಂಥಹ ಸಂಸ್ಕೃತಿಗೆ ಸಿನೆಮಾವನ್ನು ಹೊಂದಿಸಲಾಗುತ್ತಿತ್ತು. ಅನ್ಯ ಭಾಷೆಯಲ್ಲಿ ಇರುವ ನಮ್ಮ ಕನ್ನಡ ಭಾಷೆಯಲ್ಲೆ ಇರದ ಅನ್ಯ ಸಂಸ್ಕೃತಿಯನ್ನು ಕನ್ನಡಿಗರಿಗೆ ತುರುಕುವ ಪ್ರಯತ್ನ ರಾಜಣ್ಣನವರ ಚಿತ್ರದಲ್ಲಿ ಎಲ್ಲಿಯೂ ಕಂಡು ಬಂದಿಲ್ಲ. ಅಲ್ಲಿನ ಪಾತ್ರ ಇಲ್ಲಿನ ಕನ್ನಡ ಮಣ್ಣಿನ ಮಗ ಆಗಿದ್ದಾನೆ. ಆಗ ಮಾಧ್ಯಮ ಹೆಚ್ಚು ಇರಲಿಲ್ಲ. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಿನೆಮಾ ಬರುವುದು ಅಷ್ಟೊಂದು ಬೇಗ ಶೀಘ್ರವಾಗಿ ಜನ ಸಾಮಾನ್ಯನಿಗೆ ತಿಳಿಯುತ್ತಿರಲಿಲ್ಲ. ಅದು ಒಂದು ರೀತಿ ಒಳ್ಳೆಯದೇ. ಮುಗ್ಧವಾಗಿ ಬಿಳಿ ಹಾಳೆಯಂತೆ ಸಿನೆಮಾವನ್ನು ಎಂಜಾಯ್ ಮಾಡಬಹುದು. ರಾಜಣ್ಣನವರ ಧರ್ಮಪತ್ನಿ ಪಾರ್ವತಮ್ಮನವರಿಗೆ ಅನ್ಯ ಭಾಷೆಯ ಚಿತ್ರಗಳ ಪರಿಪೂರ್ಣ ಜ್ಞಾನ ಇದ್ದ ಕಾರಣ ಚಿತ್ರದ ಕಥೆಯ ಆಯ್ಕೆಯಲ್ಲಿ ಅವರು ಸೂಕ್ಷ್ಮಮತಿಗಳಾಗಿ ಬೇರೆ ಭಾಷೆಯಲ್ಲಿ ಜನಕ್ಕೆ ರುಚಿಸದ ಬೇಡದ ಪದಾರ್ಥಗಳನ್ನು ಕನ್ನಡಿಗರಿಗೆ ಅವರು ಬಡಿಸಲೇ ಇಲ್ಲ. ಆದರೆ ಭಕ್ತ ಕುಂಬಾರ, ಭಕ್ತ ಪ್ರಹ್ಲಾದ, ಮುಂತಾದ ಪೌರಾಣಿಕ ಕಥೆಗಳು ಯಾವುದೇ ಭಾಷೆಯಲ್ಲಿ ಬಂದರೂ ಅವು ಕನ್ನಡಕ್ಕೆ ಬಂದಾಗ ಕನ್ನಡದ ಕಂಪಿನಲ್ಲಿ ಅವು ಕಸ್ತೂರಿಯಂತೆ ಶ್ರೀಗಂಧದಂತೆ ಕಂಗೊಳಿಸುತ್ತಿದ್ದವು. ಜನರು ಭಕ್ತಿ ಪೂರ್ವಕವಾಗಿ ಅದನ್ನು ಸ್ವೀಕರಿಸುತ್ತಿದ್ದರು. ಕಾಳಿದಾಸನ ಕಥೆ ಬೇರೆ ಭಾಷೆಯಲ್ಲಿ , ಅಷ್ಟೇ ಏಕೆ ಕನ್ನಡದಲ್ಲಿಯೂ ಮಾಡದ ದಾಖಲೆಯನ್ನು ಮಹಾಕವಿ ಕಾಳಿದಾಸ ಕನ್ನಡದ ಕಾಳಿದಾಸ ರಾಜಣ್ಣ ಮಾಡಿ ತೋರಿಸಿದ್ದಾರೆ. ಮಯೂರ, ಹುಲಿ ಹಾಲಿನ ಮೇವು, ರಣಧೀರ ಕಂಠೀರವ, ಇಮ್ಮಡಿ ಪುಲಿಕೇಶಿ ಮುಂತಾದ ಕನ್ನಡ ನೆಲದ ಕಥೆ ಅನ್ಯ ಭಾಷಿಕರನ್ನು ಅಷ್ಟೇ ಸೆಳೆದಿತ್ತು ಎನ್ನುವುದು ಈಗ ಇತಿಹಾಸ. ಇದರಿಂದ ಪ್ರೇರಿತರಾದವರು ಆಯಾ ರಾಜ್ಯದ ನೆಲದ ಇತಿಹಾಸ ಸಾರುವ ಚಿತ್ರ ನಿರ್ಮಾಣಕ್ಕೆ ಮುಂದಾದರು ಎನ್ನುವುದು ಸತ್ಯ. ಕಿತ್ತೂರು ರಾಣಿ ಚೆನ್ನಮ್ಮದಲ್ಲಿ ರಾಜಣ್ಣನವರ ಪಾತ್ರ ಬಹು ಬೇಗ ತೀರಿಕೊಂಡರೂ ಆ ಪಾತ್ರ ಮಾಡಿದ ಪ್ರಭಾವ ದೊಡ್ಡದು. ಅದು ನೆಲದ ಋಣ ತೀರಿಸುವ ಕಲಾವಿದರ ಗುಣ.

ಅವರು ನಮ್ಮನ್ನಗಲಿ ಹಲವು ವರ್ಷಗಳು ಕಳೆದರೂ ಅವನ ಸಿನೆಮಾಗಳು ಈಗಲೂ ಇತಿಹಾಸ ನಿರ್ಮಿಸಿವೆ. ಆ ಸಿನೆಮಾಗಳಿಗೆ ಸಾವಿಲ್ಲ. ಕನ್ನಡ ಮತ್ತು ಕನ್ನಡೇತರರು ಈ ಸಿನೆಮಾಗಳನ್ನು ನೋಡಿ ಸಂತಸ ಪಡಲಿ. ಚಿತ್ರಗಳು ಸಮಾಜವನ್ನು ನಿರ್ಮಾಣ ಮಾಡುತ್ತವೆ ಎನ್ನುವ ಸತ್ಯದ ಬಗ್ಗೆ ನಂಬಿಕೆ ಇರಲಿ. ಈಗಲೂ ದಕ್ಷಿಣ ಭಾರತದ ಎಲ್ಲೆಲ್ಲೂ ರಾಜಣ್ಣನವರನ್ನು ಪೂಜಿಸುತ್ತಾರೆ, ಗೌರವಿಸುತ್ತಾರೆ. ದಾದಾ ಫಾಲ್ಕೆ ಪ್ರಶಸ್ತಿ ಪುರಸ್ಕೃತ ಏಕೈಕ ಕನ್ನಡಿಗನನ್ನು ಇಡೀ ಭಾರತ ದೇಶವೇ ಗೌರವಿಸುತ್ತದೆ. ಸದಾ ಕಾಲ ಸ್ಮರಿಸುತ್ತದೆ. ಕನ್ನಡಕ್ಕೆ ಜಯವಾಗಲಿ.

**ಕೊನೆ ಟಿಪ್ಪಣಿ :**

೧. ಪ್ರವೀಣ್ ನಾಯಕ್.ಕೆ., ರಾಜ್‌ಕುಮಾರ್ ಒಂದು ಬೆಳಕು, ಪು.ಸಂ-೦೩.

೨. ಜಗನ್ನಾಥರಾವ್ ಬಹುಳೆ.ಎಸ್., ವರನಟ, ಪು.ಸಂ-೧೧೪

೩. ಅದೇ ಪುಟ-೧೧೪

೪. ಪ್ರವೀಣ್ ನಾಯಕ್.ಕೆ., ರಾಜ್‌ಕುಮಾರ್ ಒಂದು ಬೆಳಕು, ಪು.ಸಂ-೫೭

೫. ಅದೇ ಪುಟ-೫೭

೬ ಅದೇ ಪುಟ-೫೭

೭ ಪ್ರವೀಣ್ ನಾಯಕ್.ಕೆ., ರಾಜ್‌ಕುಮಾರ್ ಒಂದು ಬೆಳಕು, ಪು.ಸಂ-೨೩೪

೮. ಜಗನ್ನಾಥರಾವ್ ಬಹುಳೆ.ಎಸ್., ವರನಟ, ಪು.ಸಂ-೦೫

೯. ಅದೇ ಪುಟ-೦೫

೧೦. ಅದೇ ಪುಟ-೦೬

೧೧. ಅದೇ ಪುಟ-೦೬

೧೨. ಜಗನ್ನಾಥರಾವ್ ಬಹುಳೆ.ಎಸ್., ವರನಟ, ಪು.ಸಂ-೩೮

೧೩. ಜಗನ್ನಾಥರಾವ್ ಬಹುಳೆ.ಎಸ್., ವರನಟ, ಪು.ಸಂ-೭೩

೧೪. ಗೌರಿ ಸುಂದರ್(ಸಂ), ರಾಜಾಂತರಂಗ, ಪು.ಸಂ-ಮುನ್ನುಡಿ ಭಾಗ

೧೫. ಗೌರಿ ಸುಂದರ್(ಸಂ), ರಾಜಾಂತರಂಗ, ಪು.ಸಂ-೦೩

೧೬. ಪ್ರವೀಣ್ ನಾಯಕ್.ಕೆ., ರಾಜ್‌ಕುಮಾರ್ ಒಂದು ಬೆಳಕು, ಪು.ಸಂ-೨೧೧

೧೭. ಅದೇ ಪುಟ-೨೧೨

೧೮. ಅದೇ ಪುಸ್ತಕ, ಪು.ಸಂ-೨೧೧

೧೯. ಅದೇ ಪುಸ್ತಕ, ಪು.ಸಂ-೨೧೧

೨೦. ಅದೇ ಪುಸ್ತಕ, ಪು.ಸಂ-೨೧೧

೨೧. ಅದೇ ಪುಸ್ತಕ, ಪು.ಸಂ-೨೧೨

೨೨. ಅದೇ ಪುಸ್ತಕ, ಪು.ಸಂ-೧೫೩

# ಅಧ್ಯಾಯ ಆರು
# ಸಮಾರೋಪ

ನಾಡೋಜ ಡಾ. ರಾಜ್‌ಕುಮಾರ್ ರವರ ಬಗ್ಗೆ ಬರೆಯುವುದನ್ನು ಆರಂಭ ಮಾಡಬಹುದು. ಆದರೆ ಬರೆದು ಮುಗಿಸಿ ಇಷ್ಟೇ ಎಂದು ಮುಕ್ತಾಯದ ಹಂತಕ್ಕೆ ಬರಲು ಸಾಧ್ಯವಿಲ್ಲ. ಬರೆದಷ್ಟು ಹೇಳಿದಷ್ಟು ಹನುಮಂತನ ಬಾಲದಂತೆ ವಿಚಾರಗಳು ಬರುತ್ತಲೇ ಇರುತ್ತದೆ. ಇಷ್ಟೇ ಮುಗಿದು ಹೋಯಿತು ಇನ್ನು ಮುಂದೆ ಬರೆಯಲು ಏನೂ ಇಲ್ಲ ಎಂದು ಹೇಳಲು ಕಷ್ಟ ಅಸಾಧ್ಯ. ಅವರ ೨೦೫ ಚಿತ್ರಗಳನ್ನು ನೋಡಿ ಬರೆಯಬಹುದಾದದ್ದು ಬೇಕಾದಷ್ಟಿದೆ. ಅವರ ಚಿತ್ರಗಳು ನೂರಾರು, ಪಿ.ಹೆಚ್.ಡಿ ಸಂಶೋಧನೆಗೆ ನಮ್ಮನ್ನು ಆಹ್ವಾನಿಸುತ್ತವೆ. ಪೌರಾಣಿಕ ಚಿತ್ರಗಳು, ಜಾನಪದ ಚಿತ್ರಗಳು, ಐತಿಹಾಸಿಕ ಚಿತ್ರಗಳು, ಅವರಲ್ಲಿರುವ ಭಾಷೆಯ ಸೊಗಡು ಸಂಸ್ಕೃತಿ, ಅವರ ಚಿತ್ರಗಳ ಸಂಭಾಷಣೆ, ಸಾಹಿತ್ಯ, ಇಂಪಾದ ಹಾಡುಗಳು, ಒಂದೊಂದು ಸಂಶೋಧನೆಗೆ ಪ್ರೇರಕವಾಗಿದೆ. ಸಮಾಜದ ಅತ್ಯಂತ ಕೆಳವರ್ಗದ ಕುಟುಂಬದಿಂದ , ಕಡು ಬಡತನದಿಂದ ಬಂದ ರಾಜಣ್ಣನವರು ಇಂದು ಎಲ್ಲಾ ವರ್ಗದವರು ಹೆಮ್ಮೆ ಪಡುವಂಥಹ ಹೆಮ್ಮೆಯ ಕಲಾವಿದರೂ ಆಗಿದ್ದಾರೆ. ಕನ್ನಡ ಭಾಷೆಗೆ ದಾದಾ ಫಾಲ್ಕೆ ಪ್ರಶಸ್ತಿ ತಂದುಕೊಟ್ಟಂತಹ ಕೀರ್ತಿ ಅವರಿಗಿದೆ. ರಂಗಭೂಮಿ ಹಿನ್ನೆಲೆಯಿಂದ ಬಂದು ನೂರಾರು ನಾಟಕಗಳಲ್ಲಿ ಅಭಿನಯಿಸಿ ಶಾಸ್ತ್ರೀಯವಾಗಿ ಹಾಡು ಕಲಿತು ಅತ್ಯಂತ ಸುಶ್ರಾವ್ಯವಾಗಿ ಹಾಡುವ ಸಿರಿಕಂಠ ಅವರದ್ದು. ಅವರ ಹಾಡುಗಳು ಎಷ್ಟೇ ಕೇಳಿದರೂ ಮತ್ತೆ ಮತ್ತೆ ಕೇಳಬೇಕೆನಿಸುವಂಥಾದ್ದು. ಅವರ ಅಭಿನಯದ ಇನ್ನು ಹಲವು ಚಿತ್ರಗಳು ನಿಜವಾದ ಸಂಶೋಧನೆಗೆ ಒಳಗಾಗಬೇಕು. ಇನ್ನಷ್ಟು ಚಿನ್ನಕ್ಕೆ ಹೊಳಪನ್ನು ನೀಡಬೇಕು ಎಂಬುದು ನನ್ನ ಅಭಿಲಾಷೆ. ಅವರ ಚಿತ್ರಗಳು ಎಂದೆಂದೂ ಬರಿದಾಗದ ಗಣಿಗಳಾಗಿವೆ. ಖಜಾನೆ ತುಂಬಾ ಚಿನ್ನ, ಬೆಳ್ಳಿ, ಮುತ್ತು, ರತ್ನ, ವಜ್ರ, ವೈಢೂರ್ಯಗಳಂಥ ಸಿನೆಮಾಗಳು ತುಂಬಿವೆ. ಇಲ್ಲಿ ಗಣಿಗಾರಿಕೆ ಆಗಬೇಕಾಗಿದೆ. ಕೈ

ಕೆಸರಾದರೆ ಬಾಯಿ ಮೊಸರು ಎನ್ನುವಂತ ಅವರ ಚಿತ್ರಗಳನ್ನು ಹೊಗಳು ಭಟ್ಟರಾಗದೆ ನೈಜ ವಿಮರ್ಶೆಗೆ ಒಳಪಡಿಸಿದಾಗ ಚಿನ್ನದ ಹೊಳಪು ಮತ್ತಷ್ಟು ಹೆಚ್ಚಾಗುತ್ತದೆ.

ಈಗಾಗಲೇ ಬಹಳ ಜನ ಹಿರಿಯರು, ಸಾಹಿತಿಗಳು, ಉತ್ತಮ ಬರಹಗಾರರು, ರಾಜಣ್ಣನವರ ಬಗ್ಗೆ ಬಹಳಷ್ಟು ಬರೆದಿದ್ದಾರೆ. ಅವರ ಬಗ್ಗೆ ಸಮೃದ್ಧ ಸಾಹಿತ್ಯ ಲಭ್ಯವಿದೆ. ರಾಜಣ್ಣನವರ ಬಾಲ್ಯ, ಅವರ ಜೀವನ ಚರಿತ್ರೆ, ಪುಸ್ತಕ ರೂಪದಲ್ಲಿ ಬಂದಿವೆ. ಅವರು ನಿರ್ದೇಶಕರ ನಟರಾಗಿದ್ದರು. ಎಷ್ಟೇ ಸಿನಿಮಾದ ಅನುಭವ ಎಷ್ಟೇ ಇದ್ದರೂ ಕಿರಿಯ ನಿರ್ದೇಶಕರೊಂದಿಗೆ ಅತ್ಯಂತ ವಿನಯವಾಗಿ ವರ್ತಿಸುತ್ತಾ ಎಲ್ಲರನ್ನೂ ಗೌರವಿಸುತ್ತಿದ್ದರು. ಅವರ ಇಡೀ ಕುಟುಂಬ ಈಗಲೂ ಸಿನೆಮಾ ನಿರ್ಮಾಣ, ಹಂಚಿಕೆ, ವಿತರಣೆಯಲ್ಲಿ ಕನ್ನಡ ಭಾಷೆಯ ಸೇವೆ ಮಾಡುತ್ತಿದೆ. ರಾಜಣ್ಣನವರ ಮೊಮ್ಮಕ್ಕಳು ಸಿನೆಮಾಕ್ಕೆ ಬಂದಿದ್ದಾರೆ. ಅವರೂ ಸಹ ಕನ್ನಡ ಸಿನೆಮಾಗಳನ್ನು ಬಿಟ್ಟು ಬೇರೆ ಭಾಷೆಯ ಸಿನೆಮಾಗಳಲ್ಲಿ ಅಭಿನಯಿಸಲು ಒಪ್ಪುತ್ತಿಲ್ಲ. ಡಬ್ಬಿಂಗ್ ಚಿತ್ರಗಳನ್ನು ರಾಜಣ್ಣನವರು ವಿರೋಧಿಸುತ್ತಿದ್ದರು. ಇದು ಅನ್ಯ ಭಾಷಾ ಚಿತ್ರಗಳು ನಮ್ಮ ಭಾಷೆಯ ಮೇಲೆ ಹಿಡಿತ ಸಾಧಿಸದೇ ಇರಲಿ ಎನ್ನುವ ಕಾರಣದಿಂದ. ಕರ್ನಾಟಕದಲ್ಲಿ ಕನ್ನಡಿಗನೇ ಸಾರ್ವಭೌಮ.

ಗೋಕಾಕ್ ವರದಿ ಜಾರಿಗೆ ಬರಲಿ ಎಂದು ಚಳುವಳಿಗೆ ಹೋರಾಟಕ್ಕೆ ಧುಮುಕಿದಾಗ ಅವರ ಹಿಂದೆ ಸಾವಿರಾರು ಜನ ಕನ್ನಡ ಭಾಷೆ ಉಳಿಸಲು ಮುಂದಾಗುತ್ತಾರೆ. ಅವರು ಡಬ್ಬಿಂಗ್ ಭೂತನ್ನು ಹಿಮ್ಮೆಟ್ಟಿಸುತ್ತಾರೆ. ಕನ್ನಡ ತಾಯಿಯನ್ನು ಉಳಿಸುತ್ತಾರೆ. ಅವರ ಕನ್ನಡದ ಉಚ್ಚಾರಣೆ, ಇಂಪಾದ ಸಿರಿಕಂಠ, ಇಂದ್ರನನ್ನು ಮೀರಿಸುವ ಸೌಂದರ್ಯ , ಎಲ್ಲವೂ ಕನ್ನಡ ತಾಯಿಯು ಅವರಿಗೆ ನೀಡಿದ ವರದಾನ. ಕನ್ನಡ ನಾಡಿನ ವರಪುತ್ರ, ವರನಟ ರಾಜಣ್ಣನವರು ಹುಟ್ಟು ಹಾಕಿದ ಹಲವು ಅಭಿಮಾನಿಗಳು ಈಗಲೂ ರಾಜಣ್ಣನವರನ್ನು ಸದಾ ಕಾಲ ನೆನೆಯುತ್ತಾರೆ. ಅವರ ಸಿನೆಮಾಗಳನ್ನು ನೋಡುತ್ತಾರೆ. ಅವರು ಹಾಡಿದ ಹಾಡುಗಳನ್ನು ಕೇಳುತ್ತಾರೆ. ಅವರ ನೆನಪಿಗಾಗಿ ಹಲವು ರಸ್ತೆಗಳಲ್ಲಿ ವಿಗ್ರಹಗಳನ್ನು ನಿಲ್ಲಿಸಲಾಗಿದೆ. ಅವರ ಹುಟ್ಟು ಹಬ್ಬ ಹಾಗೂ ಪುಣ್ಯತಿಥಿಯಂದು ಹಲವು ಜನಪರ ಕೆಲಸಗಳನ್ನು ಅಭಿಮಾನಿ ದೇವರುಗಳು ಮಾಡುತ್ತಿದ್ದಾರೆ. ಅವರಂಥಹ ನಟರು ಸರಳ ಜೀವಿಗಳು, ಹಿರಿಯರಿಗೆ ಗೌರವ ನೀಡುವ, ಕನ್ನಡ ಮಣ್ಣನ್ನು ಪ್ರೀತಿಸುವ ಕಲಾವಿದರು ಇನ್ನು ಮುಂದೆ ಹುಟ್ಟಿ ಬರುವುದು ಕಷ್ಟ. ಆದರೂ ನಾವು ಆಶಾವಾದಿಗಳಾಗೋಣ. ಅಂಥಹ ನಟರು ಮತ್ತೊಮ್ಮೆ ಹುಟ್ಟಿಬರಲಿ ಎಂದು ಆಶಿಸೋಣ.

ಕ್ಷೇತ್ರ ಕಾರ್ಯಕ್ಕೆ ಹೊರಟಾಗ ನನಗೆ ಹಲವು ಸಂಪನ್ಮೂಲ ವ್ಯಕ್ತಿಗಳು ಧಾರಾಳವಾಗಿ ಮುಕ್ತವಾಗಿ ತಮಗೆ ತಿಳಿದಿದ್ದನ್ನೆಲ್ಲಾ ಹೇಳಿ ಆಶೀರ್ವದಿಸಿದ್ದಾರೆ. ಹಲವು ಸಂಘ ಸಂಸ್ಥೆಗಳು ತಮ್ಮಲ್ಲಿದ್ದ ಪುಸ್ತಕಗಳನ್ನು ನನಗೆ ಎರವಲಾಗಿ ನೀಡಿದೆ. ಪ್ರಜಾಬಾಣಿಯಂತಹ ಹಿರಿಯ ಪತ್ರಿಕೆ ಕಛೇರಿಯಿಂದ ನಾನು ಹಲವು ಸಹಾಯ ಪಡೆದಿದ್ದೇನೆ. ಹಲವು ಸಾಹಿತಿಗಳನ್ನು , ನಿರ್ದೇಶಕರನ್ನು, ನಟರನ್ನು, ನಟಿಯರನ್ನು ಪೋಷಕ ಕಲಾವಿದರನ್ನು ನಾನು ಭೇಟಿಯಾಗಿದ್ದೇನೆ. ತಮ್ಮ ತಮ್ಮ ಅನುಭವಕ್ಕೆ ತಕ್ಕ ಹಾಗೆ ಅವರೆಲ್ಲರೂ ನನಗೆ ಸೂಕ್ತ ಸಲಹೆ ಮಾಹಿತಿ ಸೂಚನೆಗಳನ್ನು ನೀಡಿದ್ದಾರೆ.

ರಾಜಣ್ಣನವರೊಂದಿಗೆ ಸಂಶೋಧನೆ ನನಗೆ ಎಂದಿಗೂ ಇದು ಒಂದು ಕೆಲಸ ಅನಿಸಲಿಲ್ಲ. ಇದನ್ನು ಸಂತೋಷವಾಗಿ, ಪ್ರೀತಿಯಿಂದ ಮಾಡಿದ್ದೇನೆ. ನನಗೆ ಚಲನಚಿತ್ರಗಳ ಬಗ್ಗೆ ಇರುವ ಕಡು ಮೋಹವೇ ನನ್ನನ್ನು ಈ ಸಂಶೋಧನೆಗೆ ಪ್ರೇರೇಪಿಸುತ್ತಾ ಈಗಲೂ ನೂರಾರು ವಿಷಯಗಳು ಈ ಸಂಶೋಧನೆಯಲ್ಲಿ ಇನ್ನು ಸೇರಿಸಬಹುದಿತ್ತೇ ಎನಿಸಿದರೂ ಪರಿಧಿಯ ಕಾರಣದಿಂದ ಸೇರಿಸಲಾಗಲಿಲ್ಲ.

ಏಪ್ರಿಲ್ ೨೪ ರಂದು ಇಡೀ ಕರ್ನಾಟಕದಲ್ಲಿ ರಾಜಣ್ಣನವರ ಹುಟ್ಟುಹಬ್ಬವನ್ನು ಸಂತೋಷ ಸಂಭ್ರಮದಿಂದ ಆಚರಿಸಿತ್ತಾರೆ. ಅನ್ನದಾನ, ರಕ್ತದಾನ, ಮುಂತಾದ ಸಮಾಜಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ರಾಜಣ್ಣನವರ ಕಣ್ಣುಗಳು ಇಂದಿಗೂ ಇಬ್ಬರ ಅಂಧರ ಬಾಳಿಗೆ ದಾರಿದೀಪವಾಗಿವೆ.

೨೪ ರಂದು ನಾನು ರಾಜಣ್ಣನವರ ಸಮಾಧಿಗೆ ಭೇಟಿ ನೀಡಿದ್ದೇನೆ. ಅಲ್ಲಿನ ಜನಸ್ತೋಮ ಕಂಡು ಬೆರಗಾದೆ. ಪ್ರತಿ ವರ್ಷ ಸಮಾಧಿ ಸ್ಥಳಕ್ಕೆ ಜನರು ತೀರ್ಥಕ್ಷೇತ್ರದಂತೆ ಭೇಟಿ ನೀಡುತ್ತಾರೆ. ಅಂದು ಅಲ್ಲಿ ದೊಡ್ಡ ಜಾತ್ರೆಯೇ ನೆರೆದಿತ್ತು. ಅವರನ್ನು ನಿಯಂತ್ರಿಸಲು ಪೊಲೀಸರು ಹರಸಾಹಸ ಪಡುತ್ತಿದ್ದರು. ಬೆಳಗಿನ ಜಾವದಿಂದ ರಾತ್ರಿ ೧೨ ರವರೆವಿಗೂ ಜನರು ಬರುತ್ತಿದ್ದರು ಹೋಗುತ್ತಿದ್ದರು. ಇದೇನು ಮೋಡಿರಾಜಣ್ಣನವರು ಮಾಡಿದ್ದಾರೋ ಗೊತ್ತಿಲ್ಲ. ಅಭಿಮಾನಿಗಳ ಉತ್ಸಾಹಕ್ಕೆ ಏನೂ ಕಮ್ಮಿ ಇಲ್ಲ. ದಿನದಿಂದ ದಿನಕ್ಕೆ ಹುಟ್ಟುಹಬ್ಬದ ಜೋರು ಹೆಚ್ಚಾಗುತ್ತಾ ಇದೆ. ಕೇವಲ ಸಿನೆಮಾಗಳಿಂದ ರಾಜಣ್ಣನವರು ಇಷ್ಟೊಂದು ಅಭಿಮಾನಿಗಳನ್ನು ಸಂಪಾದಿಸಿಲ್ಲ. ಅವರ ಸರಳ ನುಡಿ, ಸರಳ ಜೀವನ, ಕನ್ನಡ ನಾಡು, ನುಡಿ ಬಗ್ಗೆ, ಪ್ರೀತಿ ಕಾಳಜಿ ಹಾಗೂ ಕನ್ನಡ ನಾಡಿಗಾಗಿ ದುಡಿಯುವ ಹೋರಾಡುವ ಗುಣದಿಂದ ಅಪಾರ ಅಭಿಮಾನಿ ಬಳಗವನ್ನು ಹೊಂದಿದ್ದಾರೆ. ಅಭಿಮಾನಿಗಳು ಸಹಾ ಅಭಿಮಾನಿ ಬಳಗ ಮೂಲಕ ಹಲವು ಜನಪರ ಕಾರ್ಯಕ್ರಮಗಳನ್ನು ಮಾಡುತಿದ್ದಾರೆ. ಇದು ಸದಾ ಕಾಲ ಹೀಗೆಯೇ ಮುಂದುವರೆಯಲಿ.

ನನ್ನ ಸಂಶೋಧನೆಯ ಹಾದಿಯಲ್ಲಿ ಎಲ್ಲಿ ಹೋಗಲಿ, ಯಾರನ್ನು ಭೇಟಿ ಮಾಡಲಿ ರಾಜಣ್ಣನವರ ಬಗ್ಗೆ ಜನ ಎಷ್ಟು ಉತ್ಸಾಹಿತರಾಗಿರುತ್ತಿದ್ದರು ಎಂದರೆ ಅವರನ್ನು ತಡೆಯುವುದು ಅರ್ಧಕ್ಕೆ ನಿಲ್ಲಿಸುವುದು ಕಷ್ಟವಾಗುತ್ತಿತ್ತು. ನಿರಂತವಾಗಿ ಮಾತನಾಡುತ್ತಿದ್ದರು. ೭೦-೮೦ರ ದಶಕದ ವಿಷಯವನ್ನು ನನ್ನ ಮುಂದೆ ಬಿಚ್ಚಿಡುತ್ತಿದ್ದರು, ಭಾವ ಪರವಶರಾಗಿ ಕೆಲವರು ಒಮ್ಮೊಮ್ಮೆ ಅತ್ತಿದ್ದೂ ಉಂಟು. "ಓ ರಾಜಣ್ಣನವರ ಬಗ್ಗೆ ಪುಸ್ತಕ ಬರಿತಿದ್ದೀಯೇನಮ್ಮಾ, ನನ್ನ ಕೇಳು ನಾನು ಎಲ್ಲಾ ಹೇಳ್ತೀನಿ ಅವರ ಜೊತೆ ೨೦-೩೦ ಪಿಕ್ಚರ್ ಮಾಡಿದ್ದೇನೆ. ಅವರ ಮಕ್ಕಳನ್ನು ಎತ್ತಿ ಆಡಿಸಿದ್ದೇನೆ, ಅವರಿಗೆ ಮೇಕಪ್ ಮಾಡಿದ್ದೇನೆ, ಹಾಗೆ ಹೀಗೆ ಎನ್ನುತ್ತಾ ತಮ್ಮ ನೆನಪಿನ ಬುತ್ತಿಯನ್ನು ಕೆಲವರು ಬಿಚ್ಚಿಡುತ್ತಿದ್ದರು. ಆಟೋ ಡ್ರೈವರ್‌ನಿಂದ ಹಿಡಿದು ಜ್ಞಾನಪೀಠ ಪುರಸ್ಕೃತ ಚಂದ್ರಶೇಖರ ಕಂಬಾರರ ವರೆಗೆ ರಾಜ್‌ಕುಮಾರ್ ಅವರ ಬಗ್ಗೆ ನನಗೆ ರಾಜಣ್ಣನವರ ಕೊಡುಗೆಗಳ ಬಗ್ಗೆ ತಿಳಿಸಿದ್ದಾರೆ. ಕೆಲವರು ಅತಿಯಾಗಿ ಹೊಗಳಿದ್ದಾರೆ. ಕೆಲವರು ವಿಮರ್ಶೆ ಮಾಡಿದ್ದಾರೆ. ಇನ್ನು ಕೆಲವರು ಟೀಕೆ ಸಹಾ ಮಾಡಿದ್ದುಂಟು. ರಾಜಣ್ಣನವರ ಸಿನೆಮಾದ ಹಾದಿಯಲ್ಲಿ ಎಲ್ಲಾ ಕಡೆ ಹೂರಾಶಿ ಇತ್ತು ಎನ್ನುವುದು ಸುಳ್ಳು. ಅವರ ಸಾಧನೆಯ ಹಾದಿಯಲ್ಲಿ ಕಷ್ಟ, ನೋವು, ದು:ಖ, ಕಣ್ಣೀರು, ಅವಮಾನ, ವ್ಯಂಗ್ಯ, ಅವಹೇಳನೆ ಮುಂತಾದವನ್ನು ಅವರು ಕೇಳಬೇಕಾಯಿತು. ಕೆಲವು

ಸಿನೆಮಾಗಳು ಗಲ್ಲಾ ಪೆಟ್ಟಿಗೆಯಲ್ಲಿ ಸೋತಾಗ ಅದನ್ನು ಅವರು ಸ್ವೀಕರಿಸಿದ ರೀತಿ ಮತ್ತೆ ಮತ್ತೆ ಸಿನೆಮಾದತ್ತ ಅವರು ಹೊರಳಿ ಹೊಸ ಉತ್ಸಾಹದಿಂದ ಹೊಸ ಕಥೆಗಳನ್ನು ಹುಡುಕುತ್ತಾ ಅವರು ಆಳಿದ ಕನ್ನಡ ಸಿನೆಮಾ ಸಾಮ್ರಾಜ್ಯ ಬಹಳ ದೊಡ್ಡದು. ಅಲ್ಲಿ ರಾಜಣ್ಣನವರು ಸಾಮ್ರಾಟನಂತೆ ಮೆರೆದಿದ್ದಾರೆ. ಆ ಸಾಮ್ರಾಜ್ಯಕ್ಕೆ ಈಗಲೂ ಅಂತಹ ಒಬ್ಬ ನಟ ಬರಲಿಕ್ಕೆ ಆಗಲಿಲ್ಲ ಎನ್ನುವುದು ಸತ್ಯ. ೮೦-೯೦ರ ದಶಕದಲ್ಲಿ ತಮ್ಮ ಮಗ ಶಿವರಾಜ್‌ಕುಮಾರ್ ನಾಯಕ ನಟನಾಗಿ ಬಂದು ಸಿನೆಮಾದಲ್ಲಿ ಮಿಂಚತೊಡಗಿದರು. ಅದೇ ಕಾಲಕ್ಕೆ ಅವರು ಸಹ ನಾಯಕರಾಗಿಯೇ ಮುಂದುವರೆದು ಸಿನೆಮಾವನ್ನು ಮುನ್ನಡೆಸುತ್ತಾರೆ. ಪ್ರೀತಿಯ ಅಜ್ಜ ಎನಿಸಿಕೊಂಡ ಮೇಲೂ ವಯೋ ಸಹಜ ಖಾಯಿಲೆಗಳಾದ ಮಂಡಿ ನೋವು, ಕೂದಲು ಉದುರುವುದು, ಗಡ್ಡ ಮೀಸೆ ಬೆಳ್ಳಗಾಗುವುದು, ಮುಂತಾದವನ್ನು ರಾಜಣ್ಣನವರು ಸಹಾ ಕಂಡಿದ್ದಾರೆ. ಆದರೆ ಇದ್ಯಾವುದೂ ಅವರ ಸಾಧನೆಯ ಹಾದಿಗೆ ತೊಡಕಾಗಲಿಲ್ಲ. ೭೭ನೇ ವಯಸ್ಸಿನಲ್ಲಿಯೂ ಅವರ ಕುಗ್ಗದ ಉತ್ಸಾಹ ಎಂಥಹ ಮೈಕಟ್ಟು, ಸಪೂರ ಶರೀರ, ಮುಖದ ಕಾಂತಿ, ವಿನಯ ಮಂದಸ್ಮಿತ ನಗೆ ಈ ಕಾರಣಗಳಿಂದಲೇ ಕೊನೆಯ ಘಳಿಗೆಯವರೆವಿಗೂ ಅವರು ನವ ತರುಣರಂತೆ ಕಂಗೊಳಿಸುತ್ತಿದ್ದರು. ಸಾಹಿತಿಗಳಿಗೆ ಅಪಾರ ಗೌರವ ಕೊಡುತ್ತಿದ್ದರು. ಮನೆಯಿಂದ ಹೊರಡುವಾಗ ತಂದೆಯ ತಾಯಿಯ ಫೋಟೋಗೆ ನಮಸ್ಕರಿಸುತ್ತಿದ್ದರು. ತಾಯಿಯನ್ನು ಬಹಳ ಪ್ರೀತಿ ಗೌರವಗಳೊಂದಿಗೆ ನಡೆಸಿಕೊಳ್ಳುತ್ತಿದ್ದರು. ಸ್ತ್ರೀಯರೆಂದರೆ ಬಹಳ ಗೌರವ. ಎಂಥಹ ಮಂಡಿನೋವಿದ್ದರೂ, ಶಸ್ತ್ರಚಿಕಿತ್ಸೆಯಿಂದ ಬಳಲಿದರೂ ಬತ್ತದ ಅವರ ಸಿನೆಮಾ ಉತ್ಸಾಹ ಮೆಚ್ಚತಕ್ಕದ್ದು. ಬರಗೂರು ರಾಮಚಂದ್ರಪ್ಪನವರು ಹೇಳುವಂತೆ ಅವರು ರಾಜರಾಗದೆ ಕುಮಾರರಾಗಿ ಉಳಿದರೂ ರಾಜಕೀಯದಿಂದ ದೂರ, ಅನ್ಯ ಭಾಷೆಯ ಸಿನೆಮಾಗಳಿಂದ ದೂರ, ತಾವಾಯಿತು ತಮ್ಮ ಸಿನೆಮಾ ಆಯಿತು ಎಂಬಂತೆ ಬದುಕಿದರು.

## ಅಧ್ಯಯನದ ಫಲಿತಗಳು :

೧. ಕನ್ನಡ ಭಾಷೆಯನ್ನು ಕರ್ನಾಟಕದ ಆಚೆಗೆ ವಿಸ್ತರಿಸಿದ್ದು ಸಿನಿಮಾಕ್ಷೇತ್ರವಾಗಿದೆ. ಈ ನಿಟ್ಟಿನಲ್ಲಿ ಡಾ.ರಾಜ್‌ಕುಮಾರ್ ಅವರ ಪ್ರಭಾವದಿಂದ ಕನ್ನಡ ಸಿನಿಮಾಗಳು ಬೇರೆ ಭಾಷೆಯಲ್ಲಿ ನಿರ್ಮಾಣಗೊಂಡಿವೆ. ಆದರೆ ಅನ್ಯಭಾಷೆಯಲ್ಲಿ ಇರುವ ಸಂಸ್ಕೃತಿಯನ್ನು ಕನ್ನಡದಲ್ಲಿ ಪಜ್ಞಾಪೂರ್ವಕವಾಗಿ ತರದೇ ನಮ್ಮ ಜಾನಪದ ಸಂಸ್ಕೃತಿಯನ್ನು ಎತ್ತಿ ಹಿಡಿದಿರುವುದನ್ನು ಕಾಣಬಹುದಾಗಿದೆ. ಈ ಪ್ರಯತ್ನವನ್ನು ರಾಜ್ ಅವರ ಸಿನಿಮಾಗಳ ಮೂಲಕ ಕನ್ನಡಿಗರಿಗೆ ತೋರಿಸುವ ಪ್ರಯತ್ನ ಅವರ ಚಿತ್ರಗಳಲ್ಲಿ ಕಾಣಸಿಗುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೨. ಕನ್ನಡ ನಾಡು-ನುಡಿಗಳ ಹಿತಾಸಕ್ತಿಗಳಿಗೆ ಧಕ್ಕೆ ಒದಗಿದ ಸಂದರ್ಭದಲ್ಲಿ ರಾಜ್ ಅವರು ಜಾನಪದದ ಸಮಷ್ಟಿ ಶಕ್ತಿಯನ್ನು ಎಚ್ಚರಿಸಿದ್ದಾರೆ. ಹಾಗೆಯೇ ಸ್ವರಕ್ಷಣೆಗೆ ಸಜ್ಜಾಗುವಂತೆ ಜನರನ್ನು ಹುರಿದುಂಬಿಸಿದ್ದಾರೆ. ಇಲ್ಲಿ ಜಾತಿ ಮತ್ತು ವೃತ್ತಿ, ಆಚಾರ-ವಿಚಾರಗಳ ನಿಮಿತ್ತವಾಗಿ ಸಮಾಜದಲ್ಲಿ ಇರುವ ತಾರತಮ್ಯತೆಯನ್ನು ಜಾನಪದದ ತಿಳವಳಿಕೆಯ ಭಾಗವಾಗಿ ಚಲನಚಿತ್ರಗಳ ಮೂಲಕ ಜನರಲ್ಲಿ ಒಗ್ಗಟ್ಟಿನ ಶಕ್ತಿಯನ್ನು ಮೂಡಿಸಿ ಐಕ್ಯತೆಯ ಭಾವನೆಯನ್ನು ತರುವಲ್ಲಿ ಅವರ ಚಿತ್ರಗಳು ಯಶಸ್ವಿಯಾಗಿರುವುದನ್ನು ಈ ಅಧ್ಯಯದಿಂದ ಕಂಡುಕೊಳ್ಳಲಾಗಿದೆ.

೩. ಡಾ.ರಾಜ್ ಅವರ ಸಿನಿಮಾಗಳು ಸಮಾಜದ ಚೌಕಟ್ಟನ್ನು ಮೀರದೇ ಸಮಾಜದ ವ್ಯವಸ್ಥೆಯನ್ನು ಪ್ರಶ್ನಿಸಿವೆ. ಸಮಾಜದಲ್ಲಿನ ಅನ್ಯಾಯ, ಅಸಮಾನತೆ, ದಬ್ಬಾಳಿಕೆ, ಮೋಸ, ವಂಚನೆ ಮುಂತಾದವುಗಳ ವಿರುದ್ಧ ತಾತ್ವಿಕವಾದ ವಿರೋಧಾಭಾಸದ ನೆಲೆಯಲ್ಲಿ ಪ್ರತಿಭಟಿಸಿವೆ. ಸತ್ಯ, ನಂಬಿಕೆ, ಆದರ್ಶ, ನ್ಯಾಯ-ನೀತಿ, ಧರ್ಮ ಮತ್ತು ಮಾನವೀಯತೆಗೆ ಒತ್ತು ಕೊಡುವ ಮೂಲಕ ಜಾನಪದದ ಪ್ರಮುಖ ಧ್ಯೇಯ ಅಂಶಗಳನ್ನು ಒತ್ತಿಹೇಳಿವೆ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೪. ಡಾ.ರಾಜ್ ಅವರ ಸಿನಿಮಾಗಳು ೬೦-೭೦ರ ದಶಕದ ಸಾಮಾಜಿಕ ಸ್ಥಿತಿಗತಿಯನ್ನು ತೋರಿಸುವಲ್ಲಿ ವಿಫಲವಾಗಿವೆ. ಏಕೆಂದರೆ ಭಯ, ಭಕ್ತಿ, ಪೌರಾಣಿಕ, ಜಾನಪದ ವಸ್ತುಗಳ ನೆಲೆಯಲ್ಲಿ ನಿರೂಪಿಸಿವೆ. ಆದರೆ ವಾಸ್ತವ ಸಮಾಜದಲ್ಲಿನ ಅನೇಕ ದಲಿತ ಹಾಗೂ ಮಹಿಳಾ ಹೋರಾಟಗಳ ನೆಲೆಯಲ್ಲಿ

ವಸ್ತುಗಳನ್ನು ಸಿನಿಮಾಗಳಲ್ಲಿ ತರುವ ಪ್ರಯತ್ನದಲ್ಲಿ ವಿಫಲವಾಗಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೫. ಸ್ವಾತಂತ್ರ್ಯಪೂರ್ವ ಕಾಲದಿಂದಲೂ ಮಹಿಳೆಯನ್ನು ನಾಲ್ಕು ಗೋಡೆಗಳ ನಡುವೆಯೇ ಕೂಡಿಡುವಂತಹ ಪರಿಸ್ಥಿತಿಯನ್ನು ಕಾಣಬಹುದಾಗಿದ್ದು, ಡಾ.ರಾಜ್ ಅವರ ಸಿನಿಮಾಗಳಲ್ಲಿನ ಸ್ತ್ರೀ ಪಾತ್ರಗಳು ನೈತಿಕವಾದ ಸ್ವತಂತ್ರ್ಯವನ್ನು ಮಾತ್ರ ಪಡೆಯುವ ಹಕ್ಕನ್ನು ಮಾತ್ರ ಹೊಂದಿವೆ. ಸಾಮಾಜಿಕ ವ್ಯವಸ್ಥೆಯ ಕಟ್ಟುಪಾಡುಗಳನ್ನು ಮೀರುವ ಸಹಜ ಗುಣವನ್ನು ಹೊಂದಿಲ್ಲವೆಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೬ ಸಾಹಿತಿಗಳು, ಇನ್ನಿತರ ಕ್ಷೇತ್ರಗಳಲ್ಲಿನ ಗಣ್ಯರನ್ನು ಸೇರಿದಂತೆ ಇಡೀ ಕರ್ನಾಟಕದ ಜನರ ನಿಲುವು ರಾಜ್‌ರನ್ನು ಕುರಿತಂತೆ 'ವಿಶ್ವಮಾನವ' ಸಂದೇಶವನ್ನು ನೀಡುವಂತಹ ಚಿತ್ರಗಳ ಮೂಲಕ ಜನಮಾನಸವಾಗಿದ್ದಾರೆ. ರಾಜ್ ಅವರ ವಾಸ್ತವ ಬದುಕಿಗೂ ಮತ್ತು ಸಿನಿಮಾ ಬದುಕಿಗೂ ಸಾಮ್ಯತೆಯನ್ನು ಕಾಣಲು ಸಾಧ್ಯವಾಗಿದೆ. ಅವರಲ್ಲಿ ಪ್ರೀತಿ, ವಾತ್ಸಲ್ಯ, ಮಮತೆ ಹಾಗೂ ಅವರನ್ನು ನಂಬಿದ ಅಭಿಮಾನಿಗಳನ್ನು ಕುರಿತು "ಅಭಿಮಾನಿ ದೇವರುಗಳು" ಎಂದು ಸಂಭೋದಿಸಿದ್ದು ಅವರ ವ್ಯಕ್ತಿತ್ವವನ್ನು ಕುರಿತು ತಿಳಿಸಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೭ ರಾಜ್ ಅವರ ಚಲನಚಿತ್ರಗಳು ಸಮಾಜಮುಖಿಯಾಗಿ ಜನರಲ್ಲಿ ಜಾಗೃತ ಪ್ರಜ್ಞೆಯನ್ನು ಮೂಡಿಸಿವೆ. ಜನರು ಹಳ್ಳಿಗಳನ್ನು ಬಿಟ್ಟು ನಗರದ ಕಡೆಗೆ ಹೊರಟು ಇಡೀ ಜಾನಪದದ ಹಿನ್ನೆಲೆಯಲ್ಲಿ ಇದ್ದಂತಹ ಸಾಮುದಾಯಿಕ ಪರಿಕಲ್ಪನೆಯನ್ನು ಮೀರಿ ಹೋಗುವಂತಹ ಪರಿಸ್ಥಿತಿ ಇದ್ದ ಸಂದರ್ಭದಲ್ಲಿ ಅವರ ಚಿತ್ರಗಳು ಮತ್ತೆ ಜನರಲ್ಲಿ ಹಳ್ಳಿಯ ಬದುಕಿನ ಮಹತ್ವವನ್ನು ತಿಳಿಸುವುದರ ಮೂಲಕ ಮರಳಿ ಹಳ್ಳಿಗೆ ಎಂಬಂತಹ ಅಭಿಯಾನವನ್ನು ಮೂಡಿಸಲು ಸಾಧ್ಯವಾಗಿದ್ದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೮. ಸ್ವಾವಲಂಬಿ ಬದುಕನ್ನು ನಿರ್ವಹಿಸಬೇಕೆಂಬುದರ ಜೊತೆಗೆ ಇಡೀ ಕುಟುಂಬದ ಹೊಣೆಯನ್ನು ನಿರ್ವಹಿಸಬೇಕೆಂಬ ನೈತಿಕವಾದ ಪಾಠವನ್ನು ಕಲಿಸಿವೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಸಂಬಂಧಗಳ ಮಹತ್ವವನ್ನು ಸಾರುವ ನೆಲೆಯಲ್ಲಿ ಅವರ ಚಿತ್ರಗಳು ತಾಳಿದ ನಿಲುವನ್ನು ಪ್ರಸ್ತುತ ಅಧ್ಯಯನದಲ್ಲಿ ಜಾನಪದದ ಹಿನ್ನೆಲೆಯಿಂದ ಕಂಡುಕೊಳ್ಳಲಾಗಿದೆ.

# ಗ್ರಂಥಸೂಚಿ :

**ಕನ್ನಡ ಗ್ರಂಥಗಳು :**


೧. ಅಂಬಳಿಕೆ ಹಿರಿಯಣ್ಣ. ಜನಪದ ಸಮಾಗಮ, ಸಿರಾ ಪಬ್ಲಿಷಿಂಗ್ ಹೌಸ್. ಮೈಸೂರು.

೨. ಅರುಣ್ ಮೋಹನ, ನಮ್ಮ ರಾಜಕುಮಾರ್, ೨೦೧೦, ನುಡಿ ಪುಸ್ತಕ.

೩. ಅನಂತನಾಗ್, ನನ್ನ ತಮ್ಮ ಶಂಕರ, ನಳಂದ ಮಂಟಪ

೪. ಅನಂತರಾವ್. ಹೆಚ್.ಕೆ., ಆಗುಂತಕ, ಸಪ್ನ ಬುಕ್ ಹೌಸ್.

೫. ಅನುಬೆಳ್ಳಿ, ಚಿತ್ರೀಕರಣದ ಸುತ್ತಮುತ್ತ– ಮೆಷಮಿ ಪ್ರಕಾಶನ– ಬೆಂಗಳೂರು.

೬ ಅಪ್ಪಾಸ್ವಾಮಿ, ಕನ್ನಡದ ಮೆಚ್ಚಿನ ನಟ ಡಾ. ರಾಜ್‌ಕುಮಾರ್, ಸಾಯಿನಾಥ್ ಪ್ರಕಾಶನ– ಮೈಸೂರು.

೭ ಅಯ್ಯರ್. ಜಿ.ವಿ., ಬನ್ನಂಜೆ ಗೋವಿಂದಾಚಾರ್ಯ, ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು.

೮. ಆರ್.ಬಿಜಿ. ನಮ್ಮ ಚಿತ್ರ ಸಾಹಿತಿಗಳು, ಮಹರ್ಷಿ ಪ್ರಕಾಶನ, ಮೈಸೂರು.

೯. ಇಂದಿರಾ.ಎಂ.ಕೆ., ಕನ್ನಡ ಚಿತ್ರಶಿಲ್ಪ– ಪುಟ್ಟಣ್ಣ ಕಣಗಾಲ್, ಹೇಮಂತ ಸಾಹಿತ್ಯ, ಬೆಂಗಳೂರು.

೧೦. ಕಿವಿರಾಯ ಐತಾಳ, ದಕ್ಷಿಣ ಕನ್ನಡದ ಜನಪದ ಸಾಹಿತ್ಯ, ಮೈಸೂರು.

೧೦. ಗಣಪತಿ.ಬಿ., ಕನ್ನಡದ ಮುತ್ತಿನ ಕಥೆ, ೨೦೦೬.ಸಿನಿಮಾ ಸಾಹಿತ್ಯ ಪ್ರಕಾಶನ.

೧೧. ಗಂಗಧರ ಮೊದಲಿಯಾರ್, ಕನ್ನಡ ಸಿನಿಮ – ಇತಿಹಾಸದ ಪುಟದಲ್ಲಿ, ೧೯೯೮, ಕನ್ನಡ ಪುಸ್ತಕ ಪ್ರಾಧಿಕಾರ.

೧೨. ಗೋವಿಂದಯ್ಯ ಟಿ., ಡಾ. ರಾಜ್‌ಕುಮಾರ್, ಉಷಾ ಗ್ರಾಫಿಕ್ಸ್

೧೩. ಗೌರಿ ಸುಂದರ್ & ಜಗನ್ನಾಥ ಬಹುಳೆ.ಎಸ್.,(ಸಂ), ರಾಜಾಂತರಂಗ, ಸುಂದರ ಪ್ರಕಾಶನ, ೨೦೦೯.

೧೪. ಚಿರಂಜೀವಿ, ಕನ್ನಡ ಚಲನಚಿತ್ರ ಪತ್ರಿಕೋದ್ಯಮ ನಡೆದು ಬಂದ ದಾರಿ, ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್.

೧೫. ಜಗನ್ನಾಥ್ ಬಹುಳೆ.ಎಸ್., ವರನಟ, ಸಿನಿಮಾ ಸಾಹಿತ್ಯ ಪ್ರಕಾಶನ. ಬೆಂಗಳೂರು, ೨೦೦೬.

೧೬. ಜಗನ್ನಾಥ್ ಬಹುಳೆ.ಎಸ್., ಅಮರ ಚೇತನ, ಸಿನಿಮಾ ಸಾಹಿತ್ಯ ಪ್ರಕಾಶನ. ಬೆಂಗಳೂರು, ೨೦೦೯.

೧೭ ಜಗನ್ನಾಥ್ ಬಹುಳೆ.ಎಸ್., ಡಾ. ರಾಜ್‌ಕುಮಾರ್ ದಂತ ಕಥೆ, ಸಿನಿಮಾ ಸಾಹಿತ್ಯ ಪ್ರಕಾಶನ. ಬೆಂಗಳೂರು, ೨೦೧೦.

೧೮. ಜಗನ್ನಾಥ್ ಬಹುಳೆ.ಎಸ್., ರಾಜಾಯಣ, ಸಿನಿಮಾ ಸಾಹಿತ್ಯ ಪ್ರಕಾಶನ. ಬೆಂಗಳೂರು, ೨೦೦೯.

೧೯. ಜಗನ್ನಾಥ್ ಬಹುಳೆ.ಎಸ್., ರಾಜ್ ನೀತಿ, ೨೦೧೨. ಸಾಧನಾ ಮುದ್ರಣಾಲಯ.

೨೦. ಜನುಮದ ಜೋಡಿ– ನಾಗಾಭರಣ ಚಿತ್ರಕಥಾ ಮಾಲಿಕೆ– ಭಾಗ–೩ – ಸಿರಿವರ ಪ್ರಕಾಶನ.

೨೧. ಜೋಗಿ, ಕಥೆ, ಚಿತ್ರಕಥೆ, ಸಂಭಾಷಣೆ, ಸಾವನ್ನ ಪ್ರಕಾಶನ.

೨೨. ತಲ್ವಾಡಿ.ಬಿ.ಎಸ್(ಸಂ)., ಜಾನಪದ ಜೋಗಿ – ಡಾ. ಪಿಕೆ. ರಾಜಶೇಖರ– ಅಭಿನಂದನ ಗ್ರಂಥ, ಮೈಸೂರು. ಕೃಷ್ಣಮೂರ್ತಿ, ಕವಿಮಾರ್ಗ ಪ್ರಕಾಶನ , ಕಲ್ಬುರ್ಗಿ

೨೩. ದೊಡ್ಡ ಹುಲ್ಲೂರು ರುಕ್ಕೊಜಿ, ಡಾ॥ ರಾಜ್‌ಕುಮಾರ್ – ಸಮಗ್ರ ಚರಿತ್ರೆ, ಪ್ರೀತಿ ಪುಸ್ತಕ ಪ್ರಕಾಶನ.

೨೪. ಕೆ.ಪಿ. ನಾಗರಾಜ್, ವರನಟ, ಡಾ॥ ರಾಜ್ ಕುಮಾರ್ ಯೋಗ ದೀಪಿಕಾ, ೨೦೧೧. ಗಂಗಾಶ್ರೀ ಪ್ರಕಾಶನ.

೨೫. ನಾಗರಾಜ್.ವಿ., ಡಾ॥ ರಾಜ್ ಕುಮಾರ್ – ಸಿನಿಮಾ, ಬದುಕು, ಸಾಧನೆ, ಸಿನಿಮಾ ಸಾಹಿತ್ಯ ಪ್ರಕಾಶನ.

೨೬. ನಾಗೇಂದ್ರರಾವ್.ಆರ್.ಎಂ., ಚಲನಚಿತ್ರ ನಿರ್ದೇಶನದ ಕೈಪಿಡಿ, ಪ್ರಥಮ ಪ್ರಕಟಣೆ, ತಮ್ಮಣ್ಣ ದಾವಣೆ, ತುಮಕೂರು.

೨೭. ನಾಗೇಂದ್ರರಾವ್.ಆರ್., ಇದು ನನ್ನ ಕಥೆ, ಕಲಾ ಸಾಹಿತ್ಯ ಪ್ರಕಾಶನ ಬೆಂಗಳೂರು

೨೮. ನಾಗರಾಜ್ ರಾವ್ ಕಿಲ್ಕಟ್ಟೆ.ಹೆಚ್.ಎಂ. ಪಿ. ಕಾಳಿಂಗರಾವ್, ಕನ್ನಡ ಸಂಘ ಕಾಂತಾವರ

೨೯. ನಂಜುಂಡಯ್ಯ.ಸಿ.ಎಸ್, ಅಮ್ಮ ಪಂಡರೀಬಾಯಿ – ಬದುಕು ಬರಹ , ಅಬಿರುಚಿ ಪ್ರಕಾಶನ ಶಿವಮೊಗ್ಗ.

೩೦. ನಂಜುಂಡಯ್ಯ.ಸಿ.ಎಸ್., ಅಭಿನಯ ಸವ್ಯಸಾಚಿ – ಹೆಚ್.ಎಲ್.ಎನ್. ಸಿಂಹ– ಅಭಿರುಚಿ ಪ್ರಕಾಶನ– ಶಿವಮೊಗ್ಗ.

೩೧. ನಿಖಿತಾ ಅದವೀಶಯ್ಯ, ವೈಶಾಲಿ ಕಾಸರವಳ್ಳಿ, ಪಂಚಮಿ ಮೀಡಿಯಾ ಪಬ್ಲಿಕೇಷನ್

೩೨. ಪದ್ಮನಾಭ್.ಎನ್.ಕೆ. ಅನನ್ಯ ಹಾದಿಯ ಹೆಜೆಗಳು, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು.

೩೩. ಪರಮಶಿವಯ್ಯ.ಜಿ.ಎಂ., ಕನ್ನಡ ವೃತ್ತಿ ಗಾಯಕ ಡಾ. ವ. ಗು. ಸಾಗರ ಪ್ರಕಾಶನ, ಬೆಂಗಳೂರು.

೩೪. ಪ್ರವೀಣ್ ಎನ್. ಶಂಕರ, ಈ ಹೆಸರೇ ಅದ್ಭುತ, ಜಾನಕಿ ಕ್ರಿಯೇಷನ್ಸ್

೩೫. ಪ್ರಹ್ಲಾದರಾವ್.ಅ.ನಾ., ಬೆಳ್ಳಿತೆರೆ ಬೆಳಗಿದವರು – ಅಭಿನಂದನ ಗ್ರಂಥ, ಸಿನೆಮಾ ಸಾಹಿತ್ಯ ಪ್ರಕಾಶನ

೩೬. ಪುನೀತ್ ರಾಜ್‌ಕುಮಾರ್, ವ್ಯಕ್ತಿತ್ವದ ಹಿಂದಿರುವ ವ್ಯಕ್ತಿ, ೨೦೧೨. ಪ್ರಕೃತಿ ಎನ್. ಬನವಾಸಿ ಪ್ರಗತಿ ಆಫ್‌ಸೆಟ್ ಪ್ರೈ. ಲಿ., ಹೈದರಾಬಾದ್, ಪಾರ್ವತಮ್ಮ ಪ್ರಕಾಶನ.

೩೭. ಪ್ರವೀಣ್ ನಾಯಕ್.ಕೆ., ರಾಜ್‌ಕುಮಾರ್ ಒಂದು ಬೆಳಕು, ಜೂಮ್ ೨ ಪಬ್ಲಿಕೇಷನ್ಸ್, ೨೦೧೧

೩೮. ಪ್ರವೀಣ್, ಅಣ್ಣಾವ್ರ ಆದರ್ಶ ನಮಗೆ ಪ್ರಶಸ್ತ– ೨೦೧೨. ತನಿಷ್ಕ ಪ್ರಕಾಶನ.

೩೯. ಪ್ರಸನ್ನ.ಎಸ್.ಎನ್., ಚಿತ್ರಕಥೆ, – ಚಿಂತನ ಪುಸ್ತಕ ಪ್ರಕಾಶನ

೪೦. ಪ್ರಹ್ಲಾದರಾವ್.ಅ.ನಾ., ಬಂಗಾರದ ಮನುಷ್ಯ, ೨೦೦೫, ಧೃತಿ ಪ್ರಕಾಶನ.

೪೧. ಪ್ರಹ್ಲಾದರಾವ್.ಅ.ನಾ., ಡಾ॥ ರಾಜ್‌ಕುಮಾರ್, ೨೦೦೯. ಕರ್ನಾಟಕ ಚಲನಚಿತ್ರ ಮಂಡಳಿ

೪೨. ಬರಗೂರು ರಾಮಚಂದ್ರಪ್ಪ, ಸಿನೆಮಾ ಒಂದು ಜನಪದ – ಅಂಕಿತ ಪುಸ್ತಕ

೪೩. ಬರಗೂರು ರಾಮಚಂದ್ರಪ್ಪ(ಸಂ), ಅಮೃತ ಚಿತ್ರ, ೨೦೧೧. ಕರ್ನಾಟಕ ಚಲನಚಿತ್ರ ಮಂಡಳಿ.

೪೪. ಬರಗೂರು ರಾಮಚಂದ್ರಪ್ಪ - ಕನ್ನಡ ಸಾಹಿತ್ಯ ಮತ್ತು ಸಿನೆಮಾ - ವಾರ್ತಾ ಮತ್ತು ಪ್ರಸಾರ ಇಲಾಖೆ.
೪೫. ಬಸವೇಗೌಡ.ಡಿ.ಬಿ., ಬೆಳ್ಳಿತೆರೆಯ ಭಾವಶಿಲ್ಪ, ಪದ್ಮ ಪ್ರಕಾಶನ.
೪೬. ಬಸವೇಗೌಡ.ಡಿ.ಬಿ., ನಾ ಕಂಡ ಪುಟ್ಟಣ್ಣ ಕಣಗಾಲ್, ಪದ್ಮ ಪ್ರಕಾಶನ.
೪೭. ಬಾಲಕೃಷ್ಣ ಕಾಕತ್ಕರ್, ಶಂಕರ್ ನಾಗ್, ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು.
೪೮. ರಂಗಪ್ರಿಯ, ಭಾರತೀಯರ ಹಬ್ಬ ಹರಿದಿನಗಳು, ಭಾರತ ಸಂಸ್ಕೃತಿ ಪ್ರಕಾಶನ, ಬೆಂಗಳೂರು.
೪೯. ರವೀಶ್.ಬೆ.ಗೂ., ಕನ್ನಡ ಚಿತ್ರರಂಗದ ಕಲಶಗಳು, ಜ್ವಾಲಾ ಕ್ರಿಯೇಷನ್ಸ್ , ಬೆಂಗಳೂರು.
೫೦. ರಾಮಕೃಷ್ಣಯ್ಯ.ಎಂ.ವಿ., ರಾಜೇಂದ್ರ ಸಿಂಗ್ ಬಾಬು
೫೧. ರಾಜಶೇಖರ್.ಪಿ.ಕೆ., ಜನಪದ ಮಹಾಭಾರತ, ಲಾವಣ್ಯ ಮುದ್ರಣ, ಬೆಂಗಳೂರು
೫೨. ರಾಜಶೇಖರ್.ಪಿ.ಕೆ., ಮಲೆಯ ಮಹದೇಶ್ವರ, ಸಂಯುಕ್ತ ಪ್ರಕಾಶನ, ಮೈಸೂರು.
೫೩. ರಾಮಕೃಷ್ಣಯ್ಯ.ಎಂ.ವಿ., ಆರ್. ನಾಗೇಂದ್ರರಾವ್, ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು.
೫೪. ವೈದೇಹಿ, ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ, ಪ್ರಿಸಂ ಬುಕ್ ಪ್ರೈ. ಲಿ., ಬೆಂಗಳೂರು.
೫೫. ವಿಜಯಸಾರಥಿ, ಚಿತ್ರ ಶಿಲ್ಪಿ- ಆರ್.ಜಿ. ಪ್ರಿಂಟ್ಸ್ ಲಿಂಕ್ಸ್
೫೬. ವಿಜಯ ನಾರಸಿಂಹ, ಕಲಾ ಪ್ರಪೂರ್ಣ- ಕಣಗಾಲ್ ಪುಟ್ಟಣ್ಣ, ಸುಭಾಷ್ ಪಬ್ಲಿಕೇಷನ್ಸ್
೫೭. ಸತೀಶ(ಸಂ), ಜನಪದ ಕಥನ ಗೀತೆಗಳು, ಈ. ಸತೀಶ ಪ್ರಕಾಶಕರು, ಬೆಂಗಳೂರು.
೫೮. ಸಂಪತ್ ರಾಜ್, ಮುಳುಗುತ್ತಿರುವ ಕನ್ನಡ ಚಿತ್ರರಂಗ, ಕನ್ನಡ ಸಾಹಿತ್ಯ ಪರಿಷತ್.
೫೯. ಸತ್ಯಮೂರ್ತಿ ಆನಂದೂರು, ಸಂಗೀತಾ ಶ್ರೀನಿವಾಸರಾವ್, ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತು.
೬೦. ಸಂಪತ್ ರಾಜ್, ರೀಲು ಔಟ್ - ರೀಲು ಖಾಲಿಯಾಗಿದೆ, ಸಂಜೆ ಮಾತು ಪತ್ರಿಕೆ ಪ್ರಕಾಶನ.
೬೧. ಸಂಗಮೇಶ್ ಬಿರಾದಾರ್, ಜಾನಪದ ಅಲೆಗಳು, -ಗೆಳೆಯರ ಬಳಗ- ಬಾಗಲಕೋಟೆ.
೬೨. ಸುರೇಂದ್ರನಾಥ್(ಅನು), ಸಿನೆಮಾ ಮತ್ತು ವಾಸ್ತವಿಕ, ನೀನಾಸಮ್ ಚಿತ್ರ ಸಮಾಜ, ಹೆಗ್ಗೋಡು.
೬೩. ಸುಬ್ಬಣ್ಣ.ಕೆ.ವಿ., ಚಲನಚಿತ್ರ ಸ್ವರೂಪ ವಿಮರ್ಶೆ
೬೪. ಸುಬ್ಬರಾವ್.ವಿ.ಎನ್. ಮತ್ತು ಇತರರು(ಸಂ), ಪದ್ಮಭೂಷಣ- ಪದ್ಮಭೂಷಣ ಡಾ. ರಾಜ್‌ಕುಮಾರ್ ಅಭಿನಂದನಾ ಸಮಿತಿ, ಬೆಂಗಳೂರು.
೬೫. ಶರತ್ಚಂದ್ರ, ಭಾರತೀಯ ಸಿನೆಮಾ, ಅಕ್ಷರ ಪ್ರಕಾಶನ, ಸಾಗರ.
೬೬. ಶ್ರೀನಿವಾಸ ಮೂರ್ತಿ.ಪಿ.ಜಿ., ಕನ್ನಡ ಚಲನಚಿತ್ರ ರಂಗ, ಸಮುದಾಯ ಸಾಹಿತ್ಯ ಮಾಲೆ, ಕನ್ನಡ ಸಾಹಿತ್ಯ ಪರಿಷತ್ತು,
೬೭. ಶ್ರೀಧರ.ವಿ., ರಜತ ರಂಗದ ಧ್ರುವತಾರೆ, ಮಿನುಗುತಾರೆ ಕಲ್ಪನಾರ ಸಂಸ್ಮರಣಾ ಗ್ರಂಥ, ಶ್ರೀ ವೀರಭದ್ರ ಪ್ರಕಾಶನ- ಮೈಸೂರು.
೬೮. ಶೈಲಜ.ಸಿ.ವಿ.(ಸಂ), ಕನ್ನಡದ ಭಾಗ್ಯ - ಅಂಬರೀಶ್ ಅಭಿನಂದನ ಗ್ರಂಥಥ
೬೯. ಹಂಪ ನಾಗರಾಜಯ್ಯ, ಕೋಲಾಟದ ಪದಗಳು, ಕನ್ನಡ ಸಾಹಿತ್ಯ ಪರಿಷತ್ತು , ಬೆಂಗಳೂರು.

ಇಂಗ್ಲೀಷ್ ಗ್ರಂಥಗಳು :


1. Amandam P Kavoori – Ashwin panathambekar, Global Bollywood – Oxford University
2. Anil Saari., Indian Cinema, Oxford University – Pune.
3. Anjana Roy, Musician of the Soul, Bihaan Music.
4. Annapurna.L., Music and Temples, SdeepPublications, New Delhi.
5. Ashok, Hinell Film Song, Da Ranade- Pronilla Co-publisher
6. Chidananda Das Gupta, The Cinema of SatyajitRoy,– Vikas Publishing house Pvt. Ltd.
7 Dilip Kumar, Bunny –Harper Collins Publishers India.
8. H.N. Narahari Rao, M.K. Raghavendra, Puttanna Kanagal- - ಕರ್ನಾಟಕ ಚಲನಚಿತ್ರ ಪತ್ರಕರ್ತರ ಅಕಾಡೆಮಿ.
9. H.N. Narahari Rao, The Film Society movement, Asian Film Productions Mumbai.
10. Heritage of India – Music – Sharma Prmt west- Jaipur.
11. Jasbir Jam, Films Literature and culture, Rawat Publications.
12. Jasbir Khana, Films and Filmism, Sudha Bai –
13. Kiran Ravindran, The Play back in Malayalam Cinema, Fasio Publication-Trivendrum.
14. M.A. Oommen- K.V. Joseph. Economics of Film Industry in India –The Academic Press – Gurgaon.
15. Nasreen Munni Kabir, Gurudutt – Life of cinema, Oxford University, Pune.
16. Priya Jay Kumar, Cinema at the end of empire, Duke University Press.
17. RaviVasudevan, The Melodramic Public, Permanni Block- Ranikher.
18. Satvik Ray Choudhari,The Cinematic W.W of – Ritwik Kumar Ghatak , Papyrus Publishers.
19. Sreon Munni Kabir, A.R Rehman, Om Books.
20. Saibal Chatterjee- Anwar Jamal, Hollywood – Bollywood, Vani Prakashana
21. Shantha Gokhale(Translated by),I Durga Kote – Biography, Oxford Univeristy – Pune.

22. Utpal K. Bannerjee, Indian Performing Arts, Hunman Publishing house.
23. Indian Cinema through the century Publication divison – Govt. of India.
24. Fok Theatre of India – Rupa Publications – Rupa co.
25. Dr. Rajkummar – the intimate actor with a golden voice – 2008. Sapna Book House (:P) Ltd.

**ಸಂಪನ್ಮೂಲ ವ್ಯಕ್ತಿಗಳು :**

೧. ಚಂದ್ರಶೇಖರ ಕಂಬಾರ – ಜ್ಞಾನಪೀಠ ಪುರಸ್ಕೃತ ಹಿರಿಯ ಸಾಹಿತಿಗಳು.
೨. ಬರಗೂರು ರಾಮಚಂದ್ರಪ್ಪ – ಹಿರಿಯ ಸಾಹಿತಿಗಳು.
೩. ದೊಡ್ಡ ರಂಗೇಗೌಡ – ಹಿರಿಯ ಸಾಹಿತಿಗಳು.
೪. ರಾಘವೇಂದ್ರ ರಾಜ್‌ಕುಮಾರ್ – ಹಿರಿಯ ಕಲಾವಿದರು.
೫. ಜಗನ್ನಾಥರಾವ್ ಬಹುಳ – ಚಿತ್ರ ಸಾಹಿತಿಗಳು.
೬ ಜಗನ್ನಾಥ್ ಪ್ರಕಾಶ್ – ಮಾಜಿ ರಿಜಿಸ್ಟ್ರಾರ್ , ಚಲನಚಿತ್ರ ಅಕಾಡೆಮಿ.
೭ ಮಾಲತಿ ಪ್ರಕಾಶ್ – ಮಾಜಿ ನಾಟಕ ಅಕಾಡೆಮಿಯ ಅಧ್ಯಕ್ಷೆ.
೮. ನರಸಿಂಹ ಮೂರ್ತಿ – ರಿಜಿಸ್ಟ್ರಾರ್ – ಸಂಗೀತ ನೃತ್ಯ ಅಕಾಡೆಮಿ.
೯. ಟಿ.ಎಸ್. ನಾಗಾಭರಣ – ನಿರ್ದೇಶಕರು.
೧೦. ಭಗವಾನ್ – ಹಿರಿಯ ನಿರ್ದೇಶಕರು.
೧೧. ಹೊನ್ನವಳ್ಳಿ ಕೃಷ್ಣ – ರಾಜ್‌ಕುಮಾರ್ ಅಭಿಮಾನಿಗಳು
೧೨. ರಾಜೇಂದ್ರ ಸಿಂಗ್ ಬಾಬು – ಹಿರಿಯ ನಿರ್ದೇಶಕರು, ಅಧ್ಯಕ್ಷರು ಕರ್ನಾಟಕ ಚಲನಚಿತ್ರ ಅಕಾಡೆಮಿ.
೧೩. ನಾಗತಿಹಳ್ಳಿ ಚಂದ್ರಶೇಖರ್ – ಹಿರಿಯ ನಿರ್ದೇಶಕರು.
೧೪. ಸಾ.ರಾ. ಗೋವಿಂದ – ಅಧ್ಯಕ್ಷರು, ಡಾ. ರಾಜ್‌ಕುಮಾರ್ ಅಭಿಮಾನಿಗಳ ಸಂಘ, ಅಧ್ಯಕ್ಷರು, ಕರ್ನಾಟಕ ವಾಣಿಜ್ಯ ಮಂಡಳಿ.
೧೫. ಶ್ರೀಮತಿ. ಭಾಗ್ಯ – ರಿಜಿಸ್ಟ್ರಾರ್– ಕರ್ನಾಟಕ ಸಾಹಿತ್ಯ ಅಕಾಡೆಮಿ.
೧೬. ಶ್ರೀನಿವಾಸ ಜಿ. ಕಪ್ಪಣ್ಣ– ಹಿರಿಯ ರಂಗಕರ್ಮಿಗಳು, ಮಾಜಿ ಅಧ್ಯಕ್ಷರು, ಕರ್ನಾಟಕ ನಾಟಕ ಅಕಾಡೆಮಿ.
೧೭. ಶ್ರೀಮತಿ. ಪಾರ್ವತಮ್ಮ ರಾಜ್‌ಕುಮಾರ್– ನಿರ್ಮಾಪಕರು.
೧೮. ಶಿವರಾಂ – ಹಿರಿಯ ಕಲಾವಿದರು.
೧೯. ಶ್ರೀನಿವಾಸ ಜಿ. ಕಪ್ಪಣ್ಣ – ಹಿರಿಯ ರಂಗಕರ್ಮಿ, ಮಾಜಿ ಅಧ್ಯಕ್ಷರು ಕರ್ನಾಟಕ ನಾಟಕ ಅಕಾಡೆಮಿ.

೨೦. ವಾಟಾಳ್ ನಾಗರಾಜ್ – ಕನ್ನಡ ಹೋರಾಟಗಾರರು.

೨೧. ಅಂಬರೀಶ್– ನಂ. ೧೭೨, ಜೆ.ಪಿ.ನಗರ, ೨ನೇ ಸ್ಟೇಜ್, ಬೆಂಗಳೂರು– ೭೮. ದೂ: ೬೬೯೯೩೯೫೫/ ೬೬೫೨೭೯೧

೨೨. ದೇವರಾಜ್ – ನಂ. ೮೧೯, ೧೯ನೇ ಮುಖ್ಯರಸ್ತೆ, ೧೮ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು ೭೦. ದೂ: ೬೭೧೪೬೮೮.

೨೩. ಜಗ್ಗೇಶ್– ನಂ. ೧೦೬/೩೨, ೧೦ನೇ ಮುಖ್ಯರಸ್ತೆ, ೧೨ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು– ೫೫.

೨೪. ರಾಘವೇಂದ್ರ ರಾಜ್‌ಕುಮಾರ್ , ನಂ. ೨೪೮, ೧೮ನೇ ಕ್ರಾಸ್, ಸದಾಶಿವನಗರ, ಬೆಂಗಳೂರು– ೮೦, ದೂ: ೨೨೫೮೮೭೪, ೨೨೬೧೬೧೦.

೨೫. ರವಿಚಂದ್ರನ್ , ನಂ. ೧೦೦ಬಿ, ರಾಜ್ ರೋಡ್, ೪ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು– ೧೦. ದೂ: ೩೩೫೮೮೯೨.

೨೬. ತಾರಾ – ನಂ. ೨೭೮, ೧೫ನೇ ಕ್ರಾಸ್, ೧೦೦ ಅಡಿ ರಸ್ತೆ, ಜೆ.ಪಿ.ನಗರ, ೫ನೇ ಕ್ರಾಸ್, ಬೆಂಗಳೂರು– ೭೮. ದೂ: ೬೫೯೩೮೩೯.

೨೭. ವಿಷ್ಣುವರ್ಧನ್– ನಂ. ೧೨೦೩/ಎ, ೩೫ನೇ ಕ್ರಾಸ್, ೨೬ನೇ ಮುಖ್ಯರಸ್ತೆ, ೪ನೇ ಟಿ ಬ್ಲಾಕ್, ಜಯನಗರ , ಬೆಂಗಳೂರು– ೧. ದೂ: ೬೫೪೫೬೫೦.

೨೮. ನಾಗತಿಹಳ್ಳಿ ಚಿತ್ರಶೇಖರ್– ನಂ. ೧೬೬, ಸಿಹಿಕನಸು, ೧೭ನೇ ಮುಖ್ಯರಸ್ತೆ, ೨೮ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು– ೭೦. ದೂ: ೬೭೧೫೨೩೫.

೨೯. ಉಪೇಂದ್ರ– ನಂ. ೭, ೧ನೇ ಕ್ರಾಸ್, ೬ನೇ ಮುಖ್ಯರಸ್ತೆ, ಬನಶಂಖರಿ ೩ನೇ ಹಂತ, ಬೆಂಗಳೂರು– ೮೫. ದೂ: ೬೭೯೧೩೫೮.

೩೦. ಬಿ. ಸುರೇಶ– ನಂ. ೧೦೪೬, ೨೫ನೇ ಮುಖ್ಯರಸ್ತೆ, ೧೪ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು ೭೦. ದೂ: ೬೭೧೦೦೬೬.

೩೧. ರಮೇಶ್ ಅರವಿಂದ್ – ನಂ. ೫೨೮, ೧೩ನೇ ಕ್ರಾಸ್, ಬನಶಂಕರಿ ೨ನೇ ಹಂತ, ಅರವಿಂದ್ ಸ್ಕೂಲ್ ಎದುರು, ಬೆಂಗಳೂರು– ೭೦. ದೂ: ೬೭೧೨೦೪೧.

**ಸಂಸ್ಥೆಗಳು :**

೧. ಕನ್ನಡ ಸಾಹಿತ್ಯ ಪರಿಷತ್ತು.

೨. ವಜ್ರೇಶ್ವರಿ ಕಂಬೈನ್ಸ್

೩. ಕರ್ನಾಟಕ ಚಲನಚಿತ್ರ ಅಕಾಡೆಮಿ.

೪. ಕನ್ನಡ ಸಾಹಿತ್ಯ ಅಕಾಡೆಮಿ.

೫. ಕರ್ನಾಟಕ ನಾಟಕ ಅಕಾಡೆಮಿ.

೬. ಬಿ.ಎಂ. ಶ್ರೀ ಪ್ರತಿಷ್ಠಾನ.

೭. ಜಾನಪದ ಲೋಕ

೮. ಕರ್ನಾಟಕ ಚಲನಚಿತ್ರ ವಾಣಿಜ್ಯ ಅಕಾಡೆಮಿ

೯. ಹಂಪಿ ವಿಶ್ವವಿದ್ಯಾಲಯ, ಗ್ರಂಥಾಲಯ ವಿಭಾಗ.

೧೦. ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ.

೧೧. ಕರ್ನಾಟಕ ಜಾನಪದ ಪರಿಷತ್ತು

೧೨. ಕರ್ನಾಟಕ ಜಾನಪದ ಅಕಾಡೆಮಿ

## ಸಂಶೋಧನೆಯ ಹಾದಿಯಲ್ಲಿ ಲೇಖಕಿ



ಹಿರಿಯ ಕಲಾವಿದ ಶ್ರೀ ಶಿವರಾಮ್ ಅವರೊಂದಿಗೆ ಸಂದರ್ಶನ





ಹಿರಿಯ ಪರ್ತಕರ್ತ ಸುಬ್ರಮಣ್ಯಂ ಮತ್ತು ಸಾಹಿತಿಗಳಾದ ರುಕ್ಕೋಜಿರಾವ್ ಅವರೊಂದಿಗೆ



ರಾಜಣ್ಣನವರನ್ನು ಕುರಿತ ಛಾಯಾಚಿತ್ರ ಪ್ರದರ್ಶನ

